ದೇವೀಚೌಧುರಾಣಿ

ana Basayya Hiremath
mutahal.
Belgaum

ಬಿ. ವೆಂಕಟಾಚಾರ್ಯ

ಡೆಕ್ಕನ್ ಹೆರಾಲ್ಡ್ ಮುದ್ರಣಾಲಯ
ಮಹಾತ್ಮಾ ಗಾಂಧೀ ರಸ್ತೆ
ಬೆಂಗಳೂರು—೧
1950

ನ್ನು ಕಾದಿಡಲಾಗಿದೆ ] [ಬೆಲೆ : ರೂ. ೨—೪—೦

# ವಿ ಜ್ಞಾ ಪ ನೆ

ಜಗದ್ವಿಖ್ಯಾತರಾಗಿದ್ದ ಉಪನ್ಯಾಸ ಲೇಖಕಶಿರೋಮಣಿಗ
ಚಂದ್ರಚಟ್ಟೋಪಾಧ್ಯಾಯರವರಿಂದ ರಚಿತವಾಗಿರುವ ಮೂಲಗ್ರ
ಈ ಗ್ರಂಥವು ಪ್ರಚಾರಗೊಂಡಿದೆ. ನಮ್ಮಿಂದ ರಚಿತವಾಗಿರುವ
ಈ ಗ್ರಂಥಕ್ಕೂ ಸ್ವಲ್ಪ ಮಟ್ಟಿಗೆ ಐತಿಹಾಸಿಕ ಮೂಲವುಂಟು.
ವಾಗಿರುವ ದೇವೀಚೌಧುರಾಣಿ, ಭವಾನಿಪಾಠಕ, ಗುಡ್‌ಲ್ಯಾಡ್‌ಸಾ
ವ್ಯಕ್ತಿಗಳು ಚರಿತ್ರೆಗಳಲ್ಲಿ ಉಕ್ತರಾಗಿದ್ದಾರೆ. ಹಂಟರ (Sir W. H
ರವರಿಂದ ರಚಿಸಲ್ಪಟ್ಟು ಗೌರನ್ಮೆಂಟಿನವರಿಂದ ಪ್ರಸಿದ್ಧಪಡಿಸಲ್ಪ
ದೇಶದ ಸ್ಟಾಟಿಸ್ಟಿಕಲ್ ಅಕೌಂಟ್ (Statistical Account)
ರಂಗಪುರದ ಇತಿಹಾಸದಲ್ಲಿ ವಿವೃತವಾಗಿರುವುದನ್ನು ಓದಿದರೆ ವೇ
ಆದರೆ ಆನಂದಮಠವನ್ನಾಗಲೀ, ದೇವೀಚೌಧುರಾಣಿಯನ್ನ
ಮಹಾಶಯರು ಸಂಪೂರ್ಣವಾಗಿ ಚರಿತ್ರೆಯ ಸಂಬಂಧವುಳ್ಳ
ತಿಳಿಯದಿದ್ದರೆ ಬಹಳ ಬಾಧ್ಯಪಡುವೆನು. ಮೂಲಗ್ರಂಥಕರ್ತರ
ಪ್ರಕಾರವಾದುದು.

ದೇವೀಚೌಧುರಾಣಿಯ ಚರಿತ್ರೆಯನ್ನೋದಿದರೆ ಹೆಂಗಸ
ಸಕಲ ಧರ್ಮಾಚರಣೆಯಂತಲೂ ನಿಷ್ಕಾಮ ಧರ್ಮವುಳ್ಳವರಾಗಿ
ರಾಗಿ ಸಂಸಾರವನ್ನು ನಿರ್ವಹಿಸುವುದೇ ಅವರಿಗೆ ಮುಖ್ಯ ಕರ್ತವ್ಯ
ಬಹುದು. ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ
ಐಕ್ಯವಾಗುವುದು.

ಮೈಸೂರು,
1—3—1899

ಬಿ. ವೆ



## ಎರಡನೆಯ ಮುದ್ರಾವರ್ತಿಯ ವಿಜ್ಞಾ

ಎರಡನೆಯ ಮುದ್ರಾವರ್ತಿಯಾದೀ ಸಂಸ್ಕರಣದಲ್ಲಿ ಮು
ಪರಿಶೋಧಿತವಾಗಿ ಗ್ರಂಥವು ವೃದ್ಧಿಗೊಂಡಿದೆ. ಶೈಲಿಯು ಹೊ
ಓದಿದರೆ, ನೂತನ ಗ್ರಂಥವಾಗಿ ತೋರುವುದು. ಕಥೆಯು
ಸಂವಿಧಾನಗಳಿಂದೊಡಗೂಡಿ ಅತಿಸುಂದರವಾಗಿ, ಕರ್ಮಯ
ವನ್ನು ವಿಶದಮಾಡುವುದಲ್ಲದೆ, ನೀತಿಪ್ರಾಧಾನ್ಯವಾಗಿರುವುದು
ಾಗಿಯೂ ಇರುವುದು.

May 1911

## …ನೆಯ ಮುದ್ರ…

…ತ್ತೊಂದು ವರ್ಷಗಳ ಹಿಂದೆಂ…ೀ " ದೇವೀಚೌಧುರಾಣಿ " ಯು ಕನ್ನಡ …ಯ ಒಂದು ಹೂವಾಗಿ ಮೆರೆಯಿತು. ಹನ್ನೆರಡು ವರ್ಷಗಳ ತರು…ತ್ತ ತನ್ನ ಸುಗಂಧವನ್ನು ಬೀರಿತು. ಪುನಃ ತನ್ನ ಪರಿಮಳವನ್ನು …ತ್ತು ವರ್ಷಗಳ ಮೇಲೆ ಹರಡಿತು. ಕನ್ನಡವು ಕಸ್ತೂರಿಯಾದುದರಿಂದ …ಗೆ ಇಪ್ಪತ್ತು ವರ್ಷಗಳ ಮೇಲೆ ಮತ್ತೆ ತನ್ನ ಸ್ವಭಾವ ಗುಣವನ್ನು …ಕಾಶಿಸುತ್ತಿದೆ. ಈ ಹೊಸ ಮುದ್ರಣವು ಹೊರಗೆ ಬರಲು ನಮ್ಮ …ದ್ಯಾನಿಲಯದ ಕನ್ನಡ ವೃಂದದ, ಮುಖ್ಯವಾಗಿ, ಅದರ ಅಧ್ಯಕ್ಷರ …ರಣ. " ದೇವೀಚೌಧುರಾಣಿ " ಯು 1950–51 ರಲ್ಲಿ ಜೂನಿಯರ್ …ರಗತಿಗೆ ಪಠ್ಯ ಪುಸ್ತಕವಾಗಿ ಆರಿಸಲ್ಪಟ್ಟಿದೆ. ದೇಶದಲ್ಲೆಲ್ಲಾ ಬಹು …ರ್ಣವೂ, ಸುವ್ಯವಸ್ಥಿತವಾಗಿಯೂ ಇರುವ " ಡೆಕ್ಕನ್ ಹೆರಾಲ್ಡ್ ಪ್ರೆಸ್ " (… ಲಿಮಿಟೆಡ್) ಬೆಂಗಳೂರು, ಇವರು ಈ ಪುಸ್ತಕವನ್ನು ಅತಿಶೀಘ್ರವಾಗಿ …ಸಿ ಕೊಟ್ಟಿರುತ್ತಾರೆ. ಇವರಿಗೂ ಸರಕಾರದವರಿಗೂ ಮತ್ತು ಪುಸ್ತಕದ … ತಾಳ್ಮೆಯಿಂದ ನಿರೀಕ್ಷಿಸುತ್ತಿರುವ ವಿದ್ಯಾರ್ಥಿ ವೃಂದಕ್ಕೂ, ಇತರ …ವೆ ಕೃತಜ್ಞರಾಗಿರುತ್ತೇವೆ.

ಕೋಟ್ಯಾಂತರ ಕನ್ನಡಿಗರ ಅಭಿಮಾನವನ್ನು ಕೋರುವ

ಆಚಾರ್ಯ ಮತ್ತು ಮೂರ್ತಿ
ಪ್ರಕಾಶಕರು
ಬಿ. ಎಸ್. ಕೆ. ಮೂರ್ತಿ ಮತ್ತು ಸಹೋದರರು
(ಮಾಲೀಕರು)

… ಬಜಾರು,
…ಳೂರು-4,
…ಯೆನ್ಸ್ 1950

ಶ್ರೀ

||ಶ್ರೀಯೈನಮಃ||

# ದೇವೀಚೌಧುರಾಣಿ

——: o :——

## ಮೊದಲನೆಯ ಭಾಗ

——: x :——

## ಮೊದಲನೆಯ ಪರಿಚ್ಛೇದ

ಫುಲ್ಲ! ಎಲೇ, ಪ್ರಫುಲ್ಲ! ಏನಾದೆಯೆ! ಕೆಟ್ಟವೋರೆಯವಳೇ! ಹೋಗುವುದಿಲ್ಲವೇನೆ– ಕರೆದರೂ ಬರಬಾರದೆ?'

ತಾಯಿಯು ಕರೆದಳು. ಹುಡುಗಿಯು ಹತ್ತಿರ ಬಂದಳು. ಬಂದು ...ಮ್ಮ!' ಎಂದಳು.

ತಾಯಿ– ಹೋಗುವುದಿಲ್ಲವೇ? ನೆರಮನೆಗೆ ಹೋಗಿ ಕೇಳಿ ಒಂದೆರಡು ಕಾಯಿಯನ್ನಾದರೂ ತರಬಾರದೆ?

ಪ್ರಫುಲ್ಲಮುಖಿ– ನನ್ನ ಕೈಯಲ್ಲದಾಗುವುದಿಲ್ಲ, ಕೇಳಿ ತರುವುದಕ್ಕೆ ನಾಚಿಕೆ ...ತ್ತದೆ.

ತಾಯಿ– ಹಾಗಾದರೆ ಏನನ್ನು ತಿನ್ನುವೆ? ಇಂದು ಮನೆಯಲ್ಲೇನೂ ಇಲ್ಲ.

ಫುಲ್ಲ– ಇಲ್ಲದಿದ್ದರೆ ಒಳ್ಳೆಯದಾಯಿತು ಬರಿ ಅನ್ನವನ್ನೇ ತಿನ್ನುವೆನು. ...ವೂ ಕಂಡವರ ಮನೆಗೆ ಹೋಗಿ, ಬೇಡಿ ತಂದು, ತಿನ್ನುವುದು ಹೇಗಾ ...?

ತಾಯಿ—ನಾವು ಪಡೆದುಕೊಂಡು ಬಂದುದು. ಬಡತನದಲ್ಲಿ ಬೇಡುವುದಕ್ಕೆ ...ಟ್ಟರೆ ಹೇಗೆ? 'ನಾಚಿಕೆ' ಎಂದರೇನೆ?

ಫುಲ್ಲೆಯು ಮಾತಾಡಲಿಲ್ಲ, ತಾಯಿಯು, 'ಹಾಗಾದರೆ ನೀನು ಒಲೆಯು ...ಪ್ಪಲೆಯನ್ನಿಡು. ನಾನು ಹೋಗಿ ಎಲ್ಲಾದರೂ ಸ್ವಲ್ಪ ತರಕಾರಿಯನ್ನು ...ತಂದು ಬರುವೆನು' ಎಂದಳು.

ಪ್ರಫುಲ್ಲ—ನನ್ನ ಮೇಲಿನ ಆಣೆ. ಬೇಡುವುದಕ್ಕೆ ಹೋಗಬೇಡ. ಯಲ್ಲಿ ಅಕ್ಕಿಯಿದೆ, ಉಪ್ಪಿದೆ, ಗಿಡದಲ್ಲಿ ಮೆಣಸಿನಕಾಯಿಯಿದೆ. ಮತ್ತೆಷ್ಟು ಬೇಕು ; ಇರುವುದು ಸಾಕು.

ತಾಯಿಯು ಯತ್ನವಿಲ್ಲದೆ ಸುಮ್ಮನಾದಳು. ಮಗಳು ಅನ್ನಕ್ಕೆ ಮೇಲೆ ಎಸರಿಟ್ಟಳು. ತಾಯಿಯು ಅಕ್ಕಿಯನ್ನು ತೊಳದುಕೊಂಡು ಹೋದಳು. ಅಕ್ಕಿಯನ್ನು ತೊಳಿಯುವುದಕ್ಕೆ ಮೊರವನ್ನು ಕೈಗೆ ತೆಗೆದು ಎಡಗೈಯನ್ನು ಗಲ್ಲದಮೇಲಿಟ್ಟು, 'ಅಕ್ಕಿಯಿರುವುದೆಷ್ಟು, ನೋಡು!' ಪ್ರಫುಲ್ಲೆಗೆ ಮೊರದಲ್ಲಿದ್ದ ಅಕ್ಕಿಯನ್ನು ತೋರುತ್ತ, 'ಇರುವುದು ಎರಡು ಅದೊಬ್ಬಳ ಹೊಟ್ಟೆಗೂ ಸಾಲದು,' ಎಂದಳು.

ಹೀಗೆಂದು ಹೇಳಿ ತಾಯಿಯು ಮೊರವನ್ನು ತೆಗೆದುಕೊಂಡು ಹೊ ಟಳು. ಪ್ರಫುಲ್ಲೆಯು, 'ಎಲ್ಲಿಗೆ ಹೋಗುತ್ತಿ? ಅಮ್ಮ!' ಎಂದಳು.

ತಾಯಿ—ಸ್ವಲ್ಪ ಅಕ್ಕಿಯನ್ನಾದರೂ ಸಾಲವಾಗಿ ತರುವೆನು. ವಾದರೂ ಹೊಟ್ಟೆತುಂಬ ಬೇಡವೆ?

ಪ್ರಫುಲ್ಲ—ಅಕ್ಕಿಯನ್ನೆಷ್ಟೆಂದು ಸಾಲಮಾಡಿ ತೀರೀತು. ಸಾಲವ ಸುವುದಕ್ಕೆ ಮಾರ್ಗವಿಲ್ಲ. ಪುನಃ ಸಾಲತರಬೇಡ.

ತಾಯಿ—ನಿರ್ಭಾಗ್ಯ ಹೆಣ್ಣೆ! ತಿನ್ನುವುದೇನೆ? ಕೈಯಲ್ಲಿ ಒಂದ ಇಲ್ಲವಲ್ಲ!

ಪ್ರಫುಲ್ಲ—ಉಪವಾಸ ಮಾಡೋಣ.

ತಾಯಿ—ಉಪವಾಸಮಾಡಿ ಎಷ್ಟು ದಿನ ಜೀವದಿಂದಿರುವುದಕ್ಕಾ

ಪ್ರಫುಲ್ಲ—ಇಲ್ಲವಾದರೆ ಪ್ರಾಣಬಿಡೋಣ.

ತಾಯಿ—ನಾನು ಹೋದಮೇಲೆ ಹೇಗಾದರೂ ಮಾಡು. ವಾಸವಿದ್ದರೆ ನಾನು ಕಣ್ಣಿನಿಂದ ನೋಡಿ ಸಹಿಸಲಾರೆ. ಹೇಗಾದರೂ ಭಿಕ್ಷವನ್ನಾದರೂ ಬೇಡಿ ತಂದು, ನಿನಗಷ್ಟು ಅನ್ನವನ್ನಾದರೂ ಹಾಕುವೆ

ಪ್ರಫುಲ್ಲ—ಭಿಕ್ಷಬೇಡುವುದೇಕೆ? ಒಂದುದಿನ ಉಪವಾಸ ಸಾಯರು ; ಬಾ ; ತಾಯಿಯೂ ಮಗಳೂ ಸೇರಿ ಆದಷ್ಟು ನೂಲನ್ನು ಡೋಣ. ನಾಳೆ ಮಾರಿದರೆ ಒಂದೆರಡು ದುಡ್ಡು ಸಿಗುವುದು..

ತಾಯಿ—ನೂಲು ಎಲ್ಲಿದೆ?

ಪ್ರಫುಲ್ಲ—ರಾಟೆಯಿದೆಯಷ್ಟೆ?

ತಾಯಿ—ಹತ್ತಿ ಎಲ್ಲಿದೆ?

ಆಗ ಪ್ರಫುಲ್ಲೆಯು ಅಧೋವದನೆಯಾಗಿ ಅಳತೊಡಗಿದಳು. ಪುನಃ ಮೊರವನ್ನು ತೆಗೆದುಕೊಂಡು ಅಕ್ಕಿಯನ್ನು ಸಾಲ ತರಲು ಪ್ರಫುಲ್ಲೆಯು ತಾಯಿಯ ಕೈಯಿ... ಮೊರವನ್ನು ಕಿತ್ತು ಕೊಂಡು

ಮ್ಮ! ನಾನೇಕೆ ಅಕ್ಕಿಯನ್ನು ಸಾಲತಂದು ತಿನ್ನಬೇಕು? ನನಗೆಲ್ಲಾ ಇದೆ ಲ್ಲಾ?' ಎಂದಳು.

ತಾಯಿಯು ಕಣ್ಣೊರಸಿಕೊಂಡು. 'ಎಲ್ಲಾ ಇದೆ, ಅನುಭವಿಸುವುದಕ್ಕೆ ಷ್ಟವಿಲ್ಲ' ವೆಂದಳು.

ಪ್ರಫುಲ್ಲ—ಇಲ್ಲದೆ ಏನು? ನಾನಾವ ತಪ್ಪನ್ನು ಮಾಡಿದ್ದೇನೆ. ಮಾ ದಿರು ಸಂಪಾದಿಸುವುದನ್ನು ನಾನೇಕೆ ತಿನ್ನಬಾರದು?

ತಾಯಿ—ಈ ನಿರ್ಭಾಗ್ಯೆಯ ಹೊಟ್ಟೆಯಲ್ಲಿ ಹುಟ್ಟಿದ್ದೇ ತಪ್ಪು—ಅದಲ್ಲದೆ, ಹಚಾರ ಬೇರೆ ಕಾಡುತ್ತದೆ—ಇಲ್ಲದಿದ್ದರೆ ನಿನಗೆ ಅನ್ನಕ್ಕೆ ಕಡಿಮೆಯೇ?

ಪ್ರಫುಲ್ಲ—ಕೇಳೆ, ಅಮ್ಮ! ಇಂದು ಖಂಡಿತಮಾಡಿಕೊಂಡಿದ್ದೇನೆ. ಮಾ ದಿರ ಅನ್ನವು ಹಣೆಯಲ್ಲಿ ಬರೆದಿದ್ದರೆ ತಿನ್ನುವೆನು. ಇಲ್ಲದಿದ್ದರೆ, ಊಟಮಾಡುವು . ನೀನು ಬೇಕಾದರೆ ಹೇಗಾದರೂ ತಂದು ಊಟಮಾಡು; ನೀನು ಊಟ ಡಿದ ಬಳಿಕ ನನ್ನನ್ನು ಮಾವಂದಿರ ಮನೆಗೆ ಕರೆದುಕೊಂಡು ಹೋಗಿ ಅಲ್ಲಿ ಟ್ಟು ಬಂದುಬಿಡು.

ತಾಯಿ—ಅದು ಹೇಗೆ, ಮಗು! ಅದರಿಂದೇನಾದಹಾಗಾಯಿತು?

ಪ್ರಫುಲ್ಲ—ಏಕೆ ಆಗಲಾರದು?

ತಾಯಿ—ಕರೇಕಳುಹಿಸದೆ ಅತ್ತೆಯ ಮನೆಗೆ ಹೋಗುವುದು ಹೇಗೆ?

ಪ್ರಫುಲ್ಲ—ಕಂಡು ಕಾಣದ ಮನೆಯಿಂದ ತಂದು ತಿನ್ನಬಹುದಂತೆ! ಕರೇ ರದೆ ಅತ್ತೆಯ ಮನೆಗೆ ಹೋಗಬಾರದೆ?

ತಾಯಿ—ಅವರು ನಿನ್ನನ್ನು ಜ್ಞಾಪಿಸಿಕೊಳ್ಳುವುದು ಕೂಡ ಇಲ್ಲ.

ಪ್ರಫುಲ್ಲ—ಬೇಡ. ಅದರಿಂದೆನಗೆ ಅವಮಾನವೇನು? ನನ್ನ ಪೋಷಣೆ ನ್ನು ಮಾಡುವುದಾರಿಗೆ ಸೇರಿದುದೋ, ಅಂತವರ ಹತ್ತಿರ ಹೋಗಿ ಬೇಡಿ ಳ್ಳುವುದು ಅವಮಾನವಲ್ಲ, ನನ್ನ ಸ್ವತ್ತನ್ನು ನಾನೇ ಕೇಳಿ ತೆಗೆದುಕೊಂಡು ನೆಹಾಗಾಗುವುದು. ಅದರಿಂದೆನಗೆ ಲಜ್ಜೆಯೇನೂ ಇಲ್ಲ.

ತಾಯಿಯು ಕೇಳಿ ಸುಮ್ಮನಾಗಿ ಅಳಲಾರಂಭಿಸಿದಳು. ಪ್ರಫುಲ್ಲೆಯು 'ನಿನ್ನ ಬ್ಬಳನ್ನೇ ಬಿಟ್ಟು ಹೋಗಲೆನಗಿಷ್ಟವಿಲ್ಲ. ಆದರೆ ನನ್ನ ದುಃಖವು ಶಮನ ವರೆ ನಿನ್ನ ದುಃಖವೂ ಕಡಿಮೆಯಾಗುವುದೆಂಬ ಭರವಸೆಯಿಂದ ಹೋಗಬೇ ದ್ದೇನೆ' ಎಂದಳು.

ತಾಯಿ ಮಗಳಿಗೆ ಅನೇಕ ಮಾತುಕಥೆಗಳು ನಡೆದವು. ಕಡೆಗೆ ಮಗಳು ುವುದೇ ಸರಿಯೆಂದು ತಾಯಿಗೆ ತೋರಿತು. ತಾಯಿಯು ಇದ್ದ ಅಕ್ಕಿಯನ್ನೇ ಯಿಸಿದಳು. ಆದರೆ ಪ್ರಫುಲ್ಲೆಯು ಸ್ವಲ್ಪವೂ ಊಟಮಾಡಲಿಲ್ಲ. ಬಳಿಕ ಲ್ಲೆಯು, 'ಹೊತ್ತುಮಾಡಿ ಆಗಬೇಕಾದುದೇನು? ಬಹಳ ದೂರ ಹೋಗ ಕು' ಎಂದಳು.

ತಾಯಿ—ನಿನಗೆ ಹೆರಳನ್ನಾದರೂ ಹಾಕುತ್ತೇನೆ.

ಪ್ರಫುಲ್ಲ—ಬೇಡ, ಇದ್ದಂತೆ ಇದ್ದುಕೊಳ್ಳಲಿ.

ತಾಯಿಯು ಮನಸ್ಸಿನಲ್ಲಿ, 'ಇದ್ದುಕೊಳ್ಳಲಿ, ನನಗೆ ಹೆರಳು ಹಾಕುವುದಕ್ಕೆ ಬರುವುದಿಲ್ಲ' ವೆಂದೆಂದುಕೊಂಡಳು.

ಮಗಳು, 'ಇದ್ದುಕೊಳ್ಳಲಿ ; ಅಲಂಕರಿಸಿಕೊಂಡು ಹೋಗಿ ಇಲ್ಲದಿರು ದನ್ನು ತೋರಿಕೊಳ್ಳುವುದು ಸರಿಯಲ್ಲ' ವೆಂದೆಂದುಕೊಂಡಳು.

ಬಳಿಕ ಅವರಿಬ್ಬರೂ ಯಥಾಸ್ಥಿತಿಯಾದ ಮಲಿನವಸ್ತ್ರವನ್ನುಟ್ಟು ಹೊರಟ

## ಎರಡನೆಯ ಪರಿಚ್ಛೇದ.

ವರೇಂದ್ರ ಭೂಮಿಯಲ್ಲಿರುವ ಭೂತನಾಥಪುರವೆಂಬ ಗ್ರಾಮದಲ್ಲಿ ಪ್ರಫು ಮುಖಿಯ ಅತ್ತೆಯ ಮನೆ. ಪ್ರಫುಲ್ಲೆಯ ಸ್ಥಿತಿಯು ಹೇಗಿದ್ದರೂ, ಅವಳ ಮಾ ನಾದ ಹರವಲ್ಲಭನು ಬಹಳ ದೊಡ್ಡಮನುಷ್ಯನಾಗಿದ್ದನು. ಅವನ ಜಮೀನುದಾ ರಿಯು ಬಹಳ ದೊಡ್ಡದು. ಎರಡು ಅಂತಸ್ತಿನ ಬೈಠಕಖಾನೆ; ದೊಡ್ಡ ದೇವ ಮನೆ; ಅದರ ಮುಂದೆ ದೊಡ್ಡ ರಂಗಭೂಮಿ; ದಪ್ತರಖಾನೆ; ಮನೆಗೆ ಹೊ ತೋಟ; ಪುಷ್ಕರಿಣಿ; ಅದರ ಸುತ್ತಲೂ ಗೋಡೆ. ಪ್ರಫುಲ್ಲಮುಖಿಯ ತಾ ಮನೆಯಿಂದಾ ಊರು ಆರು ಹರಿದಾರಿ. ಅಷ್ಟೊಂದು ದೂರ ನಡೆದುಕೊಂ ತಾಯಿಮಗಳಿಬ್ಬರೂ ಮೂರನೆಯ ಜಾಮಕ್ಕೆ ಆ ಧನಾಢ್ಯನ ಮನೆಗೆ ಬಂದು ಒಳ ಪ್ರವೇಶ ಮಾಡಿದರು.

ಪ್ರವೇಶಕಾಲದಲ್ಲಿ ಪ್ರಫುಲ್ಲೆಯ ತಾಯಿಗೆ ಒಳಗೆ ಹೋಗಲು ಕಾಲುಬಾರದು. ಪ್ರಫುಲ್ಲೆಯು ಬಡವರ ಹುಡುಗಿಯೆಂದವಳಮೇಲೆ ಹರವಲ್ಲಭನಿಗೆ ಕೋಪವಿ ಮದುವೆಯಾದ ಬಳಿಕ ಒಂದು ರಗಳೆಯುಂಟಾಯಿತು. ಹರವಲ್ಲಭನು ಬಡವ ಹೆಣ್ಣಾಗಿದ್ದರೂ ಪ್ರಫುಲ್ಲೆಯನ್ನು ಮಗನಿಗೆ ತಂದುಕೊಂಡನು. ಹೆಣ್ಣು ಪರ ಸುಂದರಿ. ಅಂತಹ ಹೆಣ್ಣು ಮತ್ತೆಲ್ಲಿಯೂ ಸಿಗದು. ಅದುಕಾರಣ ಹೆಣ್ಣನ್ ತಂದುಕೊಂಡಿದ್ದನು. ಇತ್ತ ಪ್ರಫುಲ್ಲೆಯ ತಾಯಿಯು ಮಗಳು ದೊಡ್ಡವರ ಮನೆಯ ಸೊಸೆಯಾದಳೆಂದು ಸರ್ವಸ್ವವನ್ನೂ ವ್ಯಯಮಾಡಿ ಮದುವೆ ಪ್ರಸ್ತವನ್ನು ಮಾಡಿದ ಆ ವಿವಾಹದಲ್ಲಿ ಅವಳಿಗಿದ್ದ ಸರ್ವಸ್ವವೂ ವೆಚ್ಚವಾಗಿ ಹೋಯಿತು. ಅದು ಮೊ ಲ್ಗೊಂಡವಳಿಗೆ ಅನ್ನಕ್ಕೆ ಕಷ್ಟ. ಅವಳ ದುರದೃಷ್ಟಕ್ಕೆ ತಕ್ಕಂತೆ ಆ ಮದು ಯಿಂದೊಂದು ವಿಪರೀತ ಫಲವುಂಟಾಯಿತು. ಸರ್ವಸ್ವವನ್ನೂ ವೆಚ್ಚಮಾಡಿದರೂ ಅವಳ ಸರ್ವಸ್ವವೆಲ್ಲಾ ಎಷ್ಟುತಾನೇ ಇದ್ದೀತು ?—ಊರವರೆಲ್ಲರನ್ನೂ ಸಂತೋ ಪಡಿಸಲಾರದೆ ಹೋದಳು. ಅಳಿಯನನ್ನು ಊರಿಗೆ ಸಾಗಕಳುಹುವುದಕ್ಕೆ ಸ ವಾಗಿ ಬೀಗರೌತಣವನ್ನು ಮಾಡಿಸಿದ ದಿನ ಲಾಡು ಚಿರೋಟಿ ಮುಂಡಿಗೆ ಪ್ರಸ್

ವನ್ನು ಮಾಡಿಸಿದಳು. ಊರಸಮಾರಾಧನೆಯ ದಿನ ಕೇವಲ ಬಡತನದ ಪ್ರಸ್ತವನ್ನು ಮಾಡಿದಳು. ಅದರಿಂದ ಊರಿನವರೆಲ್ಲರಿಗೂ ಮನಸ್ತಾಪವುಂಟಾಯಿತು. ಕೆಲವರು ಊಟಕ್ಕೆ ಕುಳಿತಿದ್ದವರು ಊಟ ಮಾಡದೆ ಎದ್ದು ಹೊರಟುಹೋದರು. ಅದರ ಮೇಲೆ ಪ್ರಫುಲ್ಲೆಯ ತಾಯಿಯು ಅವರ ಸಂಗಡ ಜಗಳವಾಡಿ ಅವರನ್ನು ಹೀನೈಸಿ ಬೈದಳು. ನೆರೆಯವರೆಲ್ಲರೂ ಒಟ್ಟಾಗಿ ಅದಕ್ಕೊಂದು ದೊಡ್ಡದಾದ ಪ್ರತೀಕಾರವನ್ನು ಮಾಡಿದರು.

ಹರವಲ್ಲಭನು ಹರಿಭೂಮುದ ದಿನ ಸಂಭಂದಿಯ ನೆರೆಹೊರೆಯವರನ್ನೂ ಊಟಕ್ಕೆ ಕರೆದನು. ನೆರೆಹೊರೆಯವರಾರೂ ಊಟಕ್ಕೆ ಹೋಗದೆ, ತಾವು ಜಾತಿಕೆಟ್ಟವಳ ಮನೆಗೆ ಬರುವುದಿಲ್ಲವೆಂದೂ, ಹರವಲ್ಲಭನು ಜಾತಿಭ್ರಷ್ಟೆಯ ಸಂಬಂಧವನ್ನು ಮಾಡಿದ್ದನೆಂದೂ, ಹಣವಂತರಾದ ದೊಡ್ಡವರು ಹೇಗೆ ಮಾಡಿದರೂ ಅವರಿಗೊಪ್ಪುವುದೆಂದೂ, ಬಡವರಾದ ತಮಗೆ ಜಾತಿಯೇ ದೊಡ್ಡದೆಂದೂ, ತಾವು ಜಾತಿಭ್ರಷ್ಟೆಯ ಮನೆಗೆ ಬಂದು ಅವಳು ಮುಟ್ಟಿ ಮಾಡಿದ ಅಡಿಗೆಯನ್ನು ಊಟಮಾಡುವುದಿಲ್ಲವೆಂದೂ ಕರೆಯುವುದಕ್ಕೆ ಬಂದವರೊಂದಿಗೆ ಹೇಳಿ ಕಳುಹಿಸಿದರು. ನೆರೆದಿದ್ದ ಸಭೆಯಲ್ಲಿ ಅದು ಪ್ರಚಾರವಾಯಿತು. ಪ್ರಫುಲ್ಲೆಯ ತಾಯಿಯು ವಿಧವೆ ಮನೆಯಲ್ಲಿ ಮಗಳ ಹೊರ್ತು ಮತ್ತಾರೂ ಇಲ್ಲ; ಅವಳಿಗೆ ಹೆಚ್ಚು ವಯಸ್ಸೂ ಆಗಿರಲಿಲ್ಲ; ಜನರು ಆಡಿಕೊಂಡ ಮಾತು ಅಸಂಭವವಾಗಿ ಕಾಣಲಿಲ್ಲ. ಹರವಲ್ಲಭನು ಮನಸ್ಸಿನಲ್ಲಿ, ಊರು ಜನರು ಅವಳ ಮನೆಯಲ್ಲಿ ಊಟಮಾಡದೆ ಸುಳ್ಳನ್ನು ಹೇಳುವರೇಕೆಂದು ಯೋಚಿಸಿ, ಅವರು ಹೇಳಿದುದನ್ನು ನಿಜವೆಂದು ನಂಬಿದನು. ಸಭೆಯವರೂ ನಂಬಿದರು. ಬಂದವರು ಊಟವೇನೋ ಮಾಡಿದರು. ಆದರೆ ಮದುವೆ ಹೆಣ್ಣು ಹಾಗೂ ಅವಳ ತಾಯಿಯು ಮುಟ್ಟಿದುದನ್ನು ಭೋಜನ ಮಾಡಲಿಲ್ಲ. ಅದುಕಾರಣ ಹರವಲ್ಲಭನು ಮದುವೆಯಾದ ಸೊಸೆಯನ್ನು ಮನೆತುಂಬಿಸಿಕೊಂಡ ಮಾರನೆಯ ದಿನವೇ, ಅವಳ ತಾಯಿಯ ಮನೆಗೆ ಕಳುಹಿಬಿಟ್ಟನು. ಅಂದಿನ ದಾರಭ್ಯ ಪ್ರಫುಲ್ಲೆಯೂ ಅವಳ ತಾಯಿಯೂ ಬಹಿಷ್ಕೃತರಾಗಿದ್ದರು. ಅವರ ಮನೆಗಾರೂ ಹೋಗುತ್ತಿರಲಿಲ್ಲ. ಅವಳನ್ನಾರೂ ವಿಚಾರಿಸುತ್ತಿರಲಿಲ್ಲ. ಆ ಹುಡುಗಿಯ ಗಂಡನೂ ಬಂದು ವಿಚಾರಿಸಿಕೊಳ್ಳಲಿಲ್ಲ. ಅವನಿಗೆ ಬೇರೆ ಮದುವೆಯಾಯಿತು. ಪ್ರಫುಲ್ಲೆಯ ತಾಯಿಯು ಅಳಿಯನಿಗೆ ಹಬ್ಬಕ್ಕೆ ಒಂದೆರಡು ಧೋತ್ರಗಳನ್ನು ಉಡುಗೆರೆಯಾಗಿ ಕಳುಹಿದ್ದಳು. ಹರವಲ್ಲಭನದನ್ನು ಹಿಂದಕ್ಕೆ ಕಳುಹಿಸಿಬಿಟ್ಟಿದ್ದನು. ಆ ಕಾರಣಗಳಿಂದ ಪ್ರಫುಲ್ಲೆಯ ತಾಯಿಗೆ ಇಂದವನ ಮನೆಯೊಳಗೆ ಹೋಗುವುದಕ್ಕೆ ಕಾಲೇಬಾರದು.

ಆದರೆ ಮಗಳ ಮೇಲಿನ ಅಂತಃಕರಣಕ್ಕೆ ಕಟ್ಟುಬಿದ್ದವಳಾಗಿ ಅವಳೊಡನೆ ಮನೆಯೊಳಗೆ ಪ್ರವೇಶಮಾಡಿದಳು. ಆಗ ಮನೆಯ ಯಜಮಾನನು ಊಟವಾಗಿ ಅಂತಃಪುರದಲ್ಲಿ ಅಪರಾಹ್ನದ ಸುಖನಿದ್ರೆಯಲ್ಲಿದ್ದನು. ಗೃಹಿಣಿಯೆಂದರೆ ಪ್ರಫು

ಲ್ಲೆಯ ಅತ್ತೆಯು ಕಾಲು ನೀಡಿಕೊಂಡು ಗಂಡನ ತಲೆಯ ಬಿಳಿಯ ಕೂದಲ
ತೆಗೆದುಹಾಕುತ್ತಿದ್ದಳು. ಆ ಸಮಯದಲ್ಲಿ ಪ್ರಫುಲ್ಲೆಯು ಗೋಷೆಯ ಬಟ್ಟೆಯ
ಮುಖದಮೇಲೆಳೆದುಕೊಂಡಿದ್ದಳು. ಅವಳಿಗೆ ಆಗ ಹದಿನೆಂಟು ವರ್ಷಗಳಾಗಿದ್ದು

ಯಜಮಾನಿಯು ಹೊರಗೆ ಬಂದು ನೋಡಿ, 'ನೀವಾರಮ್ಮ!' ಎ
ವಿಚಾರಿಸಿದಳು.

ಪ್ರಫುಲ್ಲೆಯ ತಾಯಿಯು ನಿಟ್ಟುಸಿರನ್ನು ಬಿಟ್ಟು, 'ನಾವಾರೆಂಬುದ
ಏನೆಂದುತಾನೇ ಹೇಳಿಕೊಳ್ಳಲಮ್ಮ?' ಎಂದಳು.

ಯಜಮಾನಿ—ಅದೇಕಮ್ಮ! ಏನೆಂದು ಹೇಳಿ ಪರಿಚಯವನ್ನು ಹ
ಬೇಕೋ ಅದನ್ನು ಹೇಳಬಹುದು.

ಪ್ರಫುಲ್ಲೆಯ ತಾಯಿ—ನಾವು ನಿಮ್ಮ ಕುಟುಂಬದವರು.

ಯಜಮಾನಿ—ಕುಟುಂಬದವರೆ? ಆವ ಕುಟುಂಬದವರಮ್ಮ?

ಆಗ ಅಲ್ಲಿ ತಾರೆಯ ತಾಯಿಯೆಂಬ ಪರಿಚಾರಿಕೆಯೊಬ್ಬಳಿದ್ದಳು. ಅವ
ಒಂದೆರಡು ತಡವೆ ಪ್ರಫುಲ್ಲೆಯ ಮನೆಗೆ ಹೋಗಿದ್ದವಳು, 'ಇವರೇ! ಗೊತ್ತಿ
ಇವರು ನಿಮ್ಮ ಬೀಗಿತ್ತಿಯಲ್ಲವೆ!' ಎಂದಳು.

ಯಜಮಾನಿ—ಬೀಗಿತ್ತಿಯೆ? ಆವಬೀಗಿತ್ತಿ?

ತಾರೆಯ ತಾಯಿ—ದುರ್ಗಾಪುರದ ಬೀಗಿತ್ತಿ—ನಿಮ್ಮ ದೊಡ್ಡ ಮ
ದೊಡ್ಡ ಹೆಂಡತಿಯ ತಾಯಿ.

ಯಜಮಾನಿಗೆ ಗೊತ್ತಾಗಿ ಅವಳು ಸ್ವಲ್ಪ ಅಪ್ರಸನ್ನೆಯಾಗಿ, 'ಕು
ಕೊಳ್ಳಿರಿ' ಎಂದಳು.

ಬೀಗಿತ್ತಿಯು ಕುಳಿತುಕೊಂಡಳು. ಪ್ರಫುಲ್ಲೆಯು ನಿಂತಿದ್ದವಳನ್ನು ನೋ
ಯಜಮಾನಿಯು, 'ಅದಾರು?' ಎಂದು ಕೇಳಿದಳು.

ಪ್ರಫುಲ್ಲೆಯ ತಾಯಿ—ನಿಮ್ಮ ದೊಡ್ಡ ಸೊಸೆ.

ಯಜಮಾನಿಯು ಸ್ವಲ್ಪ ಹೊತ್ತು ವ್ಯಾಕುಲಚಿತ್ತವುಳ್ಳವಳಾಗಿದ್ದು 'ಬ
ನೀವೆಲ್ಲಿಗೆ ಬಂದಿದ್ದಿರಿ?' ಎಂದು ಕೇಳಿದಳು.

ಪ್ರಫುಲ್ಲೆಯ ತಾಯಿ—ನಿಮ್ಮ ಮನೆಗೇನೇ ಬಂದೆವು.

ಯಜಮಾನಿ—ಏಕೆ?

ಪ್ರ. ತಾಯಿ—ಏಕೆ? ನಮ್ಮ ಹುಡುಗಿಯು ಅತ್ತೆಯ ಮನೆಗೆ ಬರಬಾರ

ಯಜಮಾನಿ—ಬಂದು ಹೋಗದೆ ಉಂಟೆ? ಅತ್ತೆಮಾವಂದಿರು ಬ
ಕರೆ ತಂದಾಗ ಬಂದೇಬರಬೇಕು. ಮನೆತನದವರ ಹೆಣ್ಣುಹುಡುಗಿ ತಾನಾಗಿ
ಬಂದು ಮೈಮೇಲೆ ಬೀಳುವುದಕ್ಕಾದೀತೆ?

ಪ್ರ. ತಾಯಿ—ಅತ್ತೆಯ ಮನೆಯವರು ಏಳೇಳು ಜನ್ಮಕ್ಕೂ ಅವಳ
ರನ್ನು ಜ್ಞಾಪಿಸಿಕೊಳ್ಳದಿದ್ದರೆ?

ಯಜಮಾನಿ—ಅವಳ ಹೆಸರನ್ನೆತ್ತದಿದ್ದರೆ ಏಕೆ ಬರಬೇಕು ?

ಪ್ರ. ತಾಯಿ—ಅನ್ನ ಬಟ್ಟೆ ಕೊಡುವರಾರು ? ನಾನು ಗಂಡನಿಲ್ಲದೆ ದಿಕ್ಕಿಲ್ಲದವಳು. ನಿಮ್ಮ ಮಗನ ಹೆಂಡತಿಗೆ ಅನ್ನಹಾಕುವುದಕ್ಕೆ ಎಲ್ಲಿಂದ ತರಲಿ ?

ಯಜಮಾನಿ :—ಹಾಗೆ ಊಟಕ್ಕಿಲ್ಲದಿದ್ದರೆ ಇಷ್ಟೊಂದು ದಿನ ಹೇಗೆ ಹೊಟ್ಟೆಯ ಕಾಲಕ್ಷೇಪ ನಡೆಯಿತು ?

ಪ್ರ. ತಾಯಿ :—ನೀವು ಮಕ್ಕಳುಮರಿ ಉಂಡದ್ದಕ್ಕೂ ಉಟ್ಟದ್ದಕ್ಕೂ ಲೆಕ್ಕ ಪಕ್ಕಾ ಇಟ್ಟುಕೊಂಡಿದ್ದೀರಲ್ಲವೆ ? ಹಾಗಿದ್ದರೆ ಹೇಳಿ. ನಿಮ್ಮ ಸೊಸೆಗೆ ಏನನ್ನು ಮಾಡಿದ್ದೀರಿ ? ಅವಳ ಯೋಚನೆಯೇ ಬೇಡವೆ ?

ಯಜಮಾನಿ—ಇದೇನರಮ್ಮ ! ನೀವು ಕಾಲು ಕೆರದು ಕದನಮಾಡುವುದಕ್ಕೆ ಬಂದಹಾಗಿದೆಯಲ್ಲ ?

ಪ್ರ. ತಾಯಿ—ಇಲ್ಲವಮ್ಮ. ನಮಗೇತಕ್ಕೆ ನಿಮ್ಮ ಸಂಗಡ ಕದನ ? ಅದಕ್ಕೆ ಬಂದವಳಲ್ಲ. ನಿಮ್ಮ ಸೊಸೆ ಒಬ್ಬಳೇ ಬರುವುದಕ್ಕಾಗುವುದಿಲ್ಲವೆಂದಳು. ಆದುದರಿಂದ ಅವಳ ಜತೆಗೆ ಬಂದೆ. ಈಗ ನಿಮ್ಮ ಸೊಸೆಯು ನಿಮ್ಮ ಮನೆಯನ್ನು ಸೇರಿದಹಾಗಾಯಿತು. ನಾನು ಹೋಗುತ್ತೇನೆ.

ಹೀಗೆಂದು ಹೇಳಿ ಪ್ರಫುಲ್ಲಳ ತಾಯಿಯು ಮನೆಯಿಂದ ಹೊರಗೆ ಹೊರಟುಹೋದಳು. ಆ ನಿರ್ಭಾಗ್ಯಳಿಗೆ ಅದುವರೆಗೂ ಊಟವಾಗಿರಲಿಲ್ಲ.

ತಾಯಿಯು ಹೊರಟುಹೋದಳು. ಆದರೆ ಪ್ರಫುಲಳು ಹೋಗಲಿಲ್ಲ. ಗೋಷೆಯ ಬಟ್ಟೆಯಿಂದ ಮುಖವನ್ನು ಮರೆಮಾಡಿಕೊಂಡಿದ್ದ ಹಾಗೆಯೇ ನಿಂತಿದ್ದಳು. ಅತ್ತೆಯು, ನಿಮ್ಮ ತಾಯಿಯು ಹೊರಟುಹೋದಳು, ನೀನೂ ಹೋಗೆಂದಳು.

ಪ್ರಫುಲ್ಲಳು ಕದಲಲಿಲ್ಲ.

ಯಜಮಾನಿ—ಕದಲುವುದಿಲ್ಲವೇತಕ್ಕೆ ?

ಪ್ರಫುಲ್ಲಳು ಕದಲಲಿಲ್ಲ.

ಯಜಮಾನಿ—ಇದೇನು ಹೊಟ್ಟೆಯುರಿ ! ನಿನ್ನ ಸಂಗಡ ಬೇರೊಬ್ಬ ಮನುಷ್ಯನನ್ನೂ ಕಳುಹಿಸಬೇಕೆ ?

ಆಗ ಪ್ರಫುಲ್ಲೆಯು ಮುಖದಮೇಲಿನ ಗೋಷೆ ಬಟ್ಟೆಯನ್ನು ತೆಗೆದಳು; ನೋಡುವುದಕ್ಕೆ ಚಂದ್ರನಹಾಗಿರುವ ಮುಖ; ಕಣ್ಣುಗಳಿಂದ ದರದರ ಧಾರೆ ಸುರಿಯುತ್ತದೆ. ಅತ್ತೆಯು ನೋಡಿ ಮನಸ್ಸಿನಲ್ಲಿ, 'ಆಹಾ ! ಇಂತಹ ರತಿದೇವಿಯ ಹಾಗಿರುವ ಸೊಸೆಯನ್ನಿಟ್ಟುಕೊಂಡು ಸಂಸಾರಮಾಡುವುದು ಹಣೆಯಲ್ಲಿ ಬರೆಯಲಿಲ್ಲ !' ವೆಂದು ಯೋಚಿಸಿದಳು. ಅವಳ ಮನಸ್ಸು ಕರಗಿತು.

ಪ್ರಫುಲ್ಲೆಯು ಅತಿ ಅಸ್ಫುಟವಾದ ಸ್ವರದಲ್ಲಿ, 'ನಾನು ಹೊರಟುಹೋಗುವುದಕ್ಕೆ ಬಂದವಳಲ್ಲ' ವೆಂದಳು.

ಯಜಮಾನಿ—ನಾನೇನು ಮಾಡಬಲ್ಲೆನೆ, ತಾಯಿ ? ನನಗೇನು, ನಿನ್ನನ್ನು ಮನೆಯಲ್ಲಿಟ್ಟುಕೊಂಡು ಸಂಸಾರಮಾಡುವುದಕ್ಕೆ ಇಷ್ಟವಿಲ್ಲವೆ! ಜನರು ಆಡಿಕೊಳ್ಳುತ್ತಾರೆ. ನಿನ್ನನ್ನು ಇಟ್ಟುಕೊಂಡರೆ ನಾವು ಒಂದೇ ಮನೆಯವರಾಗುತ್ತೇವೆ. ಕಡೆಗಾರೂ ಬಂದು ಹೋಗುವುದಿಲ್ಲ.

ಪ್ರಫುಲ್ಲ—ಅಮ್ಮ! ಇಂತಹ ಭಯಕ್ಕೆ ಆರಾವಾಗ ಮನೆಯ ಮಕ್ಕಳನ್ನು ಬಿಟ್ಟಿದ್ದಾರೆ ? ನಾನು ನಿಮ್ಮ ಸಂತಾನಳಲ್ಲವೆ ?

ಅತ್ತೆಯ ಮನಸ್ಸು ಮತ್ತಷ್ಟು ಮರುಗಿ ಅವಳು ಪುನಃ, ‘ ಏನುಮಾಡಲೆ, ತಾಯಿ ? ಜಾತಿಯ ಭಯ ’ ವೆಂದಳು.

ಪ್ರಫುಲ್ಲ—ಮೊದಲಿನ ಹಾಗೆ ಅಸ್ಫುಟವಾದ ಸ್ವರದಿಂದ, ‘ ನಾನೇನು ಅಷ್ಟು ಕೀಳುಜಾತಿಯವಳಾಗಿ ಹೋಗಿಲ್ಲ. ಎಷ್ಟೋ ಮಂದಿ ಶೂದ್ರರು ನಿಮ್ಮ ಮನೆಯಲ್ಲಿ ದಾಸಿಯರಾಗಿದ್ದಾರೆ. ನಾನು ನಿಮ್ಮ ಮನೆಯಲ್ಲೊಬ್ಬ ದಾಸಿಯಾಗಿದ್ದುಕೊಂಡಿರುವುದು ದೋಷವೇನು ? ’ ಎಂದಳು.

ಯಜಮಾನಿಯು ಹೆಚ್ಚು ತಡೆಯಲಾರದೆ, ಹೆಣ್ಣು ರೂಪದಲ್ಲಿ ಮಾತ್ರವೇ ಲಕ್ಷ್ಮಿಯಂತಿಲ್ಲ; ಮಾತಿನಲ್ಲಿಯೂ ಲಕ್ಷ್ಮಿಯಂತಿದ್ದಾಳೆ; ಮನೆಯವರ ಹತ್ತಿರ ಹೋಗಿ ಹೇಳಿ ನೋಡುತ್ತೇನೆ. ಅವರೇನು ಹೇಳುತ್ತಾರೋ ಕೇಳೋಣವೆಂದು ಯೋಚಿಸಿ, ‘ ನೀನು ಇಲ್ಲಿಯೇ ಕೂತಿರೆ, ತಾಯಿ! ಕೂತಿರು,’ ಎಂದು ಹೇಳಿದಳು.

ಆಗ ಪ್ರಫುಲ್ಲೆಯು ಒತ್ತಟ್ಟು ಅಡಗಿ ಕುಳಿತುಕೊಂಡಳು. ಆ ಸಮಯದಲ್ಲೊಂದು ಕೊಠಡಿಯ ಭಾಗಿಲಲ್ಲೊಬ್ಬ ಹದಿನಾಲ್ಕು ವರ್ಷದ ಹುಡುಗಿಯು-ಅವಳೂ ಸುಂದರಿಯೇ–ನಿಂತುಕೊಂಡು ಮುಖದ ಮೇಲೆ ಅರ್ಧ ಮಟ್ಟಿಗೆ ಗೋಷೆಯ ಬಟ್ಟೆಯನ್ನೆಳೆದುಕೊಂಡು ಕೈಯಿಂದ ಸಂಜ್ಞೆಮಾಡಿ ಪ್ರಫುಲ್ಲೆಯನ್ನು ಕರೆದಳು. ಪ್ರಫುಲ್ಲೆಯು, ಪುನಃ ‘ಇದೇನು ಬಂದಿತು!’ ಎಂದು ಎದ್ದು ಹುಡುಗಿಯ ಬಳಿ ಹೋದಳು.

—— ೧ ——

## ಮೂರನೆಯ ಪರಿಚ್ಛೇದ.

ಯಜಮಾನಿಯು ಬಳುಕುತ್ತ, ನಲಿಯುತ್ತ ಮನೆಗೆ ಬಂಧಿರುವ ಸೊಸೆಯ ನಿರಹಂಕಾರವನ್ನೂ ಅವಳ ಸೌಂದರ್ಯವನ್ನೂ ಮನಸ್ಸಿನಲ್ಲಿ ಯೋಚಿಸಿಕೊಳ್ಳುತ್ತ, ಯಜಮಾನರ ಬಳಿಗೆ ಹೋದಾಗ ಆತನಿಗೆ ಎಚ್ಚರವಾಯಿತು. ಕೈಕಾಲು ತೊಳೆದುಕೊಳ್ಳಲು ನೀರನ್ನು ಕೊಟ್ಟಾಯಿತು. ತೊಳೆದುಕೊಂಡದ್ದುದಾಯಿತು. ಅನಂತರ ಗೃಹಿಣಿಯು ಯಜಮಾನನ ಮನಸ್ಸನ್ನು ಶೋಧಿಸಿ ಮೃದುಮಾಡಿ ಮರುಗಿಸುವುದಕ್ಕೆ ಸಲವಾಗಿ; ‘ ನಿದ್ರೆಗೆ ಭಂಗವಾಯಿತೇನೊ ? ನಾನು ಬೇಡವೆಂದು ಹೇಳಿದರೂ ಆರೋ ಬಂದು ಎಚ್ಚರಗೊಳಿಸಿದ ಹಾಗೆ ಕಾಣುತ್ತದೆ ’ ಎಂದಳು.

ಕರ್ತನು ಮನಸ್ಸಿನಲ್ಲಿ, 'ನಿದ್ರಾಭಂಗಕ್ಕೆ ನೀನೇ ಮೂಲವೆಂದೂ ಇಂದೇನೋ ವಿಶೇಷವಿರಬೇಕೆಂದೂ' ಭಾವಿಸಿಕೊಂಡು, ಪ್ರಕಾಶ್ಯವಾಗಿ, 'ಆರೂ ನಿದ್ರಾಭಂಗ ಮಾಡಲಿಲ್ಲ. ಚೆನ್ನಾಗಿ ನಿದ್ರೆ ಮಾಡಿದೆನು—ಸಮಾಚಾರವೇನು?' ಎಂದು ಕೇಳಿದನು.

ಗೃಹಿಣಿಯು ಮುಗುಳು ನಗೆಯಿಂದ ಮುಖದ ಕಳೆಯೇರಿದವಳಾಗಿ, 'ಇಂದೊಂದು ಹೆಚ್ಚಿನ ಸಮಾಚಾರ; ಅದನ್ನು ಹೇಳಲು ಬಂದೆನು' ಎಂದಳು.

ಈ ಪೀಠಿಕೆಯನ್ನು ಹಾಕಿಕೊಂಡು ಗೃಹಿಣಿಯು ಒಮ್ಮೊಂದೊಮ್ಮೆ ಮೂಗಿನ ಮುಖರವನ್ನು ಅಲುಗಾಡಿಸುತ್ತ ಕೈಗಳ ಕಂಕಣ ವಲಯುಗಳನ್ನು ಝುಂಝುಣಿಸುತ್ತ (ಏಕೆಂದರೆ, ಅವಳಿಗೆ ಇನ್ನೂ ಸಾಲ್ವತ್ತೈದು ವರ್ಷಗಳ ಮೇಲೆ ವಯಸ್ಸಾಗಿರಲಿಲ್ಲ) ಪ್ರಫುಲ್ಲೆಯೂ ಅವಳ ತಾಯಿಯೂ ಬಂದ ಸಮಾಚಾರವನ್ನೆಲ್ಲಾ ಆದ್ಯೋಪಾಂತವಾಗಿ ಹೇಳಿದಳು. ಸೊಸೆಯ ಸೊಂಪುವಡೆದಲರ್ದ ಮುಖಕಮಲವನ್ನೂ ಅವಳ ಇಂಪಾದ ನುಡಿಗಳನ್ನೂ ಸ್ಮರಿಸಿಕೊಳ್ಳುತ್ತ ಪ್ರಫುಲ್ಲೆಯ ಪಕ್ಷವಾಗಿಯೇ ಮಾತಾಡಿದಳು. ಆದರವಳ ಮಂತ್ರತಂತ್ರಗಳಿಂದೇನೂ ಸಾಗದೆ ಹೋಯಿತು. ಕೇಳಿ ಕರ್ತನ ಮುಖದಲ್ಲಿ ವೈಶಾಖದ ಮೇಘದಂತೆ ಕಪ್ಪೇರಿತು. ಆಗವನು, 'ಎಷ್ಟೊಂದು ಧೈರ್ಯ. ಆ ಹಾದರಗಿತ್ತಿಯ ಹುಡುಗಿಯು ಉತಾವಳಿಮಾಡಿ ಮಿತಿಮೀರಿ ನಮ್ಮ ಮನೆಯೊಳಗೆ ಬರುವುದೆಂದರೇನು! ಒದ್ದು ಹೊರಗೆ ಕಳುಹಿಬಿಡು' ಎಂದನು

ಗೃಹಿಣಿ—ಛಿ! ಛಿ! ಇದೇನು ಅನ್ಯಾಯ! ಅಂತಹ ಮಾತನ್ನು ಹೇಳುವುದುಂಟೆ! ಸಾವಿರವಾಗಲಿ, ನಮ್ಮ ಮಗನ ಹೆಂಡತಿ, ಮನೆಗೆ ದೊಡ್ಡ ಸೊಸೆ—ಹಾದರಗಿತ್ತಿಯ ಮಗಳಂದರೇನು? ಜನರು ಅಂದುಕೊಂಡರೆ ಅದುದೇನು?

ಗೃಹಿಣಿಯು ಆ ಕುತ್ಸಿತವಾದ ಮಾತನ್ನು ಮಡಲಿನಲ್ಲಿ ಹಾಕಿಕೊಂಡು ತನ್ನ ಪರಾಭವವನ್ನು ಮನಸ್ಸಿಗೆ ಹಚ್ಚಿಕೊಳ್ಳದೆ, ಅಲ್ಲಿಯೇ ಹುಡುಗಾಟಮಾಡುವವಳಂತೆ ಕೂತಳು. ಕೂತು ಒಂದು ವಿಧವಾದ ಮೊಂಡಾಟದ ಮಾತುಗಳನ್ನು ಹೇಳುತ್ತ, ಕರ್ತನ ಮನಸ್ಸನ್ನು ರೇಗಿಸುತ್ತ ಕುಳಿತಿದ್ದಳು; ಅವುದರಿಂದಲೂ ಏನೂ ಆಗಲಿಲ್ಲ. "ಹಾದರಗಿತ್ತಿಯ ಹುಡುಗಿಯನ್ನು ಕಸಪೊರಕೆಯಿಂದ ಹೊಡಿದು ಹೊರಗೆ ಹೊರಡಿಸಿ ಬಿಡು" ಎಂಬೊಂದೇ ಹುಕುಂ ಆಯಿತು.

ಯಜಮಾನಿಯು ಕಡೆಗೆ ಕೋಪಗೊಂಡು, 'ಹೊಡಿದು ಹೊರಡಿಸುವ ಕೆಲಸವನ್ನು ನೀವೇ ಮಾಡಬಹುದು; ನನ್ನಿಂದಾಗತಕ್ಕುದಲ್ಲ; ಮುಂದೆ ನಿಮ್ಮ ಮನೆಯ ಸಂಸಾರದ ಮಾತಿಗೆ ನಾನು ಬರುವುದಿಲ್ಲ' ಎಂದು ಹೇಳಿ, ರೌದ್ರ ರೌದ್ರವಾಗಿ ರೇಗಿದ ಸರ್ಪದಂತೆ ಬುಸುಗುಟ್ಟುತ್ತ ಹೊರಗೆ ಹೊರಟು ಬಂದುಬಿಟ್ಟಳು. ಬಂದು ನೋಡಲಾಗಿ ಪ್ರಫುಲ್ಲೆಯು ಅವಳು ಮೊದಲು ಕುಳಿತಿದ್ದ ಸ್ಥಳದಲ್ಲಿರಲಿಲ್ಲ.

ಪ್ರಫುಲ್ಲೆಯು ಎಲ್ಲಿಗೆ ಹೋದಳೆಂಬುದು ಪಾಠಕರಿಗೆ ಗೊತ್ತಿದೆ. ಬಾಗಲಲ್ಲಿ ನಿಂತು ಹದಿನಾಲ್ಕು ವರ್ಷದಾ ಹೆಣ್ಣು ಹುಡುಗಿಯು ಕೈಸಂಜ್ಞೆಮಾಡಿ ಕರೆದುದರ

ಮೇಲೆ ಪ್ರಫುಲ್ಲೆಯು ಅವಳ ಸಂಗಡ ಹೋಗಿದ್ದಳು. ಅವಳಾಕೊಠಡಿಯೊಳಗೆ ಹೋಗುತಲೇ ಹುಡುಗಿಯು ಬಾಗಿಲನ್ನು ಹಾಕಿಕೊಂಡಳು.

ಪ್ರಫುಲ್ಲ—ಬಾಗಲೇಕೆ ಹಾಕಿದೆ ?

ಹುಡುಗಿ—ಆರೂ ಬರದಿರಲೆಂದು ಹಾಕಿದೆನು. ನಿನ್ನ ಸಂಗಡ ಒಂದೆರಡು ಮಾತಾಡುವುದಿದೆ. ಅದಕ್ಕೆ ಸಲವಾಗಿ ಬಾಗಿಲನ್ನು ಮುಚ್ಚಿದೆನು.

ಪ್ರಫುಲ್ಲೆ—ನಿನ್ನ ಹೆಸರೇನಪ್ಪ?

ಹುಡುಗಿ—ನನ್ನ ಹೆಸರು, ಸಾಗರೆ.

ಪ್ರಫುಲ್ಲೆ—ತಂಗಿ ! ನೀನಾರೆ ?

ಹುಡುಗಿ—ಅಕ್ಕ ! ನಾನು ನಿನ್ನ ಸವತಿ.

ಪ್ರಫುಲ್ಲೆ—ನೀನು ನನ್ನನ್ನು ಬಲ್ಲೆಯ ?

ಸಾಗರ—ಈಗ ನಾನು ಬಾಗಿಲ ಹಿಂದೆ ನಿಂತುಕೊಂಡು ನಡೆದುದನ್ನೆಲ್ಲಾ ಕೇಳಿದೆನು.

ಪ್ರಫುಲ್ಲೆ—ಹಾಗಾದರೆ, ನೀನೇ ಮನೆಯಲ್ಲಿ ಸಂಸಾರವನ್ನು ಮಾಡುವ ಗೃಹಿಣಿಯಲ್ಲವೆ ?

ಸಾಗರ—ಅದೆಲ್ಲಿ ನನ್ನ ಹಣೆಯಲ್ಲಿ ಬರೆದಿದೆ ? ನಾನೆಂದೂ ಹಾಗಾಗೆನು. ನನಗೇನಾದರೂ ಹಲ್ಲು ಉಬ್ಬಾಗಿದೆಯೆ ? ಅಥವಾ ನಾನು ಅಷ್ಟು ಅಚ್ಚ ಕಪ್ಪಾಗಿಯೂ ಇಲ್ಲ. ಹಾಗಿದ್ದರೆ ನಾನೇ ಯಜಮಾನಿಯಾಗುತ್ತಿದ್ದೆನೆಂದು ತೋರುತ್ತದೆ.

ಪ್ರಫುಲ್ಲೆ—ಅದೇನೆ ? ಆರ ಹಲ್ಲು ಉಬ್ಬಾಗಿದೆ ?

ಸಾಗರ—ಸಂಸಾರಮಾಡುವ ಗೃಹಿಣಿಯ ಹಲ್ಲು, ಆಗಬಾರದೇಕೆ ?

ಪ್ರಫುಲ್ಲ—ತಿರಿಗಿ ಅದಾರೆ ? ತಂಗಿ !

ಸಾಗರ—ಗೊತ್ತಿಲ್ಲವೆ ? ಪಾಪ ! ನಿನಗೆ ಹೇಗೆ ಗೊತ್ತು ? ನೀನು ಇಲ್ಲಿಗೆ ಬಂದವಳಲ್ಲ. ನನಗೆ ಮತ್ತೊಬ್ಬಳು ಸವತಿಯಿರುವುದು ಗೊತ್ತಿಲ್ಲವೆ ?

ಪ್ರಫುಲ್ಲ—ನನಗೆ ಮದುವೆಯಾದ ಬಳಿಕ ಮತ್ತೊಂದು ಮದುವೆಯಾಯಿತೆಂದು ಕೇಳಿದೆನು. ಆ ಮದುವೆಯಾದವಳೇ ನೀನೆಂದು ತಿಳಿದಿದ್ದೆನು.

ಸಾಗರ—ಇಲ್ಲ. ಮದುವೆಯಾದವಳು ಅವಳು. ನನಗೆ ಮದುವೆಯಾಗಿ ಇನ್ನೂ ಮೂರು ವರ್ಷ.

ಪ್ರಫುಲ್ಲ—ಅವಳು ಬಹಳ ಕುತ್ಸಿತೆಯೆಂದು ತೋರುತ್ತದೆ ?

ಸಾಗರ—ರೂಪವನ್ನು ನೋಡಿಬಿಟ್ಟರೆ ನನಗೇವೇ ಅಳು ಬರುತ್ತದೆ !

ಪ್ರಫುಲ್ಲ—ಆದುದರಿಂದಲೇ ನಿನಗೆ ಮದುವೆಯಾದಹಾಗೆ ತೋರುತ್ತದೆಯಲ್ಲವೆ ?

ಸಾಗರ—ಇಲ್ಲ, ಹಾಗೆ ತೋರುವುದಿಲ್ಲ. ನಿನಗೆ ಏಕಾಂತವಾಗಿ ಹೇಳುತ್ತೇನೆ ; ಆರಿಗೂ ಹೇಳಬೇಡ. (ಸಾಗರೆಯು ಮೆಲ್ಲಮೆಲ್ಲಗೆ ಪ್ರಫುಲ್ಲೆಯ ಕಿವಿಯಲ್ಲಿ)

ನಮ್ಮ ತಂದೆಯು ಬಹಳವಾಗಿ ಹಣವಂತನು. ತಂದೆಗೆ ನಾನೊಬ್ಬಳೇ ಮಗಳು. ಆ ಹಣಕ್ಕೋಸ್ಕರ ನನ್ನನ್ನು ಮದುವೆ—

ಪ್ರಫುಲ್ಲ—ಹೆಚ್ಚು ಹೇಳಬೇಡ. ಗೊತ್ತಾಯಿತು. ನೀನು ಬಹಳ ಸುಂದರಿಯಾಗಿದ್ದೀಯೆ. ಕುರೂಪಿಯಾದವಳು ಮನೆಯ ಯಜಮಾನಿಯಾದುದು ಹೇಗೆ?

ಸಾಗರ—ನಾನು ತಂದೆಗೊಬ್ಬಳೇಮಗಳು. ತಂದೆಯು ನನ್ನನ್ನು ಕಳುಹುವುದಕ್ಕಿಷ್ಟಪಡುವುದಿಲ್ಲ. ಅದಲ್ಲದೆ ತಂದೆಗೂ ಮಾವಂದಿರಿಗೂ ಮನಸ್ಸು ಸರಿಯಾಗಿಲ್ಲ. ಅದುಕಾರಣ ನಾನು ಇಲ್ಲಿ ಆವಾಗಲೂ ಇರುವುದಿಲ್ಲ. ಹಬ್ಬ ಹುಣ್ಣುಮೆಗೆ ಕರೆದುಕೊಂಡು ಬರುತ್ತಾರೆ. ನಾಲ್ಕು ದಿನವಿದ್ದು ಹೊರಟು ಹೋಗುತ್ತೇನೆ. ಈಗ ಬಂದು ಮೂರು ನಾಲ್ಕು ದಿನಗಳಾದವು. ಪುನಃ ಹೊರಟು ಹೋಗುತ್ತೇನೆ.

ಸಾಗರೆಯು ಬಹಳ ಒಳ್ಳೆಯ ಹೆಂಗಸೆಂದು ಪ್ರಫುಲ್ಲೆಯು ತಿಳಿದುಕೊಂಡಳು. ತನಗೆ ಸವತಿಯೆಂದು ಅವಳ ಮೇಲೆ ಹೊಟ್ಟೆಗಿಚ್ಚುಪಡಲಿಲ್ಲ.

ಅವಳನ್ನು ಕುರಿತು, 'ನೀನು ನನ್ನನ್ನೇಕೆ ಕರೆದೆ?' ಎಂದಳು.

ಸಾಗರ—ಏನಾದರೂ ಫಲಾಹಾರಮಾಡೆಂದು ಕರೆದೆನು. ಪ್ರಫುಲ್ಲೆಯು ನಕ್ಕು, 'ಏಕೆ? ಈಗೇನೂ ಬೇಡ' ಎಂದಳು.

ಸಾಗರ—ನಿನ್ನ ಮುಖವು ಬಾಡಿದೆ. ಬಹಳ ದೂರ ನಡಿದು ಬಂದಿದ್ದೀಯೆ. ನಿನಗೆ ಬಾಯಾರಿಕೆಯಾಗಿರಬೇಕು. ಊಟಮಾಡೆಂದಾರೂ ಹೇಳಲಿಲ್ಲ. ಅದುಕಾರಣ ನಾನು ನಿನ್ನನ್ನು ಕರೆದೆನು.

ಪ್ರಫುಲ್ಲೆಯು ಅದುವರೆಗೂ ಊಟಮಾಡಿರಲಿಲ್ಲ. ದಾಹದಿಂದ ಬಾಯಿ ಒಣಗಿ ಹೋಗಿದ್ದಿತು. ಆದರೂ, 'ಅತ್ತೆಯವರು ಮಾವಂದಿರ ಮನಸ್ಸನ್ನು ತಿಳಿದುಕೊಂಡು ಬರಲು ಹೋಗಿದ್ದಾರೆ. ನನ್ನ ಅದೃಷ್ಟದಲ್ಲೇನಿದೆಯೋ ಅದನ್ನು ತಿಳಿದುಕೊಳ್ಳದೆ ನಾನು ಊಟಮಾಡುವುದಿಲ್ಲ. ಕಸಪೊರಕೆಯ ಪೆಟ್ಟನ್ನು ತಿನ್ನಬೇಕೆಂದರೆ ತಿನ್ನಬೇಕು. ಮತ್ತೇನನ್ನೂ ತಿನ್ನುವುದಿಲ್ಲ' ವೆಂದಳು.

ಸಾಗರ—ಬೇಡ, ಬೇಡ, ಅವರ ಸ್ವತ್ತಾದುದಾವನ್ನೂ ತಿನ್ನಬೇಡ, ನಮ್ಮ ತಂದೆಯ ಮನೆಯಿಂದ ತಂದಿದ್ದೇನೆ, ಒಳ್ಳೊಳ್ಳೆ ತಿಂಡಿಯಿದೆ.

ಹೀಗೆಂದು ಹೇಳಿ ಸಾಗರೆಯು ಕೆಲವು ತಿಂಡಿಯ ಪದಾರ್ಥಗಳನ್ನು ತಂದು ಪ್ರಫುಲ್ಲೆಯ ಬಾಯಿಗೆ ಕೊಡ ಹೋದಳು. ಬಲವಂತಮಾಡಿದುದರ ಮೇಲೆ ಪ್ರಫುಲ್ಲೆಯು ಸ್ವಲ್ಪ ತೆಗೆದುಕೊಂಡಳು. ಸಾಗರೆಯು ಶೀತಲವಾದ ಗಂಗೋದಕವನ್ನು ತಂದು ಕೊಟ್ಟಳು. ಅದನ್ನು ಕುಡಿದು ತೃಪ್ತೆಯಾದಳು. ಬಳಿಕ ಪ್ರಫುಲ್ಲೆಯು, 'ನನಗೆ ತಂಪಾಯಿತು, ಆದರೆ ನನ್ನ ತಾಯಿಯು ಆಹಾರವಿಲ್ಲದೆ ಪ್ರಾಣಬಿಡುವಳು' ಎಂದಳು.

ಸಾಗರ—ನಿಮ್ಮ ತಾಯಿಯು ಎಲ್ಲಿಗೆ ಹೋಗಿದ್ದಾಳೆ?

ಪ್ರಫುಲ್ಲ—ಆರಿಗೆ ಗೊತ್ತು? ಬಹುಶಃ ಹೋಗಿ ರಸ್ತೆಯಲ್ಲಿ ನಿಂತಿರಬಹುದು.

ಸಾಗರ—ಒಂದು ಕೆಲಸ ಮಾಡಲೆ ?

ಪ್ರಫುಲ್ಲ—ಏನು ?

ಸಾಗರ—ಬ್ರಹ್ಮಠಾಕುರಾಣಿಯನ್ನು ನಿಮ್ಮ ತಾಯಿಯ ಬಳಿಗೆ ಕಳುಹಿಸ ಬಹುದೆ ?

ಪ್ರಫುಲ್ಲ—ಅವಳಾರು ?

ಸಾಗರ—ಮನೆಯಲ್ಲಿ ದೇವರ ಪೂಜೆಯನ್ನು ಮಾಡುವ ಬ್ರಾಹ್ಮಣನ ಹೆಂಡತಿ.
ಅವರು ಸಂಸಾರ ಸಮೇತರಾಗಿ ಈ ಮನೆಯಲ್ಲಿಯೇ ಇದ್ದಾರೆ.

ಪ್ರಫುಲ್ಲ—ಅವಳೇನನ್ನು ಮಾಡುವಳು ?

ಸಾಗರ—ನಿಮ್ಮ ತಾಯಿಗೆ ಭೋಜನವನ್ನು ಮಾಡಿಸುವಳು.

ಪ್ರಫುಲ್ಲ—ನಮ್ಮ ತಾಯಿಯು ಈ ಮನೆಯಲ್ಲಿ ಊಟಮಾಡಳು.

ಸಾಗರ—ಅದು ಬೇಡಲೇಬೇಡ. ನಾನಾಮಾತನ್ನು ಹೇಳುವುದಿಲ್ಲ. ಬೇರೆಲ್ಲಾದರೂ ಬ್ರಾಹ್ಮಣರ ಮನೆಯಲ್ಲಿ ಭೋಜನ ಮಾಡಿಸುವಳು.

ಪ್ರಫುಲ್ಲ—ಹೇಗೋ ಹಾಗೆ ಮಾಡು. ನಮ್ಮ ತಾಯಿಯು ಶ್ರಮ ಸಹಿಸಲಾರಳು.

ಸಾಗರೆಯು ಬೇಗನೆ ಬ್ರಹ್ಮಠಾಕುರಾಣಿಯ ಬಳಿ ಹೋಗಿ ಅವಳಿಗೆ ಸಕಲ ವಿಷಯವನ್ನೂ ತಿಳಿಸಿದಳು. ಬ್ರಹ್ಮಠಾಕುರಾಣಿಯು, 'ತಾಯಿ, ಹಾಗೆಯೆ ! ಗೃಹಸ್ಥರ ಮನೆಗೆ ಬಂದು ಉಪವಾಸವಿರುವುದುಂಟೆ ! ಹಾಗಿದ್ದರೆ ಬಹಳ ಅಮಂಗಳಕ್ಕೆ ಕಾರಣವೆಂದು ಹೇಳಿ, ಪ್ರಫುಲ್ಲೆಯ ತಾಯಿಯನ್ನು ಹುಡುಕಿಕೊಂಡು ಹೋದಳು. ಸಾಗರೆಯು ಹಿಂದಿರುಗಿ ಬಂದು ಪ್ರಫುಲ್ಲೆಗೆ ಸಮಾಚಾರವನ್ನು ಕೊಟ್ಟಳು. ಪ್ರಫುಲ್ಲೆಯು, 'ತಂಗಿ! ನೀನೇನನ್ನು ಹೇಳುತ್ತಿದ್ದೆಯೋ ಅದನ್ನು ಈಗ ಹೇಳಬಹುದು' ಎಂದಳು.

ಸಾಗರ—ನಾನು ಹೇಳುತಿದ್ದುದು ಮತ್ತೇನೂ ಅಲ್ಲ. ನಾನಿನ್ನು ಇಲ್ಲಿರುವುದಿಲ್ಲ. ಇರುವುದಕ್ಕೂ ಆಗುವುದಿಲ್ಲ. ನನ್ನ ಅದೃಷ್ಟವೆಲ್ಲ, ಮರದಿಂದ ಮಣ್ಣಿನಲ್ಲಿ ಬಿದ್ದ ಪಕ್ವವಾದ ಮಾವಿನ ಹಣ್ಣಿನಂತಾಗಿ ಹೋಯಿತು. ಅದನ್ನು ತೆಗೆದುಕೊಳ್ಳುವುದಕ್ಕಾಗುವುದಿಲ್ಲ. ತೆಗೆದಿಟ್ಟರೂ ದೇವರ ನೈವೇದ್ಯಕ್ಕೆ ಉಪಯೋಗವಾಗುವುದಿಲ್ಲ. ನೀನು ಬಂದಿದ್ದೀಯೆ. ಹೇಗಿರುವೆಯೋ ಇರು. ನಾನಾ ಕಪ್ಪು ಗೂಗೆಯನ್ನು ನೋಡುತ್ತಿರಲಾರೆ.

ಪ್ರಫುಲ್ಲ—ಇರಬೇಕೆಂತಲೇ ಬಂದಿದ್ದೇನೆ. ಇರುವುದಕ್ಕಾದರೆ ನೋಡೋಣ.

ಸಾಗರ—ಈಗ ನೋಡು; ಮಾವಂದಿರು ನೀನಿರುವುದಕ್ಕೊಪ್ಪದಿದ್ದರೆ ಈಗಲೇ ಹೊರಟು ಹೋಗಬೇಡ.

ಪ್ರಫುಲ್ಲ—ಹೋಗದೆ ಏನು ಮಾಡಲಿ ? ಏತಕ್ಕೋಸ್ಕರ ನಿಲ್ಲಲಿ ?—

ಇರುವೆನು, ಆದರೆ—

ಸಾಗರ—ಆದರೇನು ?

ಪ್ರಫುಲ್ಲ—ಆದರೆ ನೀನು ನನ್ನ ಜನ್ಮವನ್ನು ಸಾರ್ಥಕಮಾಡಿಸುವುದಾದರೆ—

ಸಾಗರ—ಅಕ್ಕ ! ಅದು ಹೇಗಾದೀತು ?

ಪ್ರಫುಲ್ಲೆಯು ಸ್ವಲ್ಪ ನಕ್ಕಳು. ಕೂಡಲೇ ಆ ನಗುವು ಅಳಿಸಿ ಹೋಯಿತು. ಕಣ್ಣಿನಿಂದ ನೀರು ಸುರಿಯಿತು. ಅನಂತರ ಅವಳು, 'ತಂಗಿ! ತಿಳಿಯಲಿಲ್ಲವೇನು?, ಎಂದಳು.

ಸಾಗರೆಗೆ ಗೊತ್ತಾಯಿತು. ಸ್ವಲ್ಪ ಯೋಚಿಸಿ, ನಿಟ್ಟುಸಿರನ್ನು ಬಿಟ್ಟು 'ನೀನು ಸಾಯಂಕಾಲದ ಮೇಲೆ ಈ ಕೊಠಡಿಯಲ್ಲಿಯೇ ಕುಳಿತಿರು. ಹಗಲು ಹೊತ್ತು ನೋಡುವುದಕ್ಕಾಗುವುದಿಲ್ಲ' ವೆಂದಳು.

ಪಾಠಕ ಮಹಾಶಯರು ಜ್ಞಾಪಿಸಿಕೊಳ್ಳಬೇಕಾದುದೇನೆಂದರೆ ;—ನಾವು ಈಗಿನ ಸ್ಕೂಲಿನ ಪಾಂಡಿತ್ಯದಿಂದ ಲಜ್ಜಾಹೀನರಾದ ನವೀನ ಸುಂದರಿಯರನ್ನು ಕುರಿತು ಬರೆಯುವುದಿಲ್ಲ; ನಾವು ಬರೆಯುವ ಕಥೆಯು ತಾರೀಖು ಈಗ್ಗೆ ಒಂದುನೂರು ವರ್ಷಕ್ಕೆ ಹಿಂದೆಯಾಗಿದೆ. ಈಗ ಮೂವತ್ತು ವರ್ಷಕ್ಕೆ ಮುಂಚೆಯೂ ಯುವತಿಯರಿಗೆ ಹಗಲು ಗಂಡನ ದರ್ಶನವು ಸಿಗುತ್ತಿರಲಿಲ್ಲವೆಂದು ಜ್ಞಾಪಿಸಿಕೊಳ್ಳಬೇಕು.

ಪ್ರಫುಲ್ಲ—ಮೊದಲು ನನ್ನ ಅದೃಷ್ಟವು ಹೇಗಿದೆಯೋ ಅದನ್ನು ತಿಳಿದುಕೊಂಡು ಬರೋಣ. ಅನಂತರ ಬಂದು ನಿನ್ನನ್ನು ನೋಡುತ್ತೇನೆ. ಅದೃಷ್ಟವು ಹೇಗಾದರೂ ಇದ್ದುಕೊಳ್ಳಲಿ. ಒಂದು ಸಲ ಸ್ವಾಮಿಯನ್ನು ನೋಡಿಬಿಟ್ಟು ಹೊರಟು ಹೋಗುತ್ತೇನೆ. ಅವರೇನನ್ನು ಹೇಳುವರೋ ಅದನ್ನು ತಿಳಿದುಕೊಂಡು ಹೋಗುವೆನು.

ಹೀಗೆಂದು ಹೇಳಿ ಪ್ರಫುಲ್ಲೆಯು ಕೊಠಡಿಯಿಂದ ಹೊರಗೆ ಬಂದಳು. ಬಂದು ನೋಡಲಾಗಿ ಅವಳ ಅತ್ತೆಯು ಅವಳನ್ನೇ ಹುಡುಕುತ್ತಿದ್ದಳು. ಪ್ರಫುಲ್ಲೆಯನ್ನು ನೋಡಿ ಅತ್ತೆಯು, 'ಎಲ್ಲಿದ್ದೆಯೆ? ತಾಯಿ!' ಎಂದಳು.

ಪ್ರಫುಲ್ಲ—ಮನೆಯನ್ನೆಲ್ಲಾ ನೋಡುತ್ತಿದ್ದೆನು.

ಯಜಮಾನಿ—ಆಹಾ! ಮಗು! ಮನೆಯೋ ನಿನ್ನದು-ನಾನೇನನ್ನು ಮಾಡಲೀ ? ನಿನ್ನ ಮಾವಂದಿರು ಸ್ವಲ್ಪವೂ ಒಪ್ಪಿಕೊಳ್ಳುವುದಿಲ್ಲವಲ್ಲೆ !

ಪ್ರಫುಲ್ಲೆಯು ತಲೆಯ ಮೇಲೆ ಸಿಡ್ಲು ಹೊಡಿದಹಾಗಾಯಿತು. ಅವಳು ತಲೆಯ ಮೇಲೆ ಕೈಯಿಟ್ಟುಕೊಂಡು ಹಾಗೆಯೇ ಕುಳಿತುಕೊಂಡಳು. ಅಳಲಿಲ್ಲ—ಸುಮ್ಮನಿದ್ದಳು. ಅತ್ತೆಯ ಮನಸ್ಸಿನಲ್ಲಿ ಬಹಳ ದಯೆಯುಂಟಾಯಿತು. ಅತ್ತೆಯು ಮನಸ್ಸಿನಲ್ಲಿ ಮತ್ತೊಂದುತಡವೆ ಮೂಗಿನ ಮುಖರವನ್ನು ಹಾಕಿಸಿ ನೋಡೋಣ. ಏನು ಹೇಳುವರೋ ಕೇಳೋಣವೆಂದಂದುಕೊಂಡು ಪ್ರಕಾಶ್ಯವಾಗಿ, 'ಈ ಹೊತ್ತು ಮತ್ತೆಲ್ಲಿ ಹೋಗುವೆ ? ಇಲ್ಲಿಯೇ ಇರು ! ನಾಳೆ ಬೆಳಿಗ್ಗೆ ಹೋಗಿರುವೆ' ಎಂದಳು.

ಪ್ರಫುಲ್ಲೆಯು ತಲೆಯನೆತ್ತಿ, ಹಾಗೇವೇ ಆಗಲಿ, ಇದ್ದು ಹೋಗುವೆನು. ಯಜಮಾನರನ್ನು ನೋಡಿ ಒಂದು ಮಾತನ್ನು ಕೇಳಬೇಕೆಂದಿದ್ದೇನೆ, ನಮ್ಮ ತಾಯಿಯು ರಾಟೆನೂಲು ನೂತು ಮಾರಿಕೊಂಡು ಹೊಟ್ಟೆ ಹೊರಿಯುತ್ತಾಳೆ; ಅದ್ದರಿಂದವಳೊಬ್ಬಳಿಗೆ ಒಂದು ಹೊತ್ತು ಹೊಟ್ಟೆ ತುಂಬುವುದಿಲ್ಲ—ನಾನು ಹೇಗೆ ಹೊಟ್ಟೆ ಹೊರಿಯಲಿ ? ಎಂದು ಕೇಳುತ್ತೇನೆ. ನಾನು ಜಾತಿ ಭ್ರಷ್ಟೆಯೇ ಆಗಲಿ, ಚಂಡಾಲಿಯೇ ಆಗಲಿ, ಆರೇ ಆಗಲಿ, ಅವರಿಗೆ ಸೊಸೆಯಾಗಬೇಕು. ಅಂತಹವರಿಗೆ ಸೊಸೆಯಾಗಿ ಹೇಗೆ ಕಾಲ ಕಳೆಯಲೆಂದು ಕೇಳಿಕೊಳ್ಳುತ್ತೇನೆ' ಎಂದಳು.

ಅತ್ತೆಯು ' ಅಗತ್ಯವಾಗಿ ಕೇಳಮ್ಮ ' ಎಂದಳು. ಅನಂತರ ಪ್ರಫುಲ್ಲೆಯು ಅಲ್ಲಿಂದೆದ್ದು ಹೊರಟು ಹೋದಳು.

---

## ನಾಲ್ಕನೆಯ ಪರಿಚ್ಛೇದ.

ಸಾಯಂಕಾಲದ ಮೇಲೆ ಆ ಕೊಠಡಿಯಲ್ಲಿ ಸಾಗರೆಯೂ ಪ್ರಫುಲ್ಲೆಯೂ ಬಾಗಿಲನ್ನು ಹಾಕಿಕೊಂಡು ಮೆಲ್ಲಮೆಲ್ಲಗೆ ಮಾತಾಡುತ್ತಿದ್ದರು. ಆಗಾರೋ ಬಂದು ಬಾಗಿಲನ್ನು ತಟ್ಟಿದರು. ಸಾಗರೆಯು, 'ಆರು, ಬಾಗಿಲು ತಟ್ಟುವವರು?' ಎಂದು ಕೇಳಿದಳು.

" ನಾನುಕಣೆ "

ಸಾಗರೆಯು ಪ್ರಫುಲ್ಲೆಯ ಬೆನ್ನನ್ನು ತಟ್ಟಿ, ಮೆಲ್ಲಮೆಲ್ಲಗೆ, ' ಮಾತಾಡಬೇಡ ಆ ಕರಿಗೂಬೆ ಬಂದಿದೆ ' ಎಂದಳು.

ಪ್ರಫುಲ್ಲ—ಸವತಿಯೆ ?

ಸಾಗರ—ಅಹುದು. ಮಾತಾಡಬೇಡ

ಬಂದವಳು, ' ಕೋಣೆಯಲ್ಲಾರೆ ? ಮಾತಾಡುವುದಿಲ್ಲವೇಕೆ ?—ಸಾಗರೆಯ ಧ್ವನಿಯು ಕೇಳುವಹಾಗಿದೆ ' ಎಂದಳು.

ಸಾಗರ—ನೀನಾರೆ ?—ಕಸಾಗುಡಿಸುವ ಮುದುಕಿಯ ಸೊಸೆಯ ಧ್ವನಿಯು ಕೇಳುವಂತಿದೆ.

" ಆಹಾ! ಇದೇನು, ಇನ್ನೇನು, ಬದುಕಿದ್ದುದಕ್ಕೆ ಸಾರ್ಥಕ! ನಾನು ಮುದುಕಿಯ ಸೊಸೆಯೆ ? "

ಸಾಗರ—ಹಾಗಾದರೆ ನೀನಾರು ?

" ನಿನ್ನ ಸವತಿ ! ಸವತಿ ! ಹೆಸರು, ನಯನತಾರೆ."

ಆಗ ಸಾಗರೆಯು ಕೃತ್ರಿಮವಾಗಿ ವ್ಯಸ್ತವಾದವಳಂತೆ ' ಆರು ! ಅಕ್ಕ ! ಹೇಳಿದ ಮಾತ್ರಕ್ಕೆ ನೀನು ಮುದುಕಿಯ ಸೊಸೆಯಾಗಿ ಹೋಗಿಬಿಟ್ಟೆಯಾ? ಏನೋ ಧ್ವನಿಯನ್ನು ? ಭ್ರಮಿಸಿಕೊಂಡು ಹೇಳಿದುದು ' ಎಂದಳು.

ನಯನೆ—ಇನ್ನೇನು, ನಾನು ಬದುಕಿ ? ಪ್ರಾಣ ಹೋಗುವುದು ಮೇಲು ! ನಾನು ಅವಳಗಿಂತಲೂ ಕಪ್ಪೆ? ಸವತಿಯನ್ನುವುದು ಸರಿಯೆ—ಇನ್ನೂ ಹದಿನಾಲ್ಕು ವರ್ಷಕೂಡ ಮುಗಿದಿಲ್ಲ! ಇವಳು ಸವತಿಯೇ ಅಹುದು! ನಾನೇನೋ, ಎಂದಿದ್ದೆನು! ಸರಿಕಣೆ ನೀನು !

ಸಾಗರ—ಹದಿನಾಲ್ಕು ವರ್ಷವಾದರೆ ಏನಂತೆ ? ನಿನಗೆ ಹದಿನೇಳುವರ್ಷ, ನಿನಗಿಂತಲೂ ಹೆಚ್ಚು ನನಗೆ ರೂಪವಿದೆ ; ಯೌವನವೂ ಇದೆ.

ನಯನ—ರೂಪ ಯೌವನವನಿಟ್ಟುಕೊಂಡು ತಂದೆಯ ಮನೆಯಲ್ಲಿ ಕೂತು ಕೂತು ತಿನ್ನು. ನಿನ್ನ ಹತ್ತರ ಬಂದು ಮಾತಾಡಿ ನಾನು ಸತ್ತು ಮೂರು ಹಿಡಿ ಬೂದಿಯಾದೆ !

ಸಾಗರ—ಅದೇನು, ಮಾತು ? ಅಕ್ಕ !

ನಯನ—ನೀನು ಬಾಗಿಲನ್ನು ತೆಗೆಯಲಿಲ್ಲ—ಏಕೆ, ಹೇಳಲೆ ? ಸಂಜೀ ಹೊತ್ತಿನಲ್ಲಿ ಬಾಗಲೇಕೆ ಹಾಕಿದ್ದೀಯೆ ?

ಸಾಗರ— ನಾನು ಮರೆಯಲ್ಲಿ ಕುಳಿತು ತಿಂಡಿಯನ್ನು ತಿನ್ನುತಿದ್ದೆನು— ನಿನಗೂ ಬೇಕೆ ? ತಿನ್ನುವಿಯಾ ?

ನಯನ— ತಿನ್ನು, ತಿನ್ನು —(ನಯನೆಗೂ ತಿಂಡಿಯ ಮೇಲೆ ಆಶೆ) ಆರೋ ಮತ್ತೊಬ್ಬರು ಬಂದಿದ್ದಾರೆಂದು ಕೇಳಿದೆನು, ಅದನ್ನು ಕೇಳೋಣವೆಂದು ಬಂದೆ. ನಿಜವೇನು ?

ಸಾಗರ —ಮತ್ತೊಬ್ಬರಾರು ? ಸ್ವಾಮಿಯೆ ?

ನಯನ— ಹಾಳಾಯಿತು ! ಅದರಿಂದೇನು ?

ಸಾಗರ— ಅದರಿಂದೇನೆ ?— ಇಬ್ಬರೂ ಪಾಲುಮಾಡಿಕೊಳ್ಳೋಣ. ನಿನ್ನ ಭಾಗಕ್ಕೆ ಹೊಸಬನನ್ನೇ ಕೊಡುತ್ತೇನೆ.

ನಯನ— ಛೀ ! ಛೀ ! ಅಂತಹಮಾತು ಬಾಯಲ್ಲಿ ಹೇಳಬಹುದೇನೆ ?

ಸಾಗರ —ಮನಸ್ಸಿನಲ್ಲಿಯೊ ?

ನಯನ —ನನ್ನ ಮನಸ್ಸಿನಲ್ಲಿರುವುದೆಲ್ಲಾ ನೀನು ಹೇಳಬಲ್ಲೆಯಲ್ಲವೆ ?

ಸಾಗರ—ನೀನೇನ್ನು ಕೇಳಬೇಕೋ ಅದನ್ನು ಚೆನ್ನಾಗಿ ತಿಳಿಯದೆ ಏನೆಂದು ತ್ತರವನ್ನು ಕೊಡಲಿ ?

ನಯನ—ಯಜಮಾನಿಯು ಮತ್ತಾರೋ ಒಬ್ಬಳು ಸೊಸೆಯು ಬಂದಳೆಂದು ಹೇಳಿದರಲ್ಲವೆ ?

ಸಾಗರ—ಆವ ಸೊಸೆ ?

ನಯನ —ಆ ಜಾತಿಗೆಟ್ಟ ಸೊಸೆ.

ಸಾಗರ—ಜಾತಿಗೆಟ್ಟವಳೆಂದು ಹೇಳಿದವರಾರು ? ನಾನದನ್ನರಿಯೆ.

ನಯನ—ಜಾತಿಗೆಟ್ಟವಳಲ್ಲದಿದ್ದರೆ, ಬಹಿಷ್ಕಾರದವಳು.

ಸಾಗರ—ಅಂತಹವಳನ್ನೂ ನಾನು ಕೇಳಿಲ್ಲ.

ನಯನ—ಕೇಳಿಲ್ಲವೆ–ನಮ್ಮಿಬ್ಬರಿಗೂ ಬಹಿಷ್ಕಾರದವಳೊಬ್ಬಳು ಸವತಿ ಇದ್ದಾಳೆ.

ಸಾಗರ—ಅದೆತ ?–ಇಲ್ಲವಲ್ಲ ?

ನಯನ—ನೀನು ಬಹಳ ದುಷ್ಟೆ. ಅವಳೇ ಮೊದಲು ಮದುವೆಯಾದವಳು.

ಸಾಗರ—ಅವಳು ಬ್ರಾಹ್ಮಣರ ಹೆಂಗಸು.

ನಯನ—ಅಹುದು, ಬ್ರಾಹ್ಮಣರ ಹೆಂಗಸು! ಹಾಗಿದ್ದರೆ ಬಂದು ಗಂಡನ ಸಂಗಡ ಸಂಸಾರಮಾಡಲಿಲ್ಲವೇಕೆ ?

ಸಾಗರ—ನಾಳೆ ನಿನ್ನನ್ನು ಕಳುಹಿಬಿಟ್ಟು ನನ್ನನ್ನಿಟ್ಟುಕೊಂಡು ಸಂಸಾರ ಮಾಡಿದರೆ ನೀನು ಜಾತಿಭ್ರಷ್ಟೆಯಾದೆಯೊ ?

ನಯನ—ನೀನು ನನ್ನನ್ನು ಬೈಯುತ್ತೀಯಾ ? ನಿನ್ನ ಮೋರೆಸುಡ!

ಸಾಗರ—ನೀನೇಕೆ ಬೈದೆ ? ನಿನ್ನ ಮುಖಸುಟ್ಟರು !!

ನಯನ—ಹಾಳಾಯಿತು! ನಾನು ಹೋಗಿ ಯಜಮಾನಿಗೆ ಹೇಳಿ ಬಿಡುತ್ತೇನೆ. ನೀನು ದೊಡ್ಡವರ ಮಗಳಾದ ಮಾತ್ರಕ್ಕೆ ನನ್ನನ್ನು ಮನಸ್ಸಿಗೆ ಬಂದ ಹಾಗೆ ಹೀನೈಸಿ ಹೇಳುವುದೆ ?

ಹೀಗೆಂದು ಹೇಳಿ ನಯನತಾರೆಯು (ಉರಫ್, ಕರಿಗೂಬೆ) ಸರಭರ ಹಿಂದಿರುಗಿ ಹೋಗುತ್ತಿದ್ದಳು. ಆಗ ಸಾಗರೆಯು ಏನೋ ತಂಟೆಗೆ ಬರುವುದೆಂದು, ‘ಇಲ್ಲ ಅಕ್ಕ! ಹಿಂದಿರುಗು, ಬಾಗಿಲ ತೆಗೆಯುತ್ತೇನೆ’ ಎಂದಳು.

ನಯನತಾರೆಯು ಕೋಪಿಸಿಕೊಂಡಿದ್ದಳು. ಹಿಂದುರಿಗಿ ಬರಲಿಷ್ಟವಿಲ್ಲ. ಆದರೆ ಸಾಗರೆಯು ಬಾಗಿಲ ಹಾಕಿಕೊಂಡು ಎಷ್ಟೊಂದು ತಿಂಡಿಯನ್ನು ತಿನ್ನುತ್ತಾಳೆಂಬುದನ್ನು ನೋಡಬೇಕೆಂದು ಮನಸ್ಸಿದ್ದುದರಿಂದ ಹಿಂದಿರುಗಿ ಬಂದಳು. ಕೊಠಡಿಯೊಳಗೆ ಬಂದು ನೋಡಲಾಗಿ, ತಿಂಡಿ ಇರಲಿಲ್ಲ. ಮತ್ತೊಬ್ಬಳು ಕುಳಿತಿದ್ದಳು. ಅವಳನ್ನು ಕಂಡು, ‘ಇವಳಾರು?’ ಎಂದು ಕೇಳಿದಳು.

ಸಾಗರ—ಪ್ರಫುಲ್ಲೆ.

ನಯನ—ಪುನಃ, ಅವಳಾರು ?

ಸಾಗರ—ಬಹಿಷ್ಕಾರಪಟ್ಟ ಸೊಸೆ.

ನಯನ—ಇಷ್ಟೊಂದು ಸುಂದರಿಯೆ ?

ಸಾಗರ— ನಿನಗಿಂತ ಹೆಚ್ಚು ಸುಂದರಿಯರು ಪ್ರಪಂಚದಲ್ಲುಂಟೆ ? ನಿನ್ನಷ್ಟು ಚಲುವೆಯಲ್ಲ

ನಯನ—ನನ್ನ ಚೆಲುವು ಕಂಡೇ ಇದೆ. ನೀನು ಚೆಲುವೆಯೆಂದು ಹೆಮ್ಮೆಕೊಚ್ಚುವವಳು. ನಿನ್ನಷ್ಟು ಚಲುವೆಯರಾರೂ ಇಲ್ಲ.

# ಐದನೆಯ ಪರಿಚ್ಛೇದ

---

ಇತ್ತಲಾಗಿ ಕರ್ತನು ರಾತ್ರಿ ಎಂಟು ಗಂಟೆಗೆ ಮನೆಯೊಳಗೆ ಊಟಕ್ಕೆ ಬಂದನು. ಯಜಮಾನಿಯಾಗಲೇ ವ್ಯಜನಹಸ್ತೆಯಾಗಿ ಭೋಜನ ಪಾತ್ರದ ಬಳಿ ನಿಂತು ಪ್ರಕಾಶಿಸುತ್ತಾಳೆ-ಏಕೆ? ನೊಣಗಳು ಹಾರಾಡುವುದಿಲ್ಲ-ರಾತ್ರಿ ಹೊತ್ತು-ಆದರೂ ನಾರಿಯ ಧರ್ಮವನ್ನು ಪಾಲನೆಮಾಡುವುದಕ್ಕೆ ಸಲವಾಗಿ ನೊಣಗಳನ್ನೋಡಿಸುವುದಕ್ಕೆ ಬೀಸಣಿಗೆಯನ್ನು ಹಿಡಿದು ನಿಂತಿದ್ದಾಳೆ. ಹಾ! ಪಾಪಿಷ್ಠೆಯಾದಾವ ನರಾಧಮೆಯು ಪರಮ ರಮಣೀಯವಾದೀ ರಮಣಿಯ ಧರ್ಮವನ್ನು ಲೋಪ ಮಾಡುವಳೋ? ಯಜಮಾನಿಗೆ ಐದುಮಂದಿ ದಾಸಿಯರಿದ್ದಾರೆ. ಆದರೆ ಪತಿಯಸೇವೆ!- ಮತ್ತಾರು ಬಂದುನಿಂತು ಆ ಸೇವೆಯನ್ನು ಮಾಡಿ ನಿರ್ವಹಿಸಲಾದೀತು! ಆವ ಪಾಪಿಷ್ಠೆಯು ಅಂತಹ ಧರ್ಮಲೋಪಮಾಡುವಳೊ, ಹೆ, ಆಕಾಶ! ಅಂತಹವಳ ತಲೆಯಮೇಲೆ ನಿನ್ನ ವಜ್ರಾಘಾತವು ಬೀಳಲಿ!

ಕರ್ತನು ಊಟವನ್ನು ಮಾಡುತ್ತ, 'ಜಾತಿಗೆಟ್ಟಾ ಹುಡುಗಿಯು ತೊಲೆದು ಹೊರಟು ಹೋದಳೊ?' ಎಂದನು.

ಗೃಹಿಣಿಯು ನೊಣಗಳನ್ನೋಡಿಸುತ್ತ ಮೂಗನ್ನು ಸುರುಗಿಸಿ ಮುಖುರವನ್ನು ಹಾರಿಸುತ್ತ, 'ರಾತ್ರಿಯ ಹೊತ್ತಿನಲ್ಲಿ ಅವಳೆಲ್ಲಿಗೆ ಹೋದಾಳು? ರಾತ್ರಿಯಲ್ಲೊಬ್ಬರ ಗುರುತೂ ಇಲ್ಲದ ಅತಿಥಿಯಾದವರು ಬಂದರೂ, ನೀವವರನ್ನೋಡಿಸಿ ಬಿಡುವುದಿಲ್ಲ-ಸೊಸೆಯು ಲಕ್ಷ್ಮಿಯ ಹಾಗೆ ಮನೆಗೆ ಬಂದವಳನ್ನು ನಾನು ಮನೆಯಿಂದ ಹೊರಡಿಸಬೇಕಲ್ಲವೆ?' ಎಂದಳು.

ಕರ್ತ—ಅತಿಥಿಯು ಬಂದರೆ ಅತಿಥಿಶಾಲೆಗೆ ಹೋಗುವನು. ಇಲ್ಲೇಕೆ ಬರಬೇಕು?

ಯಜಮಾನಿ—ಹೊರಡಿಸುವುದಕ್ಕೆ ನನ್ನ ಕೈಯಿಂದಾಗುವುದಿಲ್ಲ. ನಾನು ಮೊದಲೇ ಹೇಳಿದ್ದೇನೆ. ಹೊರಡಿಸಬೇಕಾದರೆ ನೀವೇ ಹೊರಡಿಸಬಹುದು. ಎಂತಹ ಚಲುವೆಯಾದ ಸೊಸೆ! ಆದರೆ-

ಕರ್ತ—ಜಾತಿಭ್ರಷ್ಟೆಯು ಮನೆಯಲ್ಲಿ ಅಂತಹ ಭ್ರಷ್ಟರಾದ ಸೊಸೆಯರು ಒಬ್ಬಿಬ್ಬರಿದ್ದಾರೆ. ನಾನೇ ಹೊರಡಿಸುತ್ತೇನೆ-ಅಲ್ಲೆ ಯಾರೆ! ವ್ರಜನನ್ನು ಕರೆ.

ವ್ರಜನು ಕರ್ತನ ಮಗನ ಹೆಸರು. ಒಬ್ಬ ಪರಿಚಾರಿಕೆಯು ಹೋಗಿ ವ್ರಜೇಶ್ವರನನ್ನು ಕರೆತಂದಳು. ವ್ರಜೇಶ್ವರನಿಗೆ ಇಪ್ಪತ್ತು ಇಪ್ಪತ್ತೆರಡು ವರ್ಷಗಳು! ನಿರ್ದೋಷವಾದ ಸೌಂದರ್ಯವುಳ್ಳ ಪುರುಷ. ವಿನೀತಭಾವದಿಂದ ಬಂದು ತಂದೆಯ ಹತ್ತಿರ ನಿಂತನು-ಮಾತಾಡುವುದಕ್ಕೆ ಧೈರ್ಯವಿಲ್ಲ.

ಹರವಲ್ಲಭನು ಮಗನನ್ನು ನೋಡಿ ' ಎಲಾ, ಮಗು ! ನಿನಗೆ ಮೂರು ಮಂದಿ ಹೆಂಡಂದಿರುವುದು ಗೊತ್ತುಂಟೆ ? ' ಎಂದು ಕೇಳಿದನು. ವ್ರಜನು ಸುಮ್ಮನಿದ್ದನು. " ಮೊದಲು ಮದುವೆಯಾದವಳ ಜ್ಞಾಪಕವಿರಬೇಕು. ಅವಳೊಬ್ಬ ಜಾತಿಭ್ರಷ್ಟೆಯ ಮಗಳು. "

ವ್ರಜನು ನೀರವ—ಮಾತಿಲ್ಲ. ಇಪ್ಪತ್ತೆರಡು ವರುಷದ ಮಗನು ತಂದೆಯೆದಿರಿಗೆ ತಲೆಯಮೇಲೆ ಸಿಡ್ಲುಬಿದ್ದರೂ ಆ ಕಾಲದಲ್ಲಿ ಮಾತಾಡುತ್ತಿರಲಿಲ್ಲ. ಈ ಕಾಲದಲ್ಲಿ ಮೂರ್ಖರಾದ ದುಷ್ಟಹುಡುಗರು ಎಷ್ಟೆಷ್ಟು ವಯಸ್ಸಾಗುವುದೋ ಅಷ್ಟಷ್ಟು ದೊಡ್ಡ ದೊಡ್ಡ ಲೆಕ್ಚರು (Lecture) ಗಳನ್ನೋದತೊಡಗುತ್ತಾರೆ.

ಕರ್ತನು ಹೇಳತೊಡಗಿದನು. ' ಆ ಹುಡುಗಿಯು ಇಂದಿಲ್ಲಿಗೆ ಬಂದಿದ್ದಾಳೆ. ಏನು ಮಾಡಿದರೂ ಹೋಗದೇ ಇದ್ದಾಳೆ; ನಿನ್ನ ಗರ್ಭಧಾರಿಣಿಗೆ ಅವಳನ್ನು ಹೊಡಿದು ಹೊರಡಿಸೆಂದು ಹೇಳಿದೆನು ; ಹೆಂಗಸು ಹೆಂಗಸಿನ ಮೇಲೆ ಕೈ ಮಾಡುತ್ತಾಳೆಯೇ ? ಆ ಕೆಲಸವನ್ನು ನೀನು ಮಾಡಬೇಕು ; ನಿನಗೇವೇ ಅಧಿಕಾರ, ಮತ್ತಾರೂ ಮುಟ್ಟಕೂಡದು ; ನೀನು ಈಗಲೇ ಅವಳನ್ನು ಹೊಡಿದು ಮನೆಯಿಂದ ಹೊರಡಿಸಿಬಿಡು ; ಇಲ್ಲದಿದ್ದರೆನಗೆ ನಿದ್ರೆಯು ಬರುವುದಿಲ್ಲ. '

ಯಜಮಾನಿ—ಮಗು ! ಛಿ ! ಹೆಂಗಸಿನ ಮೇಲೆ ಕೈಯೆತ್ತಬೇಡ. ಅವರ ಮಾತನ್ನು ಕೇಳಲೇ ಬೇಕು. ಆದಕ್ಕೆ ನಾನು ಪ್ರತಿ ಹೇಳುವುದಿಲ್ಲ. ನನ್ನ ಮಾತನ್ನೂ ಸ್ವಲ್ಪ ನಡಿಸಬೇಕು. ಹೇಗೋ ಹಾಗೆ ಮಾಡಿ ಒಳ್ಳೆಯ ಮಾತನ್ನು ಹೇಳಿ ಅವಳನ್ನು ಕಳುಹಿಸಿಕೊಡು.

ವ್ರಜೇಶ್ವರನು ತಂದೆಯ ಮಾತಿಗೆ " ಅಪ್ಪಣೆ ಪ್ರಕಾರ " ವೆಂದೂ ತಾಯಿಯ ಮಾತಿಗೆ " ಒಳ್ಳೆದಮ್ಮ " ಎಂದೂ ಹೇಳಿದನು.

ಹೀಗೆ ಹೇಳಿ ವ್ರಜೇಶ್ವರನು ಅಲ್ಲಿಯೇ ಸ್ವಲ್ಪ ನಿಂತುಕೊಂಡನು. ಆ ಅವಕಾಶದಲ್ಲಿ, ಗೃಹಿಣಿಯು ಕರ್ತನನ್ನು ಕುರಿತು, ' ನೀವು ಸೊಸೆಯನ್ನು ಹೊರಡಿಸುತ್ತೀರಿ. ಸೊಸೆಯು ಹೊಟ್ಟೆ ಹೊರಕೊಳ್ಳುವ ಬಗೆ ಹೇಗೆ ? ' ಎಂದಳು.

ಕರ್ತ—ಕೊಟ್ಟಕುಟ್ಟಲಿ—ಕಳವು ಮಾಡಲಿ—ಡಕಾಯಿತಿ ಮಾಡಲಿ—ಭಿಕ್ಷೆ ಬೇಡಲಿ.

ಗೃಹಣಿ—ವ್ರಜ ! ನೀನು ಅವಳನ್ನು ಹೊರಡಿಸುವಾಗಾ ಮಾತನ್ನವಳಿಗೆ ಹೇಳಿಬಿಡು. ಅವಳು ಕೇಳಿದ್ದಳು. ನಾನಾ ಮಾತನ್ನು ಹೇಳಲಾರೆ. ಮನೆಯವರಿಗೆ ಮಕ್ಕಳ ಮೇಲೆ ಮಮತೆಯಿಲ್ಲದಿದ್ದರೆ ನಾನೇನುಮಾಡಿತೀರೀತು. ಹಣೆಯಲ್ಲಿ ಬರೆದಿದ್ದುದಾಗುತ್ತದೆ. ಸೃಷ್ಟಿಸಿದ ದೇವರು ಅನ್ನಗೊತ್ತು ಮಾಡಿಟ್ಟದ್ದಾನೆ. ಅಂತಹ ಮಾತುಗಳನ್ನೆಲ್ಲ ಏಕೆ ಹೇಳಬೇಕೋ ? ನಿಮ್ಮ ಪಾಡು. ನೀನುಂಟು ; ಅವರುಂಟು ; ಮಧ್ಯೆ ನಾನೇಕೆ ಮಾತಾಡಲಿ.

ವ್ರಜೇಶ್ವರನು ತಂದೆಯ ಅಪ್ಪಣೆಯನ್ನು ಪಡೆದು ಬ್ರಹ್ಮಠಾಕುರಿಣೆಯ ಬಳಿ

ಹೋಗಿ ದರ್ಶನವನ್ನು ಕೊಟ್ಟನು. ನೋಡಲಾಗಿ ಅವಳು ಒಂದೇ ಚಿತ್ತದಿಂದ ಜಪಮಾಲೆಯನ್ನು ತಿರಿಗಿಸುತ್ತಾ ಜಪವನ್ನು ಮಾಡುತ್ತಿದ್ದವಳನ್ನು ಕುರಿತು, 'ಠಾಕೂರಮ್ಮ!' ಎಂದನು.

ಬ್ರಹ್ಮ—ಏನೊ? ಮಗು!

ವ್ರಜ—ಇಂದೇನೋ ಒಂದು ಹೊಸ ಸಮಾಚಾರವಂತಿದೆ!

ಬ್ರಹ್ಮ—ಹೊಸದೇನು? ಸಾಗರೆಯು ನನ್ನ ರಾಟೆಯನ್ನೊಡಿದು ಬಿಟ್ಟಳೇನು? ಹುಡುಗಾಟದವಳು, ರಾಟೆತಿರುಗಿಸುವುದಕ್ಕವಳಿಗೆ ಬಹಳ ಆಶೆ.

ವ್ರಜ—ಅದಲ್ಲ, ಅದಲ್ಲ. ಇಂದು—

ಬ್ರಹ್ಮ—ಸಾಗರೆಗೆ ಏನನ್ನೂ ಹೇಳಬೇಡ. ನೀವು ಚೆನ್ನಾಗಿದ್ದರೆ ನನಗೆ ರಾಟೆಗೆ ಕಡಿಮೆಯಿಲ್ಲ. ನಾನು ಮುದುಕಿ, ಹೆಣ್ಣು ಹೆಂಗಸು.

ವ್ರಜ—ನಾನು ಹೇಳುವ ಮಾತನ್ನು ಪೂರಾ ಕೇಳಬಾರದೆ?

ಬ್ರಹ್ಮ—ಮುದಿಹೆಂಗಸು. ಸ್ವಲ್ಪ ನೂಲು ನೂತು—

ವ್ರಜ—ನನ್ನ ಮಾತನ್ನು ಕೇಳು. ಇಲ್ಲದಿದ್ದರೆ ನಿನ್ನ ಕುದುರೆಗಳನ್ನೆಲ್ಲಾ ನಾನೇ ಬಡಿದು ಹಾಕುಬಿಡುತ್ತೇನೆ.

ಬ್ರಹ್ಮ—ಏನು ಹೇಳುತ್ತಿ? ರಾಟೆಯ ಮಾತಲ್ಲವಲ್ಲ?

ವ್ರಜ—ಅದಲ್ಲ-ನನಗೆ ಇಬ್ಬರು ಬ್ರಾಹ್ಮಣಿಯರಿರುವುದು ಗೊತ್ತಿದೆಯೆಷ್ಟೆ?

ಬ್ರಹ್ಮ—ಬ್ರಾಹ್ಮಣಿ? ಅಮ್ಮಮ್ಮ! ಬ್ರಾಹ್ಮಣಿ ನಯನೆಯು ಹೇಗೋ ಬ್ರಾಹ್ಮಣಿ ಸಾಗರೆಯೂ ಹಾಗೆಯೇ. ಕೇಳಿದರೆ ನನ್ನ ಮೂಳೆಗಳೆಲ್ಲ ಅಲುಗುತ್ತವೆ. ಕೇವಲ ರೂಪದ ಮಾತನ್ನು ಹೇಳುತ್ತೀಯೋ? ರೂಪದ ಮಾತನ್ನು ಎಲ್ಲಿ ಕಲಿತಿಯೊ, ನನ್ನ ಕಂದ!

ವ್ರಜ—ರೂಪವು ಹಾಗಿರಲಿ—

ಬ್ರಹ್ಮ—ಹಾಗಿರಲಿ ಎಂದರೆ ನಾನು ಬಿಟ್ಟುಬಿಡುತ್ತೇನೆಯೆ? ಅವರು ಬಿಟ್ಟಾರೆ? ನಾನು ಅವರಿಗೆ ವಿಹಂಗಮ ವಿಹಂಗಮಿಯರ ಕಥೆಯನ್ನು ಹೇಳಿದೆನು ವಿಹಂಗಮ ವಿಹಂಗಮಿಯರ ಕಥೆಯನ್ನು ಕೇಳಿದ್ದೀಯೊ? ಹೇಳುತ್ತೇನೆ, ಕೇಳು. ಒಂದು ವನದಲ್ಲಿ ಒಂದು ಬೂರಗದ ಮರ. ಆ ಮರದ ಮೇಲೆ ವಿಹಂಗಮ ವಿಹಂಗಮಿ ವಾಸಮಾಡುತ್ತಿದ್ದವು. ವಿಹಂಗಮವು ಗಂಡುಹಕ್ಕಿ—

ವ್ರಜ—ಹಾಳಾಯಿತು! ಏನನ್ನು ಹೇಳುತ್ತಿ? ಠಾಕೂರಾಣಿ! ನಿನ್ನ ಕಥೆ ಯಾರಿಗೆ ಬೇಕು.? ನಾನು ಹೇಳುವುದನ್ನು ಕೇಳು.

ಬ್ರಹ್ಮ—ಮತ್ತೇನು ನಿನ್ನ ಮಾತು? ನೀನು ಕಥೆಯನ್ನು ಕೇಳುವುದಕ್ಕೆ ಬಂದಿರುತ್ತಿ. ನಿನಗೆ ಬೇರೆ ಕೆಲಸವೇನಿದೆ?

ವ್ರಜೇಶ್ವರನು ಮನಸ್ಸಿನಲ್ಲಿ, 'ಈ ಮುದುಕಿಗೆ ಬೇಗನೆ ವಿಷ್ಣುಪಾದ ಪ್ರಾಪ್ತಿಯುಂಟಾಗಬಾರದೆ!' ಎಂದಂದುಕೊಂಡು ಪ್ರಕಾಶ್ಯವಾಗಿ, 'ನನಗಿಬ್ಬರು

ಬ್ರಾಹ್ಮಣಿಯರು—ಮತ್ತೊಬ್ಬಳು ಬಹಿಷ್ಕೃತೆಯಾದವಳ ಮಗಳು—ಆ ಬಹಿಷ್ಕೃತೆಯ ಮಗಳು ಇಂದು ಬಂದಿದ್ದಾಳೆಯಲ್ಲವೆ ? ' ಎಂದನು.

ಬ್ರಹ್ಮ—ಭಲಾ ! ಭಲಾ ! ಅದೀಗ ಸರಿ ! ಅವಳು ಬಹಿಷ್ಕೃತೆಯ ಮಗಳೆ! ಬ್ರಾಹ್ಮಣರ ಹುಡುಗಿಯೋ, ಮಗು !

ವ್ರಜ—ಬಂದಿದ್ದಾಳೇನು ?

ಬ್ರಹ್ಮ—ಅಹುದು. ಬಂದಿದ್ದಾಳೆ.

ವ್ರಜ—ಎಲ್ಲಿದ್ದಾಳೆ ? ಒಮ್ಮೆ ನೋಡಬೇಕಲ್ಲ ?

ಬ್ರಹ್ಮ—ಅಹುದು, ನಾನು ಅವಳನ್ನು ನಿನಗೆ ತೋರಿದರೆ ನಿಮ್ಮ ತಂದೆ ತಾಯಿಗಳಿಗೆ ಕಣ್ಣು ಕೆಂಪಾಗುತ್ತದೆ ! ಅದಕ್ಕೆ ಬದುಲಾಗಿ ವಿಹಂಗಮ ವಿಹಂಗಮಿಯ ಕಥೆಯನ್ನು ಹೇಳುತ್ತೇನೆ ; ಕೇಳು.

ವ್ರಜ—ಭಯವಿಲ್ಲ. ಯಜಮಾನರೂ ಯಜಮಾನಿಯೂ ನನ್ನನ್ನು ಕಳುಹಿಸಿ, ಅವರನ್ನು ಮನೆಯಿಂದ ಹೊರಡಿಸೆಂದು ಹೇಳಿದ್ದಾರೆ. ಅವಳನ್ನು ನೋಡದವರೆ ಮನೆಯಿಂದ ಹೊರಡಿಸುವುದು ಹೇಗೆ ? ನೀನು ಅಜ್ಜಿ ಅವಳಿರುವ ಸ್ಥಳವನ್ನು ಗೊತ್ತುಮಾಡಿಕೊಳ್ಳಲು ನಿನ್ನ ಬಳಿಗೆ ಬಂದೆನು.

ಬ್ರಹ್ಮ—ಅಣ್ಣ ! ನಾನು ಮುದಿ ಹೆಂಗಸು ; ಕೃಷ್ಣನಾಮವನ್ನು ಜಪಿಸುತ್ತೇನೆ. ಮೊಸರಿನಲ್ಲಿ ಅವಲಕ್ಕಿಯನ್ನು ನೆನಸಿ ತಿನ್ನುತ್ತೇನೆ. ಗುಬ್ಬೀ ಕಥೆ ಬೇಕಾದರೆ ಹೇಳುತ್ತೇನೆ ; ಕೇಳು. ನಿನ್ನ ಬಹಿಷ್ಕೃತೆಯ ಮಾತನ್ನೂ ಕಾಣೆ. ನಿನ್ನ ಬ್ರಾಹ್ಮಣಿಯರ ಮಾತನ್ನೂ ಕಾಣೆ.

ವ್ರಜ—ಅಯ್ಯೋ ! ಗ್ರಹಚಾರವೆ ! ಕೇಳುವ ಮಾತು ಒಂದು, ನೀನು ಹೇಳುವುದೊಂದಾಗಿದೆ. ಮುದಿಗೊಡ್ಡು ; ಹೀಗೆ ಮಾಡಿದರೆ ನೀನೆಲ್ಲಾದರೂ ಕಪ್ಪರ ಕೈಗೆ ಸಿಕ್ಕಿ ಬೀಳದಿರುವುದಿಲ್ಲ.

ಬ್ರಹ್ಮ—ಅಂತಹ ಮಾತನ್ನು ಹೇಳಬೇಡ. ನನಗೆ ಕಪ್ಪರ ಸುದ್ದಿಯನ್ನು ಕೇಳಿದರೆ ಬಹಳ ಭಯವಾಗುತ್ತದೆ. ನಿನಗೆ ತೋರಿಸಬೇಕೇನು ?

ವ್ರಜ—ಅದಕ್ಕೇನೆ ಬಂದದು. ನಿನ್ನ ಜಪಮಾಲೆಯನ್ನು ನೋಡುವುದಕ್ಕೆ ಬಂದೆನೆ ?

ಬ್ರಹ್ಮ—ಸಾಗರೆಯ ಹತ್ತರ ಹೋಗು.

ವ್ರಜ—ಸವತಿಯು ಸವತಿಯನ್ನು ನೋಡುವುದುಂಟೆ ?

ಬ್ರಹ್ಮ—ನೀನು ಹೋಗುವುದಿಲ್ಲ. ಹಾಗಾದರೆ ಬಿಡು. ಸಾಗರೆಯು ನಿನ್ನನ್ನು ಕರೆಯುತ್ತಾಳೆ. ಕೋಣೆಯಲ್ಲಿ ಹೋಗಿ ಕುಳಿತ್ತಿದ್ದಾಳೆ. ನಯನೆ ಇನ್ನು ನಿನಗೆ ಸರಿಯಾದವಳಲ್ಲ.

ವ್ರಜ—ನಯನೆಗೆ ಹೇಳಲೊ ? ಮತ್ತೊಂದು ನಿನ್ನ ಕದುರನ್ನು ಮುರಿದು ಹಾಕುತ್ತಾಳೆ.

ಬ್ರಹ್ಮ—ಆಗಲಪ್ಪ! ಸಾಗರಿಯ ಹತ್ತಿರವಾದರೂ ಹೋಗು, ನಯನೆಯ ಹತ್ತಿರವಾದರೂ ಹೋಗು. ನಿನ್ನ ಇಷ್ಟ.

ವ್ರಜ—ಹೋದರಾ ಬಹಿಷ್ಕೃತೆಯನ್ನು ನೋಡಬಹುದೊ?

ಬ್ರಹ್ಮ—ಮುದುಕಿಯ ಮಾತನ್ನು ಕೇಳುವುದಿಲ್ಲ; ಏನು ಮೈಯುರಿಸುತ್ತೀಯೊ, ಮಗು! ನನ್ನ ಜಪಮಾಲೆ ಪೂರೈಸಲಿಲ್ಲ, ನಿನ್ನ ಅಜ್ಜಂದಿರಿಗೆ ಅರವತ್ತು ಮದುವೆಯಾಗಿದ್ದಿತು. ಆದರೆ ಅವರು, ಹದಿನಾಲ್ಕು ವರ್ಷದವಳೇ ಆಗಲಿ, ಅರವತ್ತು ವರ್ಷದವಳೇ ಆಗಲಿ, ಆರೇ ಆಗಲಿ, ಕರೆದರೆ ಅವರು ಬರುವುದಿಲ್ಲವೆಂದು ಹೇಳಿದದಿನವಿಲ್ಲ.

ವ್ರಜ—ನಮ್ಮ ಅಜ್ಜಂದಿರಿಗೆ ಅಕ್ಷಯವಾದ ಮೋಕ್ಷವಾಗಲಿ, ನಾನೀಗ ಹದಿನಾಲ್ಕುವರ್ಷದವಳನ್ನು ಹುಡುಕಿಕೊಂಡು ಹೋಗುತ್ತೇನೆ. ಪುನಃ ಒಂದು ನಾಲ್ವತ್ತು ವರ್ಷದವಳನ್ನು ನೋಡುತ್ತೇನೆ.

ಬ್ರಹ್ಮ—ಹೋಗು! ಹೋಗು! ನನ್ನ ಜಪಮಾಲೆ ತಿರುಗಿಸಿ ಆಯಿತು. ನಾನು ಹೋಗಿ ನಯನೆಗೆ. ನೀನು ಬಹಳ ಹುಡುಗನಾದೆಯೆಂದು ಹೇಳುತ್ತೇನೆ.

ವ್ರಜ—ಹೇಳು; ಬೇಕಾದುದನ್ನು ಮಾಡು.

ಹೀಗೆಂದು ಹೇಳಿ ವ್ರಜೇಶ್ವರನು ಸಾಗರೆಯನ್ನು ಹುಡುಕಿಕೊಂಡುಹೋದನು.

## ಆರನೆಯ ಪರಿಚ್ಛೇದ

ಸಾಗರೆಗೆ ಅತ್ತೆಯ ಮನೆಯಲ್ಲಿ ಎರಡು ಕೊಠಡಿಗಳಿದ್ದುವು. ಒಂದುಕೊಠಡಿ ಕೆಳಗೆ, ಮತ್ತೊಂದು ಮಹಡಿಯಮೇಲೆ. ಕೆಳಗಿನ ಕೊಠಡಿಯಲ್ಲಿ ಕೂತು ಸಾಗರೆಯು ತಾಂಬೂಲ ಹಾಕಿಕೊಳ್ಳುವುದು, ಸಮವಯಸ್ಕರೊಂದಿಗೆ ಮಾತು ಕಥೆಯಾಡುವುದು, ಆಟವಾಡುವುದು, ಈ ಕೆಲಸಗಳನ್ನು ಮಾಡುವಳು. ಮೇಲಿನ ಕೊಠಡಿಯಲ್ಲಿ ರಾತ್ರಿ ಮಲಗುವಳು. ಹಗಲು ನಿದ್ರೆ ಬಂದರೆ ಅಲ್ಲಿಯೇ ಹೋಗಿ ಬಾಗಿಲ ಹಾಕಿಕೊಳ್ಳುವಳು. ಅದುಕಾರಣ ವ್ರಜೇಶ್ವರನು ಆ ಮುದುಕಿಯ ಮಾತಿಗೆ ಬೇಸರಗೊಂಡು ಅಲ್ಲಿಂದ ಹೊರಟು ಮೇಲಿನ ಕೊಠಡಿಗೆ ಹೋದನು.

ಅಲ್ಲಿ ಸಾಗರೆಯು ಇರಲಿಲ್ಲ. ಆದರೆ ಅವಳಿಗೆ ಬದುಲಾಗಿ ಮತ್ತೊಬ್ಬಳು ಕುಳಿತ್ತಿದ್ದಳು. ಅನುಭವದಿಂದ ವ್ರಜೇಶ್ವರನು ಅವಳೇ ತನ್ನ ಮೊದಲನೆಯ ಹೆಂಡತಿಯೆಂದು ತಿಳಿದುಕೊಂಡನು.

ಬಹಳ ತಂಟೆಗೆ ಬಂತು! ಇಬ್ಬರಿಗೂ ಸಂಬಂಧವೋ, ಅತ್ಯಂತ ಸಮೀಪ; ಗಂಡಹೆಂಡಂದಿರು-ಒಬ್ಬರಿಗೊಬ್ಬರು ಅರ್ಧಾಂಗರು; ಪೃಥ್ವಿಯಲ್ಲದು ಎಲ್ಲದುಕ್ಕಿಂತಂತಲೂ ಹೆಚ್ಚಾದ ಸಂಬಂಧ. ಆದರೆ ಮದುವೆಯಾದ ಬಳಿಕ ಅವಾಗಲೂ ಪರಸ್ಪರ ನೋಡಿಲ್ಲ; ಅವಾಗಲೂ ಮಾತಾಡಿಲ್ಲ; ಏನನ್ನು ಹೇಳಿ ಮಾತಿಗೆ ಪ್ರಾರಂಭಿಸಬೇಕು? ಮೊದಲಾರು ಮಾತಿಗೆ ಪ್ರಾರಂಭಿಸಬೇಕು? ಒಬ್ಬನಾದರೂ, ಮತ್ತೊಬ್ಬಳನ್ನು ಮನೆಯಿಂದ ಹೊರಡಿಸುವುದಕ್ಕೆ ಸಲವಾಗಿ ಬಂದಿದ್ದಾನೆ! ಮತ್ತೊಬ್ಬಳು

ಹೊರಡಿಸಲ್ಪಡುವುದಕ್ಕೆ ಕುಳಿತ್ತಿದ್ದಾಳೆ. ನಾವು ಪ್ರಾಚೀನರಾದ ಪಾಠಕಮಹಾಶಯರನ್ನು ಕುರಿತು ಕೇಳುವುದೇನೆಂದರೆ ;–ಮಾತಿಗಾವ ಪ್ರಕಾರ ಪ್ರಾರಂಭಿಸುವುದುಚಿತವಾದುದು. ? ಯೋಚಿಸಿ ಹೇಳಿರಿ.

ಉಚಿತವಾದುದಾವುದೋ ಅದು ಹಾಗಿರಲಿ. ಉಚಿತವಾದ ಪ್ರಕಾರ ಆವುದೂ ನಡೆಯುವುದಿಲ್ಲ. ಬಹಳ ಹೊತ್ತು ಇಬ್ಬರಲ್ಲಾರೊಬ್ಬರೂ ಮಾತಾಡಲಿಲ್ಲ. ಕಡೆಗೆ ಪ್ರಫುಲ್ಲೆಯು ಸ್ವಲ್ಪ ನಕ್ಕು, ಸ್ವಲ್ಪಮಾತ್ರ ನಕ್ಕು, ಸೆರಗನ್ನು ಸರಿಮಾಡಿಕೊಂಡು ವ್ರಜೇಶ್ವರನ ಪಾದಗಳಿಗೆ ಸಮೀಪ ಬಂದು ಪಾದಗಳನ್ನು ಮುಟ್ಟಿ ಪ್ರಣಾಮವನ್ನು ಮಾಡಿದಳು.

ವ್ರಜೇಶ್ವರನು ತಂದೆಯ ಹಾಗಲ್ಲ. ಪ್ರಣಾಮವನ್ನು ಗ್ರಹಣ ಮಾಡಿ ತೋಳು ಹಿಡಿದು ಪ್ರಫುಲ್ಲೆಯನ್ನೆಬ್ಬಿಸಿ ಮಂಚದಮೇಲೆ ಕುಳ್ಳಿರಿಸಿದನು. ಕುಳ್ಳಿರಿಸಿ ತಾನೂ ಅವಳ ಪಕ್ಕದಲ್ಲಿ ಕುಳಿತುಕೊಂಡನು.

ಪ್ರಫುಲ್ಲೆಯ ಮುಖಕ್ಕೆ ಗೋಷೆಯು ಪರದೆ ಇದ್ದಿತು. ಆ ಕಾಲದ ಮುಖಪರದೆಯು ಈ ಕಾಲದ ಹೆಂಗಸರ ಮುಖಪರದೆಯಾಗಿರಲಿಲ್ಲ. ಧಿಕ್ ! ಈ ಕಾಲ! ಆ ಮುಖಪರದೆಯು ಪ್ರಫುಲ್ಲೆಯನ್ನೆತ್ತಿ ಕೂಡಿಸುವಾಗ ಸರಿದು ಬಿದ್ದುಹೋಯಿತು. ವ್ರಜೇಶ್ವರನು ನೋಡಲಾಗಿ ಪ್ರಫುಲ್ಲೆಯು ಅಳುತ್ತಿದ್ದಳು. ವ್ರಜೇಶ್ವರನು ತಿಳಿಯದೆ, ಗೊತ್ತುಗುರಿಯಿಲ್ಲದೆ, ಆಃ! ಛೀ! ಛೀ! ಇಪ್ಪತ್ತೆರಡು ವರ್ಷದ ಹುಡುಗನಾಗಿಯೂ–ಧಿಕ್ ! ವ್ರಜೇಶ್ವರನು ತಿಳಿಯದೆ ಗೊತ್ತುಗುರಿಯಿಲ್ಲದೆ, ಸ್ವಲ್ಪವೂ ಯೋಚಿಸದೆ, ಚಿಂತಿಸದೆ, ಕಣ್ಣಿನಿಂದ ಹರಿದು ಬೊಟ್ಟುಬೊಟ್ಟಾಗಿ ಕಣ್ಣಿನ ಕೆಳಗೆ ಬಂದು ಕಂಬನಿಯು ಕೂಡುವ ಸ್ಥಳದಲ್ಲಿ—ಆಃ ! ಛೀ ! ಛೀ ! ಛೀ !—ಅವನು ಹಠಾತ್ತಾಗಿ ಚುಂಬನ ಮಾಡಿಬಿಟ್ಟನು ! ಗ್ರಂಥಕಾರರೇನೋ ಹಳೇ ಸ್ಕೂಲಿಗೆ ಸೇರಿದವರು, ಬರೆಯುವುದಕ್ಕೆ ಲಜ್ಜೆಯಿಲ್ಲ. ಆದರೆ ಪಾಶ್ಚಾತ್ಯ ನಾಗರಿಕತೆಯಿಂದ ಪರಿಶುದ್ಧವಾಗಿ ಸುಶಿಕ್ಷಿತವಾದ ರುಚಿಯುಳ್ಳ (Of good and refind taste) ನವೀನ ಪಾಠಕಮಹಾಶಯರು ಇಲ್ಲಿಗೇ ಪುಸ್ತಕವನ್ನೋದುವುದನ್ನು ನಿಲ್ಲಿಸಿಬಿಡುವರೆಂದು ನಾವು ಖಂಡಿತವಾಗಿ ಭರವಸೆಯುಳ್ಳವರಾಗಿದ್ದೇವೆ, ಅದಕ್ಕೆ ಸಲವಾಗಿಯೇ ಇಂಗ್ಲೀಷು ಬಂದವರು ಕನ್ನಡ ಪುಸ್ತಕಗಳನ್ನೋದಕೂಡದು. ಅವರು ಕನ್ನಡ ಪುಸ್ತಕವನ್ನೋದುತ್ತಾರೆಂದು ಹೇಳುವದವರಿಗೆ ಎಷ್ಟೋ ಅವಮಾನಮಾಡಿದಂತಾಗುತ್ತದೆ. ಅವರು ಕನ್ನಡ ಪುಸ್ತಕಗಳನ್ನು ಸರ್ವಥಾ ಓದಕೂಡದು. ಓದಿದರೆ ಅವರಾ ಇಂಗ್ಲೀಷು ಹುಟ್ಟಳಿದು ಹೋಗುತ್ತದೆ. ಬಾಯಿಗೆ ದರ್ಭೆಹಾಕಿ ಸುಡಬೇಕಾಗುತ್ತದೆ. ಆ ಹುಟ್ಟನುಳುಹುವುದಕ್ಕಾದರೂ ಓದದಿರಬೇಕು. ಆ ಹಾಳು ಶಬ್ದಗಳನ್ನು ಉಚ್ಚರಿಸಬೇಕಾದರೆ ಹಲ್ಲೂ ನಾಲಿಗೆ ತಿರುಗದೆ ದವಡೆ ಬಾಯಿಬಿರಿದು ಹೋಗುತ್ತದೆ ! !

ವ್ರಜೇಶ್ವರನಾ ಅಶ್ಲೀಲತೆಯ ದೋಷದಿಂದ ತಾನೂ ದೂಷಿತನಾಗಿ ಗ್ರಂಥ

ಕಾರರಾದ ನಮ್ಮನ್ನೂ ಆ ದೋಷದಲ್ಲಿ ದೋಷಿಗಳನ್ನಾಗಿ ಮಾಡಲು ಕಾರಣನಾಗಿ, ನಿರ್ಜೋಥೆಯಾದಾ ಪ್ರಫುಲ್ಲೆಯೂ ಮನಸ್ಸಿನಲ್ಲಿ ಅಂತಹ ಮುಖಚುಂಬನ ಹಾಗೆ ಪವಿತ್ರವಾದ ಪುಣ್ಯಮಯವಾದ ಕಾರ್ಯಕ್ಕಿಂತಲೂ ಮಿಗು ಪವಿತ್ರವಾದುದೀ ಪ್ರಪಂಚದಲ್ಲಿ ಮತ್ತಾವ ಕಾರ್ಯವೂ ಇರಲಾರದೆಂದು ಭಾವಿಸಿಕೊಂಡು ಗಂಡನ ಪಕ್ಕದಲ್ಲಿ ಕುಳಿತಿರುವ ಸಮಯದಲ್ಲಿ ಬಾಗಿಲಲ್ಲಾರೋ ಮುಖವನ್ನು ಹಾಕಿ ಹಣಕಿ ನೋಡಿದಂತಾಯಿತು. ಆ ಮುಖದಲ್ಲಿ ಮುಗುಳುನಗೆಯಿದ್ದಂತೆ ಕಂಡಿತು. ಕೈಯ ಲ್ಲಿದ್ದ ಆಭರಣಗಳ ಶಬ್ದವಾದಂತಾಯಿತು. ವ್ರಜೇಶ್ವರನು ಅತ್ತಕಡೆ ತಿರುಗಿ ನೋಡಿ ದನು. ನೋಡಲಾಗಿ ಮುಖವು ಅತ್ಯಂತ ಸುಂದರವಾಗಿದ್ದಿತು. ಕಪ್ಪಾದ ಮುಂಗುರುಳು; ಅದರ ಮೇಲೆ ಮುಖಪರದೆ ಇಳೀಬಿದ್ದಿದ್ದಿತು. ಮುಖದ ಪರದೆ ಯೊಳಗೆ ಪದ್ಮಪಲಾಶದಂತೆ ಕಣ್ಣು; ರಂಗುರಂಗಾದಾ ಓಷ್ಠಾಧರದಲ್ಲಿಮುಗುಳು ನಗೆ. ಗುರ್ತಿಸಿನೋಡಲಾಗಿ ಅದು ಸಾಗರೆಯ ಮುಖವಾಗಿದ್ದಿತು. ಸಾಗರೆಯುಗಂಡನಿಗೆ ಒಂದುಬೀಗವನ್ನೂ ಅದರ ಕೈಯನ್ನೂ ತೋರಿದಳು. ಅವಳುಹುಡುಗಿಯಾದುದರಿಂದ ಗಂಡನ ಸಂಗಡ ಹೆಚ್ಚು ಮಾತಾಡುತ್ತಿರಲಿಲ್ಲ. ವ್ರಜನಿಗೆ ಏನೇನೂ ಗೊತ್ತಾಗಲಿಲ್ಲ. ಆದರೆ ಗೊತ್ತಾಗಲು ಬಹಳ ಹೊತ್ತು ಹಿಡಿಯಲಿಲ್ಲ. ಸಾಗರೆಯೂ ಹೊರಗೆ ನಿಂತು ಬಾಗಿಲನ್ನೆಳೆದುಕೊಂಡು ಹೊರಗಿನ ಚಿಲುಕವನ್ನು ಹಾಕಿ, ಕೊಂಡಿಗೆ ಬೀಗವನ್ನು ತಗಲಿಸಿ ಬೀಗ ಹಾಕಿ ಬೀಗದ ಕೈಯನ್ನು ತೆಗೆದುಕೊಂಡು ದುಡುದುಡು ಹೊರಟು ಹೋದಳು. ವ್ರಜೇಶ್ವರನು ಬೀಗ ಹಾಕಿದ ಶಬ್ದವನ್ನು ಕೇಳಿ, 'ಏನು ಮಾಡುತ್ತಿ? ಸಾಗರೆ!' ಎಂದು ಕೂಗಿದನು. ಸಾಗರೆಯು ಆವದನ್ನೂ ಕಿವಿಗೆ ಹಾಕಿಕೊಳ್ಳದೆ ಹೊರಟುಹೋದಳು. ಹೋಗಿ ಬ್ರಹ್ಮಠಾಕುರಾಣಿಯ ಹಾಸಿಗೆಯ ಮೇಲೆ ಮಲಗಿ ಕೊಂಡಳು.

ಬ್ರಹ್ಮಠಾಕೂರಿಣಿಯು, 'ಏನಮ್ಮ! ಏನಾಯಿತೆ? ಸಾಗರೆ! ಇಲ್ಲೇಕೆ ಬಂದು ಮಲಗಿದೆ?' ಎಂದಳು.

ಸಾಗರೆಯು ಮಾತಾಡಲಿಲ್ಲ.

ಬ್ರಹ್ಮ—ಗಂಡನು ಹೊರಡಿಸಿ ಅಟ್ಟಿದನೆ?

ಸಾಗರೆ—ಹಾಗಿಲ್ಲದಿದ್ದರೆ ನಿನ್ನನ್ನೇಕೆ ಆಶ್ರಯಿಸುತ್ತಿದೆ? ಇಂದು ನಿನ್ನ ಬಳಿ ಮಲಗಿರುವೆನು.

ಬ್ರಹ್ಮ—ಹಾಗಾದರೆ, ಮಲಗು, ಮಲಗು ಅವನೀಗಲೇ ಕರೆಯುವನು. ಈಗ ಬರುತ್ತಾನೆ—ನೀನೇನೋಡುವೆ. ನಮ್ಮ ಯಜಮಾನರೂ ಹೀಗೇವೇ ಹನ್ನೆರಡು ತಿಂಗಳು ಮೂವತ್ತು ದಿನ ನನ್ನನ್ನು ಹೋಗೆಂದು ಹೊರಡಿಸಿ ಅಟ್ಟುವರು. ಪುನಃ ಕೂಡಲೇ ಕರೆಯುವರು—ನಾನು ಕೋಪಗೊಂಡು ಹೋಗುತ್ತಿರಲಿಲ್ಲ. ಅದು— ಆದಾವದು? ಆ ಕೋಪವಿದೆಯಷ್ಟೆ? ಅದು ಹೆಂಗಸರಿಗೆ ಪ್ರಾಣ; ಹೋಗುತ್ತಿರ. ಲಿಲ್ಲ, ಹೋಗದೇಲೂ ಇರಲಾರೆ—ಒಂದು ದಿನ ಏನಾಯಿತೆಂದರೆ—

ಸಾಗರ—ಅಜ್ಜಿ ! ಒಂದು ಕಥೆಯನ್ನು ಹೇಳಬಾರದೆ !

ಬ್ರಹ್ಮ—ಅವಕಥೆಯನ್ನು ಹೇಳಲಿ ! ವಿಹಂಗಮ ವಿಹಂಗಮಿಯ ಕಥೆ ಹೇಳಲೆ ? ಒಬ್ಬಳೇ ಕೇಳುತ್ತಿಯಾ ? ಆ ಹೊಸ ಸೊಸೆ ಎಲ್ಲಿ ? ಅವಳನ್ನೂ ಕರೆ; ಇಬ್ಬರೂ ಕೇಳ ಬಹುದು.

ಸಾಗರ—ಅವಳೆಲ್ಲಿದ್ದಾಳೋ, ಈಗ ನಾನವಳನ್ನು ಹುಡುಕಲಾರೆ. ನಾನೊಬ್ಬಳೇ ಕೇಳುತ್ತೇನೆ, ಹೇಳು.

ಬ್ರಹ್ಮಠಾಕುರಾಣಿಯು ಸಾಗರೆಯ ಪಕ್ಕದಲ್ಲಿ ಮಲಗಿಕೊಂಡು ಕಥೆಯನ್ನು ಹೇಳತೊಡಗಿದಳು.

ಕಥೆಯು ಪ್ರಾರಂಭವಾಗುವದರೊಳಗೆ ಸಾಗರೆಗೆ ನಿದ್ರೆಯು ಬಂದಿತು. ಆದು ಮುದುಕಿಗೆ ಗೊತ್ತಾಗದೆ ಅವಳು ಮೂರು ನಾಲ್ಕು ಘಂಟೆಯ ಹೊತ್ತು ಕಥೆಯನ್ನು ಹೇಳುತ್ತಿದ್ದಳು. ಕಡೆಗೆ ಕೇಳುವವಳು ನಿದ್ರಾಮಗ್ನೆಯಾಗಿದ್ದಳೆಂದು ತಿಳಿದು ದುಃಖಿತೆಯಾಗಿ ಕಥೆಯನ್ನು ಪೂರೈಸದೆ ಮಧ್ಯೆ ನಿಲ್ಲಿಸಿಬಿಟ್ಟಳು.

ಮರುದಿನ ಪ್ರಭಾತವಾಗುವದರೊಳಗಾಗಿ ಸಾಗರೆಯು ಹೋಗಿ ಕೊಠಡಿಯ ಬೀಗವನ್ನು ತೆಗೆದಳು. ಅನಂತರ ಏನನ್ನೂ ಹೇಳದೆ ಹಿಂದಿರುಗಿಬಂದು ಬ್ರಹ್ಮಠಾಕೂರಿಣಿಯು ಮುರಿದಿದ್ದ ಕದುರನ್ನು ತೆಗೆದುಕೊಂಡು ನಿದ್ರಾಮಗ್ನೆಯಾಗಿದ್ದಾ ಮುದುಕಿಯ ಕಿವಿಗೆ ಹತ್ತರದಲ್ಲಿಟ್ಟುತಿರುಗಿಸುತ್ತ ಶಬ್ದಮಾಡುತ್ತಿದ್ದಳು.

ಚಿಲುಕವನ್ನು ತೆಗೆದ ಶಬ್ದವಾಯಿತು. ಪ್ರಫುಲ್ಲೆಯೂ ವ್ರಜೇಶ್ವರನೂ ಆ ಶಬ್ದವನ್ನು ಕೇಳಿದರು. ಪ್ರಫುಲ್ಲೆಯು ಕುಳಿತಿದ್ದವಳು ಎದ್ದು, "ಸಾಗರೆಯು ಬಾಗಿಲನ್ನು ತೆರೆದಳು, ನಾನು ಹೋಗುತ್ತೇನೆ; ಹೆಂಡತಿಯೆಂದೊಪ್ಪಿದರೆ ಒಪ್ಪಬಹುದು, ಇಷ್ಟವಿಲ್ಲದಿದ್ದರೆ ಬಿಡಬಹುದು, ಆದರೆ ತಮ್ಮ ದಾಸಿಯೆಂದು ಮನಸ್ಸಿನಲ್ಲಿ ಜ್ಞಾಪಕವಿರಲಿ" ಎಂದಳು.

ವ್ರಜ—ಈಗಲೇ ಹೋಗಬೇಡ, ನಾನೊಮ್ಮೆ ಯಜಮಾನನ್ನು ಕೇಳಿನೋಡುತ್ತೇನೆ.

ಪ್ರಫುಲ್ಲ—ಹೇಳಿದರೆ ಅವರ ಮನಸ್ಸು ತಿರುಗುವುದೋ ?

ವ್ರಜ—ತಿರುಗಬೇಡ. ನನ್ನ ಕೆಲಸವನ್ನು ನಾನು ಮಾಡಬೇಕು. ಕಾರಣವಿಲ್ಲದೆ ನಿನ್ನನ್ನು ತ್ಯಜಿಸಿ ನಾನು ಅಧರ್ಮದಲ್ಲಿ ಬೀಳಲೆ ?

ಪ್ರಫುಲ್ಲ—ನೀವು ನನ್ನನ್ನು ತ್ಯಜಿಸಿಲ್ಲ. ಗ್ರಹಣಮಾಡಿದ್ದೀರಿ, ನನಗೆ ಒಂದು ದಿನ ತಮ್ಮ ಶಯ್ಯೆಯಲ್ಲಿ ಸ್ಥಳವನ್ನು ಕೊಟ್ಟಿರಿ. ನನಗೆ ಅದೇ ಯಥೇಷ್ಟವಾಯಿತು. ನನ್ನಂತಹ ದರಿದ್ರೆಯಾದೀ ಪಾಪಿಗೋಸ್ಕರ ನೀವು ನಿಮ್ಮತಂದೆಯೊಡನೆ ವಿವಾದ ಮಾಡಬೇಡಿ. ಅದು ನನ್ನ ಪ್ರಾರ್ಥನೆ; ಅದರಿಂದ ನಾನು ಸುಖಿಯಾಗೆನು.

ವ್ರಜ—ಕಡೆಯಪಕ್ಷಕ್ಕೆ ನಿನಗೆ ಅನ್ನ ಬಟ್ಟೆಗೆ ಏನಾದರೂ ಕಳುಹಿಸುವಹಾಗಾದರೂ ಮಾಡಬೇಕು.

ಪ್ರಫುಲ್ಲ—ಅವರೆನ್ನನ್ನು ತ್ಯಜಿಸಿದ್ದಾರೆ - ಅವರು ಕೊಡುವ ಭಿಕ್ಷೆಯನ್ನು ನಾನು ತೆಗೆದು ಕೊಳ್ಳಲಾರೆನು. ನಿಮ್ಮ ಸ್ವಂತವಾದುದೇನಾದರೂ ಇದ್ದು ಕೊಟ್ಟರೆ ಆ ಭಿಕ್ಷೆಯನ್ನು ತೆಗೆದುಕೊಳ್ಳುವೆನು.

ವ್ರಜ:—ನನ್ನಲ್ಲೇನೂ ಇಲ್ಲ. ಇದೊಂದು ಉಂಗುರವು ಮಾತ್ರ ಇದೆ, ಇದನ್ನು ತೆಗೆದುಕೊಂಡು ಹೋಗು–ಇದನ್ನು ಮಾರಿದರೆ ಪ್ರಕೃತಕ್ಕೆ ಸ್ವಲ್ಪ ಕಷ್ಟ ವನ್ನು ನೀಗಬಹುದು. ಮುಂದೇನಾದರೂ ಎರಡು ದುಡ್ಡನ್ನು ಸಂಪಾದಿಸುವುದಕ್ಕೆ ಪ್ರಯತ್ನ ಪಡುತ್ತೇನೆ. ಎಲ್ಲಾದರೂ ಒಂದು ಚಾಕರಿಗೆ ಸೇರಿಕೊಳ್ಳುತ್ತೇನೆ. ಹೇಗಾದರೂ ಮಾಡಿ ನಿನ್ನ ಭರಣ ಪೋಷಣೆಯನ್ನು ಮಾಡುವೆನು.

ಹೀಗೆ ಹೇಳಿ ತನ್ನ ಕೈಯಲ್ಲಿದ್ದೊಂದುಂಗುರವನ್ನು ತೆಗೆದು ಪ್ರಫುಲ್ಲೆಗೆ ಕೊಟ್ಟನು. ಪ್ರಫುಲ್ಲೆಯು ಉಂಗುರವನ್ನು ತನ್ನ ಬೆರಳಿಗೆ ಹಾಕಿಕೊಳ್ಳುತ್ತ, 'ನೀವು ನನ್ನನ್ನು ಮರೆತು ಬಿಟ್ಟರೆ ?—' ಎಂದಳು.

ವ್ರಜ—ಆರನ್ನು ಮರೆತರೂ ನಿನ್ನನ್ನಾವಾಗಲೂ ಮರೆಯೆನು.

ಪ್ರಫುಲ್ಲೆ—ಒಂದುವೇಳೆ ಗುರುತನ್ನೂ ಹಿಡಿಯಲಾರದೆ ಹೋದರೆ ?

ವ್ರಜ—ನಿನ್ನೀ ಮುಖವನ್ನು ಎಂದಿಗೂ ಮರೆಯಲಾರೆನು.

ಪ್ರಫುಲ್ಲ—ನಾನೀ ಉಂಗುರವನ್ನು ಮಾರುವುದಿಲ್ಲ. ಅನ್ನಕ್ಕಿಲ್ಲದಿದ್ದರೂ ಅದನ್ನು ಮಾರುವುದಿಲ್ಲ. ನೀವು ನನ್ನನ್ನು ಗುರ್ತಿಸದೆ ಹೋದಾಗ ನಿಮಗೀ ಉಂಗುರವನ್ನು ತೋರುವೆನು. ಇದರಲ್ಲೇನಾದರೂ ಬರೆದಿದೆಯೆ ?

ವ್ರಜ—ನನ್ನ ಹೆಸರನ್ನು ಕೆತ್ತಿದೆ.

ಇಬ್ಬರೂ ಪರಸ್ಪರ ಕಣ್ಣೀರಿನಿಂದ ಮುಖವನ್ನು ತೋಯಿಸಿಕೊಂಡು ಬಳಿಕ ಕಷ್ಟದಿಂದ ಅಗಲಿದರು.

ಪ್ರಫುಲ್ಲೆಯು ಕೆಳಗಿಳಿದು ಬಂದು ಸಾಗರೆಯನ್ನೂ ನಯನೆಯನ್ನೂ ನೋಡಿ ದಳು. ಆ ಕೆಟ್ಟ ಮೋರೆ ನಯನೆಯು ಜೇಕೆಂದು, 'ಅಕ್ಕ ! ನಿನ್ನಿನ ರಾತ್ರಿ ಮಲಗಿದ್ದುದೆಲ್ಲಿ ?' ಎಂದು ಕೇಳಿದಳು.

ಪ್ರಫುಲ್ಲೆ—ಅಮ್ಮ ! ತೀರ್ಥಯಾತ್ರೆ ಮುಂತಾದ ಪುಣ್ಯ ಕೆಲಸವನ್ನು ಮಾಡಿದವರು ಅದನ್ನು ಕುರಿತು ತಾವೇ ಹೇಳಿಕೊಳ್ಳಬಾರದು.

ನಯನ—ಅದೇನು ?

ಸಾಗರ—ಗೊತ್ತಾಗುವುದಿಲ್ಲವೆ ? ನಿನ್ನಿನ ದಿನ ನನ್ನನ್ನು ಕೊಠಡಿಯಿಂದ ಹೊರಕ್ಕೆ ಹೊರಡಿಸಿ ಅವಳನ್ನು ನನ್ನ ಮಂಚದಮೇಲೆ ಕುಳ್ಳಿರಿಸಿಕೊಂಡು ಲಕ್ಷ್ಮೀ ನಾರಾಯಣನಾಗಿರಲಿಲ್ಲವೆ ? ಜತೆಯಲ್ಲಿ ಮಲಗಿದ್ದ ಕೈಲಿದ್ದುಂಗುರವನ್ನು ಕೊಟ್ಟಿ ರುವುದು ಗೊತ್ತಾಗುವುದಿಲ್ಲವೆ ?

ಸಾಗರೆಯು ನಯನೆಗೆ ಪ್ರಫುಲ್ಲೆಯ ಕೈಲಿದ್ದ ವ್ರಜೇಶ್ವರನ ಉಂಗುರವನ್ನು ತೋರಿದಳು. ನೋಡಿ ನಯನೆಗೆ ಮೈಯೆಲ್ಲಾ ಬೆಂಕಿಬೆಂಕಿಯಾಯಿತು. ಅನಂತರ,

ಆವಳು 'ಅಕ್ಕ! ಯಜಮಾನರು ನೀನು ಕೇಳಿದ ಮಾತಿಗೆ ಏನುತ್ತರವನ್ನು ಕೊಟ್ಟರು, ಗೊತ್ತಾಯಿತೆ?, ಎಂದಳು.

ಪ್ರಫುಲ್ಲೆಯು ಆ ಮಾತುಗಳನ್ನು ಮರೆತಿದ್ದಳು. ಪ್ರಜೇಶ್ವರನು ಮಾಡಿದ ಆದರದಿಂದವಳಿಗಾವದೂ ಸ್ಮರಣೆಯಲ್ಲಿಲ್ಲದೆ, 'ಆವ ಮಾತು?' ಎಂದು ಕೇಳಿದಳು.

ನಯನ—ನೀನು ನಿನ್ನ ಅನ್ನಬಟ್ಟೆಗೆ ಹೇಗೆಂದು ಕೇಳಿದ್ದೆಯಲ್ಲವೆ?

ಪ್ರಫುಲ್ಲ—ಅದಕ್ಕೇನು ಉತ್ತರ?

ನಯನ—'ಚೋರಿ ದರೋಡೆ ಮಾಡಿ ತಿನ್ನಲಿ' ಎಂದು ಮಾವಂದಿರು ಹೇಳಿದರು. ಪ್ರಫುಲ್ಲೆಯು,'ನೋಡಿಕೊಳ್ಳೋಣ'ವೆಂದುಹೇಳಿ ಹೊರಟುಹೋದಳು.

ಪ್ರಫುಲ್ಲೆಯು ಮತ್ತಾರಸಂಗಡಲೂ ಮಾತಾಡದೆ ಹಿತ್ತಲನ್ನು ಹಾದು ಹೊರಟು ಹೋದಳು. ಸಾಗರೆಯು ಹಿಂದೆ ಹಿಂದೆ ಹೋದಳು. ಪ್ರಫುಲ್ಲೆಯು 'ತಂಗಿ! ನಾನೀಗ ಹೊರಟು ಹೋಗುತ್ತೇನೆ ಪುನಃ ನಾನೀ ಮನೆಗೆ ಬರುವುದಿಲ್ಲ. ನೀನು ನಿಮ್ಮ ತೌರಮನೆಗೆ ಹೋಗಿದ್ದರೆ ಅಲ್ಲಿಗೆ ಬಂದು ನಿನ್ನನ್ನು ನೋಡುವೆನು' ಎಂದಳು.

ಸಾಗರ—ನೀನು ನಮ್ಮ ತೌರಮನೆಯನ್ನು ಬಲ್ಲೆಯಾ?

ಪ್ರಫುಲ್ಲ—ತಿಳಿಯದು. ತಿಳಿದುಕೊಂಡು ಬರುವೆನು.

ಸಾಗರ—ನೀನು ನಮ್ಮ ತೌರಮನೆಗೆ ಬರುವಿಯಾ?

ಪ್ರಫುಲ್ಲ—ನನಗೆ ಮತ್ತೇನು ಲಜ್ಜೆ?

ಸಾಗರ—ನಿಮ್ಮ ತಾಯಿಯು ನಿನ್ನನ್ನು ನೋಡಲು ಕಾದುಕೊಂಡಿದ್ದಾಳೆ.

ತೋಟದ ಬಾಗಿಲಲ್ಲಿ ಪ್ರಫುಲ್ಲೆಯ ತಾಯಿಯು ನಿಂತಿದ್ದವಳನ್ನು ಸಾಗರೆಯು ತೋರಿದಳು. ಪ್ರಫುಲ್ಲೆಯು ತಾಯಿಯ ಬಳಿ ಹೋದಳು.

## ಏಳನೆಯ ಪರಿಚ್ಛೇದ.

ಪ್ರಫುಲ್ಲೆಯೂ ಅವಳ ತಾಯಿಯೂ ಮನೆಗೆ ಹಿಂದಿರುಗಿ ಬಂದರು. ಪ್ರಫುಲ್ಲೆಯ ತಾಯಿಗೆ ಪ್ರಯಾಣದಿಂದ ಶಾರೀರಿಕ ಕಷ್ಟವುಂಟಾಯಿತು. ಮಾನಸಿಕವಾದ ಯಾತನೆಯು ಅದಕ್ಕಿಂತ ಅಧಿಕವಾಯಿತು. ಮನುಷ್ಯನಿಗೆ ಲ್ಲಾ ಸಮಯದಲ್ಲಿಯೂ ಏಕಪ್ರಕಾರವಾಗಿ ಸಹಿಸಿಕೊಳ್ಳುವುದಕ್ಕಾಗುವುದಿಲ್ಲ. ಹಿಂದಿರುಗಿ ಬಂದಮೇಲೆ ಪ್ರಫುಲ್ಲೆಯ ತಾಯಿಗೆ ಜ್ವರವು ಬಂದಿತು. ಜ್ವರವು ಮೊದಲು ಸ್ವಲ್ಪವಾಗಿದ್ದಿತು. ಆದರೆ ಮನೆಯಲ್ಲಿರುವವಳು; ಹೆಂಗಸು; ಅದರಲ್ಲಿಯೂ ಬ್ರಾಹ್ಮಣರ ಮನೆಯಹೆಂಗಸು; ಅದೂ ಅಲ್ಲದೆ ಗಂಡನಿಲ್ಲದವಳು. ಅವಳು ಜ್ವರವನ್ನು ಜ್ವರವೆಂದು ತಿಳಿಯಲಿಲ್ಲ. ಒಬ್ಬರಿಗೂ ಹೇಳಲಿಲ್ಲ. ಅದಲ್ಲದೆ ಎರಡು ಹೊತ್ತು ಸ್ನಾನ, ಹೊತ್ತಿಗೆ ಸರಿಯಾಗಿ ಅನ್ನವಿಲ್ಲ. ಅದೂ ಸರಿಯಾದುದಲ್ಲ. ಅವರೂ ಇವರೂ ಏನಾದರೂ

ಕೊಟ್ಟರೆ ಉಂಟು; ಇಲ್ಲದಿದ್ದರೆ ಇಲ್ಲ. ಕ್ರಮವಾಗಿ ಜ್ವರವು ಹೆಚ್ಚಾಯಿತು. ಕಡೆಗೆ ನೆಲಹಿಡಿದು ಮಲಗಿದಳು. ಆ ಕಾಲದಲ್ಲಿ ರೋಗಾಂತಕಗಳಾದ ಸ್ಪೆಸಿಫಿಕ್ (Specific) ಪೇಟೆಂಟ್ (Patent) ಪಿಲ್ಸ್ (Pills), ಹಾಲೊವೇಸ್ (Holloway's) ಮಹೌಷಧಗಳು, ಜ್ವರಾರಿವಟಿಕ, ಹಿಮಾಂಶುದ್ರವ, ಅಜೀರ್ಣ ವಟಿಕ ಮುಂತಾದ ಔಷಧಗಳ ಮಹಾತ್ಮ್ಯವನ್ನು ಹೊಗಳುವ ಪ್ರತಿಕೆಗಳು ಈಗಿನಂತೆ ವೆಗ್ಗಳಿಸಿ ಪ್ರಚಾರವಿರಲಿಲ್ಲ. ಗಂಡನಿಲ್ಲದವರು ಪ್ರಾಯಃ ಔಷಧಗಳನ್ನು ತೆಗೆದು ಕೊಳ್ಳುತ್ತಿರಲಿಲ್ಲ. ಅದಲ್ಲದೆ ಪ್ರಫುಲ್ಲೆಯ ತಾಯಿಗೆ ಸಲವಾಗಿ ಪಂಡಿತರನ್ನು ಕರೆ ತರುವ ಜನರಿರಲಿಲ್ಲ. ಈಗಿನ ಕಾಲದಲ್ಲಿರುವಂತೆ ದೇಶದಲ್ಲಿ ಪಂಡಿತರು, ವೈದ್ಯರು, ಡಾಕ್ಟರುಗಳು, ಡ್ರೆಸ್ಸರುಗಳು, ಸರರ್ಜ ಮುಂತಾದವರು ಆಗ ಹೇರಳವಾಗಿರಲಿಲ್ಲ. ಜ್ವರವು ವೃದ್ಧಿಗೊಂಡಿತು; ವಿಷಮಿಸಿಕೊಂಡಿತು; ಕಡೆಗೆ ಪ್ರಫುಲ್ಲೆಯ ತಾಯಿಯು ಸಕಲ ಸಂಕಟಗಳಿಂದ ಬಿಡುಗಡೆಯನ್ನು ಹೊಂದಿದಳು.

ನೆರೆಯುವರು ಹತ್ತುಮಂದಿ, ಮೊದಲು ಅವಳಮೇಲಾರು ಸುಳ್ಳುಸುದ್ದಿಯನ್ನು ಹುಟ್ಟಿಸಿ ಅವಳಿಗೆ ಬಹಿಷ್ಕಾರವನ್ನು ಕೊಟ್ಟದ್ದರೋ, ಅವರೇ ಹತ್ತುಮಂದಿ ಬ್ರಾಹ್ಮಣರು ಬಂದು ಪ್ರಫುಲ್ಲೆಯ ತಾಯಿಗೆ ಸತ್ಕಾರವನ್ನು ಮಾಡಿದರು. ಹಿಂದುಗಳು ಅಂತಹ ಕಾಲದಲ್ಲಿ ಶತ್ರುತ್ವವನ್ನು ತೋರುವುದಿಲ್ಲ. ಅವರಿಗೆ ಅದೊಂದು ಗುಣವುಂಟು.

ಪ್ರಫುಲ್ಲೆಯು ಮನೆಗೊಬ್ಬಳೇ ಆದಳು. ಅಕ್ಕಪಕ್ಕದವರು ಬಂದು ವೈಕುಂಠ ಸಮಾರಾಧನೆ ಮಾಡಬೇಕೆಂದರು. ಪ್ರಫುಲ್ಲೆಯು 'ಶಕ್ತ್ಯನುಸಾರ ನಾಲ್ಕು ಮಂದಿ ಬ್ರಾಹ್ಮಣರಿಗೆ ಊಟಕ್ಕೆ ಹೇಳಿಕೊಳ್ಳುತ್ತೇನೆ. ಆದರೆ ಏನೇನೂ ಗತಿಯಿಲ್ಲ' ನೆಂದಳು. ಊರಿನವರು ಹತ್ತುಜನ, 'ನೀನೇನೂ ಮಾಡಬೇಡ, ನಾವೆಲ್ಲರೂ ಸೇರಿ ಮಾಡುವೆವು' ಎಂದು ಹೇಳಿ ಕೆಲವರು ನಗದು ಹಣವನ್ನೂ ಕೆಲವರು ದಿನಸಿ ಮುಂತಾದುದನ್ನೂ ಕೊಟ್ಟು ಶ್ರಾದ್ಧ, ಬ್ರಾಹ್ಮಣ ಭೋಜನ ಮಾಡಿಸಲುದ್ಯುಕ್ತರಾದರು.

ಊರವರಲ್ಲಿ ದೊಡ್ಡವರಾದವರು, 'ನಿಮ್ಮ ತಾಯಿಯ ಶ್ರಾದ್ಧಕ್ಕೆ ನಿಮ್ಮ ಅತ್ತೆ ಮಾವಂದಿರನ್ನು ಕರೆಯಿಸಬೇಕು' ಎಂದು ಹೇಳಿದರು.

ಪ್ರಫುಲ್ಲ—ಕರೆಯುವುದಕ್ಕೆ ಹೋಗುವವರಾರು ?

ಇಬ್ಬರು ಮುಖಂಡರು ಮುಂದಾಳಾಗಿ ನಾವು ಹೋಗುವೆವೆಂದರು. ಆ ಊರಲ್ಲಿ ಎಲ್ಲಾ ಕೆಲಸಗಳಿಗೂ ಅವರೇ ಮುಂದಾಗುವವರು. ಅವರಿಗೆ ಅದೇ ಒಂದು ರೋಗ. ಪ್ರಫುಲ್ಲೆಯು 'ನೀವೇ ಮೊದಲು ನಮ್ಮ ಮೇಲೆ ಇಲ್ಲದ ಅಪವಾದವನ್ನು ಹುಟ್ಟಿಸಿ ಸಂಸಾರವನ್ನು ಮುಣುಗಿಸಿದವರು, ನೀವು ನಿಜವಾಗಿ ಹೋಗಿ ಬರುವಿರಾ?' ಎಂದಳು. ಅದಕ್ಕವರು, 'ಅದನ್ನು ಮನಸ್ಸಿನಲ್ಲಿಡಬೇಡ; ನಾವಾ ಅಪವಾದವನ್ನು ಹೋಗಲಾಡಿಸುತ್ತೇವೆ; ಈಗ ನೀನು ಅನಾಥೆಯಾದ ಹುಡುಗಿ; ನಿನ್ನ ಸಂಗಡ ನಮಗೇನೂ ವಿವಾದವಿಲ್ಲ' ವೆಂದರು.

ಪ್ರಫುಲ್ಲೆಯು, 'ಹಾಗಾದರೆ, ನೀವೇ ಹೋಗಿ ಮಾವಂದಿರಿಗೆ ಹೇಳಿಬನ್ನಿ' ಎಂದಳು. ಅವರಿಬ್ಬರೂ ಹರವಲ್ಲಭನನ್ನು ಕರೆಯುವುದಕ್ಕೆ ಹೋದರು. ಹೋಗಿ ಹರವಲ್ಲಭನಿಗೆ ತಿಳಿಸಲಾಗಿ, ಹರವಲ್ಲಭನು, 'ಏನು, ಸ್ವಾಮಿ! ನೀವೇ ನನ್ನ ಸಂಬಂಧಿಗೆ ಬಹಿಷ್ಕಾರವನ್ನು ಕೊಟ್ಟು ಅವಳನ್ನು ಒಬ್ಬೊಂಟಿಯಾಗಿ ಮಾಡಿ ಈಗ ಪುನಃ ನೀವೇ ಬಂದು ಈ ಮಾತನ್ನು ಹೇಳುತ್ತೀರಿ ?' ಎಂದನು.

ಬ್ರಾಹ್ಮಣರು—ಅದೆಲ್ಲಾ ನಿಮಗೆ ಗೊತ್ತಿಲ್ಲ. ಒಳಊರುಗಳಲ್ಲಿ ನೆರೆಹೊರೆಯವರಿಗೆ ಆಗಾಗ್ಗೆ ಹೀಗಾಗುವುದುಂಟು. ಅದೆಲ್ಲಾ ಮನಸ್ಸಿನಲ್ಲಿಡತಕ್ಕ ಮಾತಲ್ಲ. ಅವರವರಿಗೆ ಮನಸ್ತಾಪ ಬಂದರೆ ಹೀಗೆಲ್ಲಾ ಒಬ್ಬರಮೇಲೆ ಒಬ್ಬರು ಅಪವಾದಗಳನ್ನು ಹೊರಿಸುವುದು ವಾಡಿಕೆ.

ಹರವಲ್ಲಭನು ಪ್ರಪಂಚವನ್ನು ತಿಳಿದ ಮನುಷ್ಯ. ಮನಸ್ಸಿನಲ್ಲಿ, 'ಇವರು ಮೋಸಗಾರರು, ಜಾತಿ ಹೋದವಳ ಮಗಳಿಂದ ದುಡ್ಡು ಕಿತ್ತುಕೊಂಡಿದ್ದಾರೆ. ಆದರೆ ಅವಳಿಗೆ ದುಡ್ಡೆಲ್ಲಿದ್ದಿತು? ಅದು ಹೇಗಾದರೂ ಆಗಲಿ, ನಾನೇಕೆ ಕೇಳಬೇಕು' ಎಂದೆಂದುಕೊಂಡು, ಬರುವುದಿಲ್ಲವೆಂದು ಹೇಳಿಬಿಟ್ಟನು. ಅದು ಮೊದಲ್ಗೊಂಡು ಪ್ರಫುಲ್ಲೆಯ ಮೇಲೆ ಅವನಿಗೆ ಮತ್ತಷ್ಟು ಕೋಪವೂ, ದ್ವೇಷವೂ ಹೆಚ್ಚಾದವು.

ವ್ರಜೇಶ್ವರನು ಅದನ್ನೆಲ್ಲಾ ಕೇಳಿದನು. ಅವನು ಮನಸ್ಸಿನಲ್ಲಿ, ಒಂದು ದಿನ ರಾತ್ರಿ ಆರಿಗೂ ಹೇಳದೆ ಹೋಗಿ ಪ್ರಫುಲ್ಲೆಯನ್ನು ನೋಡಿಕೊಂಡು ಅದೇ ರಾತ್ರಿ ಹಿಂದಿರುಗಿ ಬರಬೇಕೆಂದು ಯೋಚಿಸಿಕೊಂಡನು.

ಬ್ರಾಹ್ಮಣರಿಬ್ಬರೂ ನಿಷ್ಫಲವಾಗಿ ಪುನಃ ಊರಿಗೆ ಬಂದರು. ಪ್ರಫುಲ್ಲೆಯು ಯಥಾರೀತಿ ತಾಯಿಯ ಶ್ರಾದ್ಧವನ್ನು ಮಾಡಿ ಊರಿನವರ ಸಹಾಯದಿಂದ ಬ್ರಾಹ್ಮಣ ಭೋಜನವನ್ನು ಮಾಡಿಸಿದಳು. ವ್ರಜೇಶ್ವರನು ಹೋಗಿ ಅವಳನ್ನು ನೋಡಿಬರುವುದಕ್ಕೆ ಸಮಯವನ್ನು ನೋಡಿಕೊಂಡಿದ್ದನು.

---

## ಎಂಟನೆಯ ಪರಿಚ್ಛೇದ

---

ಫುಲ್ಲಮಣಿಯೆಂಬ ಶೂದ್ರಿಯೊಬ್ಬಳು ಪ್ರಫುಲ್ಲೆಯ ಮನೆಯ ಹತ್ತಿರ ವಾಸಮಾಡುತ್ತಿದ್ದಳು. ತಾಯಿಯು ಹೋದಾರಭ್ಯ ಪ್ರಫುಲ್ಲೆಯೊಬ್ಬಳೇ ಮನೆಯಲ್ಲಿ ವಾಸಮಾಡುತ್ತಿದ್ದಳು. ಅವಳು ಸುಂದರಿ, ಯುವತಿ—ರಾತ್ರಿ ಮನೆಯಲ್ಲೊಬ್ಬಳೇ ಮಲಗುವುದಕ್ಕೆ ಭಯವಾಗುವುದಲ್ಲದೆ ಅವುದಾದರೂ ಅಪವಾದಕ್ಕೂ ಗುರಿಯಾಗಬೇಕಾಗುತ್ತದೆ. ಅವಳ ಸಂಗಡ ಮಲಗುವುದಕ್ಕೆ ಒಬ್ಬ ಹೆಂಗಸು ಬೇಕಾಗಿದ್ದಿತು. ಫುಲ್ಲಮಣಿಯನ್ನು ಬಂದು ಮಲಗುವುದಕ್ಕೆ ಕೇಳಿಕೊಂಡಿದ್ದಳು. ಫುಲ್ಲಮಣಿಯು ಗಂಡನಿಲ್ಲದವಳು. ಅವಳಿಗೆ ಗಂಡನಿಲ್ಲದ ತಂಗಿಯೊಬ್ಬಳಿರುವಳು. ಅವರಿಬ್ಬರೂ ಪ್ರಫುಲ್ಲೆಯ ತಾಯಿಯನ್ನು ಕಂಡವರಾಗಿದ್ದರು. ಅದುಕಾರಣ ಪ್ರಫುಲ್ಲೆಯು

ಕೇಳಿಕೊಂಡುದುದಕ್ಕೆ ಫುಲ್ಲಮಣಿಯು ಬಂದು ಮಲಗುವುದಕ್ಕೊಪ್ಪಿಕೊಂಡಳು. ಪ್ರಫುಲ್ಲೆಯ ತಾಯಿಯು ಹೋದದಿನದ ರಾತ್ರಿಯಿಂದ ಫುಲ್ಲಮಣಿಯು ಬಂದು ಅವಳ ಮನೆಯಲ್ಲಿ ಮಲಗುತ್ತಿದ್ದಳು.

ಪ್ರಫುಲ್ಲೆಯು ಹುಡುಗಿಯಾಗಿದ್ದುದರಿಂದ ಫುಲ್ಲಮಣಿಯ ನಡೆತೆಯು ಅವಳಿಗೆ ತಿಳಿದಿರಲಿಲ್ಲ. ಫುಲ್ಲಮಣಿಯು ಪ್ರಫುಲ್ಲೆಗಿಂತ ಹತ್ತು ವರ್ಷ ದೊಡ್ಡವಳು. ರೂಪದಲ್ಲಿಯೂ ನಡೆನುಡಿಗಳಲ್ಲಿಯೂ ಅವಳು ಅಷ್ಟೇನುಕಡಿಮೆಯಾದವಳಾಗಿರಲಿಲ್ಲ. ತೊಟ್ಟು ಉಡುವದರಲ್ಲಿ ಸ್ವಲ್ಪ ಚೆನ್ನಾಗಿ ನಾಜೋಕಾಗಿದ್ದಳೆಂತಲೇ ಹೇಳಬೇಕು. ಸಾಮಾನ್ಯ ಜಾತಿಯವಳು, ಅದಲ್ಲದೆ ಚಿಕ್ಕವಯಸ್ಸಿನಲ್ಲಿಯೇ ಗಂಡನನ್ನು ಕಳೆದು ಕೊಂಡಿದ್ದಳು. ಚರಿತ್ರೆಯನ್ನು ಅಷ್ಟೊಂದು ಕಡಾಕಂಡಿತವಾಗಿಟ್ಟುಕೊಂಡಿರಲಸ ಮರ್ಥೆಯಾಗಿದ್ದಳು. ಗ್ರಾಮವು ಜಮೀನುದಾರ ಪ್ರಾಣಚೌಧುರಿಗೆ ಸೇರಿದುದು; ಜಮೀನದಾರನ ಗುಮಾಸ್ತೆ ದುರ್ಲಭಚಕ್ರವರ್ತಿಯು ಆಗಾಗ್ಗೆ ಆ ಗ್ರಾಮಕ್ಕೆ ಹಣ ಕಾಸನ್ನೆತ್ತುವುದಕ್ಕೆ ಬಂದು ಅಲ್ಲಿ ಕಛೇರಿಮಾಡುತ್ತಿದ್ದನು. ಫುಲ್ಲಮಣಿಯು ದುರ್ಲಭ ನಲ್ಲಿ ವಿಶೇಷ ಅನುಗ್ರಹವುಳ್ಳವಳಾಗಿದ್ದಳೆಂದು ಜನರಾಡಿಕೊಳ್ಳುತ್ತಿದ್ದರು. ಅಥವಾ ದುರ್ಲಭನೇ ಅವಳಲ್ಲಿ ಅನುಗ್ರಹವುಳ್ಳವನಾಗಿದ್ದನೆಂತಲೂ ಹೇಳಿಕೊಳ್ಳುತ್ತಿದ್ದರು. ಆ ಸಮಾಚಾರವನ್ನು ಪ್ರಫುಲ್ಲೆಯೂ ಕೇಳಿರಲಿಲ್ಲವೆಂತ ಹೇಳಲಾಗದು. ಆದರೆ ಮಾಡುವುದೇನು? ಮತ್ತಾರೂ ಸ್ವಂತ ಮನೆಯನ್ನುಬಿಟ್ಟುಬಂದು ಪ್ರಫುಲ್ಲೆಯ ಜತೆಗೆ ಮಲಗಿಕೊಳ್ಳಲೊಪ್ಪಲಿಲ್ಲ. ಅವಳು ಮನಸ್ಸಿನಲ್ಲಿ, ಫುಲ್ಲಮಣಿಯು ಕೆಟ್ಟವಳಾದರೂ ತಾನು ಕೆಡದಿದ್ದರೆ ಆರುತಾನೇ ತನ್ನನ್ನು ಕೆಡಿಸಬಲ್ಲರು? ಎಂದುಕೊಳ್ಳುವಳು.

ಆದುದರಿಂದ ಫುಲ್ಲಮಣಿಯು ಬಂದು ನಾಲ್ಕಾರುದಿನ ಪ್ರಫುಲ್ಲೆಯ ಜತೆ ಯಲ್ಲಿ ಮಲಗಿಕೊಂಡಳು. ಪ್ರಫುಲ್ಲೆಯ ತಾಯಿಗೆ ಶ್ರಾದ್ಧವಾಗಿ ವೈಕುಂಠಸಮಾ ರಾಧನೆಯಾದ ಮರುದಿನ ಫುಲ್ಲಮಣಿಯು ರಾತ್ರಿ ಬರುವುದಕ್ಕೆ ಸಾವಕಾಶವಾ ಯಿತು. ಅವಳು ಬರುತ್ತ ದಾರಿಯಲ್ಲಿದ್ದ ಮಾವಿನ ಮರದ ತೋಪಿನೊಳಗೆ ಪ್ರವೇಶಮಾಡಿದಳು. ಆ ತೋಪಿನಲ್ಲೊಬ್ಬ ಪುರುಷನು ನಿಂತಿದ್ದನು. ಅವನು ದುರ್ಲಭನಾಗಿದ್ದನೆಂದು ಹೇಳಬೇಕಾದ ಆವಶ್ಯಕವಿಲ್ಲ.

ಚಕ್ರವರ್ತಿ ಮಹಾಶಯನು ಅಭಿಸಾರಿಕೆಯಾಗಿ ತಾಂಬೂಲರಾಗದಿಂದ ರಕ್ತಾ ಧರೆಯಾದ ಮುಗುಳುನಗೆಯಿಂದ ಮಿಸುಗಿ ಮೂಡಿಬಂದ ಫುಲ್ಲಮಣಿಯ ಮುಖ ವನ್ನು ನೋಡಿ, 'ಇಂದು ಹೇಗಿದೆ?' ಎಂದು ಕೇಳಿದನು.

ಫುಲ್ಲಮಣಿ—ಇಂದು ಸರಿಯಾಗಿದೆ. ನೀನು ಅರ್ಧರಾತ್ರಿಯಲ್ಲಿ ಪಲ್ಲಕ್ಕಿಯನ್ನು ತೆಗೆಯಿಸಿಕೊಂಡು ಬಂದುಬಿಡು. ಬಂದವನು ಬಾಗಿಲನ್ನು ತಟ್ಟು. ನಾನು ಬಾಗಿ ಲನ್ನು ತೆಗೆಯುತ್ತೇನೆ. ಆದರೆ ಗದ್ದಲವಾಗದೆ ನೋಡಿಕೊಳ್ಳಬೇಕು.

ದುರ್ಲಭ—ಅದರ ಭಯವೇನೂ ಇಲ್ಲ. ಆದರೆ ಅವಳೇನಾದರೂ ಗದ್ದಲವನ್ನು ಮಾಡದಿದ್ದಾಳೆಯೆ?

ಫುಲ್ಲಮಣಿ—ಅವಳು ಗದ್ದಲಮಾಡದಿರುವುದಕ್ಕೇನಾದರೂ ಮಾಡಬೇಕು; ನಾನು ಮೆಲ್ಲಮೆಲ್ಲಗೆ ಶಬ್ದಮಾಡದೆ ಬಾಗಿಲನ್ನು ತೆಗೆಯುತ್ತೇನೆ. ನೀನು ಮೆಲ್ಲ ಮೆಲ್ಲಗೆ ಅವಳು ಮಲಗಿರುವ ಸ್ಥಳಕ್ಕೆ ಬಂದು, ಅವಳಿಗೆ ಎಚ್ಚರವಾಗುವುದಕ್ಕೆ ಮೊದಲು ಅವಳ ಬಾಯನ್ನು ಬಟ್ಟೆಯಿಂದ ಭದ್ರವಾಗಿ ಕಟ್ಟಿಬಿಡಬೇಕು. ಹಾಗೆ ಕಟ್ಟಿದ ಬಳಿಕ ಕೂಗುವುದಕ್ಕಾರಿಗೆ ಸಾಧ್ಯವಾದೀತು ?

ದುರ್ಲಭ—ಅಹುದು, ಅಷ್ಟು ಬಲವಂತ ಮಾಡಿ ಕೊಂಡೊಯ್ದರೆ ಎಷ್ಟೊಂದು ದಿನಗಳಿದ್ದು ಬಾಳುವಳು ?

ಫುಲ್ಲಮಣಿ—ಒಮ್ಮೆ ಕೊಂಡೊಯ್ದು ಹೋಗಿಬಿಟ್ಟರೆ ಆಗಿ ಹೋಯಿತು. ಅವಳಿಗೆ ಮೂರುನಾಲ್ಕು ತಲೆಯವರಾದ ಜ್ಞಾತಿ ಬಂಧುಗಳಾರೂ ಇಲ್ಲ. ಅನ್ನಕ್ಕೆ ಮಾರ್ಗವಿಲ್ಲ. ಅಂತಹವಳಿಗೆ ಅನ್ನವಾಯಿತು. ಬಟ್ಟೆಯಾಯಿತು. ತೊಡುವುದಕ್ಕೆ ನಗನಟ್ಟು ಆಯಿತು. ಜತೆಗೆ ಗಂಡನ ಹಾಗೊಬ್ಬ ಸಿಕ್ಕಿದಂತಾಯಿತು. ಅಷ್ಟಾದ ಮೇಲೆ ಇರದೆ ಮತ್ತೆಲ್ಲಿಗೆ ಹೋಗುವಳು ? ಆ ಭಾರವು ನನ್ನ ಮೇಲಿರಲಿ. ನನಗೂ ಸರಿಯಾದ ನಗನಟ್ಟು ಹಣಕಾಸು ಕಡಿಮೆ ಮಾಡಕೂಡದು. ಅದು ಚೆನ್ನಾಗಿ ಜ್ಞಾಪಕವಿರಲಿ.

ಈ ಪ್ರಕಾರ ಮಾತುಕಥೆಗಳು ಪೂರೈಸಿದ ಬಳಿಕ ದುರ್ಲಭನು ತನ್ನ ಮನೆಗೆ ಹೊರಟುಹೋದನು. ಫುಲ್ಲಮಣಿಯು ಪ್ರಫುಲ್ಲೆಯ ಮನೆಗೆ ಬಂದಳು. ಪ್ರಫುಲ್ಲೆಗೆ ಸರ್ವನಾಶದಾಸಮಾಚಾರವು ಲೇಶವೂ ಗೊತ್ತಿರಲಿಲ್ಲ. ಅವಳು ತಾಯಿಯನ್ನು ಸ್ಮರಿಸಿಕೊಂಡು ಮಲಗಿಕೊಂಡಳು. ತಾಯಿಗೆ ಸಲವಾಗಿ ಅತ್ತು ಅತ್ತು ಹಗಲೆಲ್ಲಾ ಕಳೆದಳು. ರಾತ್ರಿ ಬೇಗನೆ ನಿದ್ರೆಯು ಬಂದಿತು. ಅರ್ಧರಾತ್ರಿಯ ಹೊತ್ತಿಗೆ ದುರ್ಲಭನು ಬಂದು ಬಾಗಿಲನ್ನು ತಟ್ಟಿದನು. ಫುಲ್ಲಮಣಿಯು ಬಾಗಿಲನ್ನು ತೆರೆದಳು. ದುರ್ಲಭನು ಪ್ರಫುಲ್ಲೆಯ ಬಾಯಿಯನ್ನು ಕಟ್ಟಿ ಅವಳನ್ನು ಕೊಂಡೊಯ್ದು ಪಲ್ಲಕ್ಕಿಯಲ್ಲಿ ಮಲಗಿಸಿದನು. ಬೋಯಿಗಳು ಶಬ್ದಮಾಡದೆ ಪಲ್ಲಕ್ಕಿಯನ್ನು ಹೊತ್ತುಕೊಂಡು ಪ್ರಾಣಚೌಧುರಿಯ ವಿಹಾರದ ಮನೆಗೆ ಹೋದರು ಫುಲ್ಲಮಣಿಯೂ ಜತೆಯಲ್ಲಿಯೇ ಹೋದಳು.

ಇದಾದ ಅರ್ಧಘಂಟೆಯಮೇಲೆ ವ್ರಜೇಶ್ವರನು ಪ್ರಫುಲ್ಲೆಯನ್ನು ಹುಡುಕಿ ಕೊಂಡು ಬಂದು ಮನೆಯಲ್ಲಿ ನೋಡಿದನು. ಅವನಾರಿಗೂ ಹೇಳದೆ ಕಳ್ಳತನದಲ್ಲಿ ಬಂದಿದ್ದನು. ಅಯ್ಯೋ ! ಮನೆಯಲ್ಲಿ ಎಲ್ಲಿಯೂ ಆರೂ ಇರಲಿಲ್ಲ.

ಪ್ರಫುಲ್ಲೆಯನ್ನು ಹೊತ್ತುಕೊಂಡು ಬೋಯಿಗಳು ಶಬ್ದಮಾಡದೆ ಹೋದರು. ನಮ್ಮಾ ಹೇಳಿಕೆಯನ್ನು ಓದುವವರು, ಶಬ್ದಮಾಡದೆ ಬೋಯಿಗಳು ಹೋದರೆಂದು ಹೇಳುವುದನ್ನು ಸುಳ್ಳೆಂದು ತಿಳಿಯುವರು. ಬೋಯಿಗಳು ಶಬ್ದಮಾಡುವುದು ಅವರ ಹುಟ್ಟಿಗೆ ಬಂದುದು ! ಆದರೆ ಅಂದು ಶಬ್ದಮಾಡುವುದಿಲ್ಲವೆಂದು ಹೆಚ್ಚು ಹಣದ ಆಶೆಗೊಪ್ಪಿಕೊಂಡಿದ್ದರು. ಶಬ್ದಮಾಡಿದರೆ ಗದ್ದಲವಾಗುವುದಲ್ಲದೆ, ಶಬ್ದ

ಮಾಡುವುದಿರುವುದಕ್ಕೆ ಮತ್ತೊಂದು ಕಾರಣವಿದ್ದಿತು. ಚೋರಿ ದರೋಡೆಮಾಡುವ ಕಳ್ಳರ ಹೆಸರನ್ನು ಹೇಳಿದರೆ ಬಹಳ ಭಯವಾಗುವುದೆಂದು ಬ್ರಹ್ಮಠಾಕೂರಿಣಿ ಹೇಳಿರಲಿಲ್ಲವೆ? ವಾಸ್ತವವಾಗಿ ಆಗ ದೇಶದಲ್ಲಿ ನಡಿಯುತಿದ್ದಂತೆ ಕಳ್ಳರ ಹಾವಳಿ ಯಾವಾಗಾವಸೀಮೆಯಲ್ಲಿಯೂ ಇರಲಿಲ್ಲ. ಆಗ ದೇಶವೆಲ್ಲಾ ಅರಾಜಕ ವಾಗಿದ್ದಿತು. ಮುಸಲ್ಮಾನರ ದೌಲತ್ತು ಹೋಗಿದ್ದಿತು. ಇಂಗ್ಲೀಷರ ದೌಲತ್ತು ಚೆನ್ನಾಗಿ ಸ್ಥಾಪಿತವಾಗಿರಲಿಲ್ಲ. ಅವರಾಗ ಸ್ವಲ್ಪ ಸ್ವಲ್ಪ ಊರಿ ನಿಲ್ಲುವುದಕ್ಕೆ ಪ್ರಾರಂಭವಾಗಿದ್ದಿತು; ಅದಲ್ಲದೆ ಸಾವಿರದೇಳನೂರೆಪ್ಪತ್ತಾರನೆಯ ವರ್ಷದ ಮಹಾ ಕ್ಷಾಮದಿಂದ ದೇಶವೆಲ್ಲಾ ಸುಟ್ಟು ಹಾಳಾಗಿದ್ದಿತು. ಕ್ಷಾಮವು ಹೋಗಿ ಹೆಚ್ಚು ಕಾಲವಾಗಿರಲಿಲ್ಲ. ಅದಲ್ಲವೆ ದೇವೀಸಿಂಹನ ಇಜಾರೆ! ಅವನು ಸರ್ಕಾರದ ಹಣವನ್ನು ವಸೂಲ್ಮಾಡಿಕೊಳ್ಳುವುದಕ್ಕೆ ಇಜಾರೆ ಮಾಡಿ ಕೊಂಡಿದ್ದನು. ಅವನ ಹಾವಳಿಯು ಎಲ್ಲರಿಗೂ ಗೊತ್ತಿರಬೇಕು. ಇಂಗ್ಲಾಂಡು ದೇಶದಲ್ಲಿ ವೆಸ್ಟ ಮಿನಿಸ್ಟರು ಹಾಲಿನೊಳಗೆ (West Minister Hall) ಎಡ್ಮಂಡ ಬರ್ಕು (Edmund Burke) ಸಾಹೇಬನು ನಿಂತುಕೊಂಡು ದೇವೀಸಿಂಹನ ಹೆಸ ರನ್ನು ಆಚಂದ್ರಾರ್ಕಸ್ಥಾಯಿಯಾಗಿ ಮಾಡಿದ್ದಾನೆ. ಪರ್ವತದಿಂದುಗಿದುಬರುದ ಅಗ್ನಿ ಶಿಖಿಯೋಪಾದಿಯಲ್ಲಿ ಜ್ವಾಲಾಮಯವಾದವನ ವಾಕ್ಯಪ್ರವಾಹದಿಂದ ಬರ್ಕನು (Burke) ದೇವೀಸಿಂಹನ ಅಸಹ್ಯವಾದ ಅತ್ಯಾಚಾರಗಳನ್ನು ಅನಂತವಾದ ಕಾಲದ ಸಮೀಪಕ್ಕೂ ಕಳುಹಿಸಿದ್ದಾನೆ. ಅವನು ಮಾತಾಡುತ್ತಿದ್ದಾಗ ಕೇಳುತಿದ್ದ ಅನೇಕ ಹೆಂಗಸರು ದೈವವಾಣಿಗೆ ಸಮನಾದವನಾ ವಾಕ್ಯಪರಂಪರೆಯನ್ನು ಕೇಳಿ ಶೋಕ ದಿಂದ ಮೂರ್ಛಿತರಾಗಿ ಬಿದ್ದುಹೋಗಿದ್ದಾರೆ! ಇದಾಗಿ ನೂರುವರ್ಷಗಳಾಗಿದ್ದರೂ ಈಗ ಬರ್ಕನ ವಕ್ತೃತೆಯನ್ನು (Speeches) ಓದಿದರೆ ಶರೀರವೆಲ್ಲಾ ರೋಮಾಂ ಚಿತವಾಗಿ ಮನಸ್ಸು ಉನ್ಮತ್ತವಾಗಿ ಹೋಗುತ್ತದೆ. ಆ ದೇವೀಸಿಂಹನ ಅತ್ಯಾಚಾರ ಗಳಲ್ಲಿವೀರೇಂದ್ರಭೂಮಿಯು ಮುಳುಗಿಹೋಗಿದ್ದಿತು. ಅನೇಕರು ಅನ್ನವಿಲ್ಲದೆ ಮನೆ ಯಲ್ಲಿ ವಾಸಮಾಡುವುದಕ್ಕೂ ಅವಕಾಶವಿಲ್ಲದವರಾಗಿದ್ದರು. ಹೊಟ್ಟೆಗಿಲ್ಲದವರು ಪರರ ಸ್ವತ್ತನ್ನು ಕಸರಿ ತಿನ್ನುವರು. ಗ್ರಾಮ ಗ್ರಾಮದಲ್ಲಿಯೂ ಕಳ್ಳರು ದಳಬದ್ಧ ರಾಗಿ ಚೋರಿ ಡಕಾಯಿತಿ ಮಾಡುತ್ತ ಜನಗಳ ನೆಮ್ಮದಿಗೆ ಮಾರ್ಗವಿಲ್ಲವಾಗಿದ್ದಿತು. ಆ ಹಾವಳಿಯನ್ನಡಗಿಸಲಾರಿಗೆ ಸಾಧ್ಯ? ಗುಡ್‌ಲ್ಯಾಡ ಸಾಹೇಬನು ಆಗ ರಂಗಪು ರಕ್ಕೆಪ್ರಥಮ ಕಲೆಕ್ಟರಾಗಿದ್ದನು. ಮಿಲಿಟರಿ ದಂಡು ಅವನ ಸ್ವಾಧೀನ ಮಾಡಲ್ಪಟ್ಟಿ ದ್ದಿತು. ಅವನು ಕಳ್ಳರನ್ನು ಹಿಡಿಯುವುದಕ್ಕೆ ಒಂದೊಂದು ಕುಂಪಣಿ ಶಿಪಾಯಿ ಗಳನ್ನು ಒಂದೊಂದು ದಿಕ್ಕಿಗೆ ಕಳುಹುತ್ತಿದ್ದನು. ಆದರೂ ಚೋರಿ ದರೋಡೆ ಗಳಾಗುವುದು ನಿಂತಿರಲಿಲ್ಲ. ಕಳ್ಳರ ಹಾವಳಿಯನ್ನು ಕುರಿತು ಹೇಳಿ ತೀರದು.

ಆದುದರಿಂದ ದುರ್ಲಭನಿಗೆ ಭಯ. ಅವನು ಪ್ರಫುಲ್ಲೆಯನ್ನು ಡಕಾಯಿತಿ ಮಾಡಿ ತೆಗೆದುಕೊಂಡು ಹೋಗುತ್ತಿದ್ದನು. ಅವನ ಮೇಲೆ ಕಳ್ಳರು ಬಿದ್ದು ಪುನಃ

ಡಕಾಯಿತಿ ಮಾಡುವರೆಂಬ ಭಯವು ಹತ್ತಿದ್ದಿತು. ಪಲ್ಲಕ್ಕಿಯನ್ನು ನೋಡಿ ಕಳ್ಳರು ಬರುವ ಸಂಭವ. ಆ ಭಯದಿಂದ ಬೋಯಿಗಳು ನಿಶ್ಶಬ್ದರಾಗಿ ಹೋಗುತ್ತಿದ್ದರು. ಗದ್ದಲವಾಗುವುದೆಂದು ಸಂಗಡ ಹೆಚ್ಚು ಜನರನ್ನು ಕರೆತಂದಿರಲಿಲ್ಲ. ದುರ್ಲಭ, ಫುಲ್ಲಮಣಿ ಇವರಿಬ್ಬರೇ ಸಂಗಡ ಇದ್ದವರು. ಹೀಗೆ ಭಯದಿಂದ ನಾಲ್ಕು ಹ[illegible] ದಾರಿಯ ಪಯಣವು ಸಾಗಿತು.

ಅಲ್ಲೊಂದು ದೊಡ್ಡ ಕಾಡಿಗೆ ಪ್ರಾರಂಭವಾಯಿತು. ಬೋಯಿಗಳು ಮುಂದುಗಡೆ ಇಬ್ಬರು ಮನುಷ್ಯರು ಬರುವುದನ್ನು ಕಂಡರು. ರಾತ್ರಿಕಾಲ-ಕೇವಲ ನಕ್ಷತ್ರದ ಬೆಳಕಿನಿಂದ ಹಾದಿನೋಡಿಕೊಂಡು ಹೋಗುತ್ತಿದ್ದರು. ಅದುಕಾರಣ ಮುಂದುಗಡೆ ಬರುತ್ತಿದ್ದವರು ಚೆನ್ನಾಗಿ ಕಾಣುತ್ತಿರಲಿಲ್ಲ. ಬೋಯಿಗಳ ಕಣ್ಣಿಗೆ ಮುಂದು ಬರುತ್ತಿಪ್ಪಾ ಮನುಷ್ಯರಿಬ್ಬರೂ ಕಾಲಾಂತಕ ಯಮನಂತೆ ಕಂಡು ಬಂದರು. ಬೋಯಿರಲ್ಲೊಬ್ಬನು ಮತ್ತೊಬ್ಬನನ್ನು ಕುರಿತು, 'ಮುಂದುಗಡೆ ಬರುವರಿಬ್ಬರನ್ನು ನೋಡಿದರೆ ಏನೋ ಅನುಮಾನವಾಗಿ ಕಾಣುತ್ತದೆ!' ಎಂದನು.

ಮತ್ತೊಬ್ಬ ಬೋಯಿ—ರಾತ್ರಿ ಇಷ್ಟೊಂದು ಹೊತ್ತಿನಲ್ಲಿ ಬರುವವರು ಒಳ್ಳೆಯವರಾದಾರೆ?

ಮೂರನೆಯವನು—ನೋಡಿದರೆ, ಅವರು ಭಾರಿ ಆಳುಗಳಾಗಿದ್ದಾರೆ.

ನಾಲ್ಕನೆಯವನು—ಕೈಯಲ್ಲಿ ದೊಣ್ಣೆಯಿರುವಹಾಗೆ ಕಾಣುವುದಿಲ್ಲವೆ?

ಐದನೆಯವನು—ಚಕ್ರವರ್ತಿಗಳೇನು ಹೇಳುತ್ತಾರೆ? ಕೇಳು. ಮುಂದ ವರಿದು ಹೋಗುವುದಕ್ಕಾಗುವುದಿಲ್ಲ. ಮುಂದೆ ಹೋದರೆ ಕಳ್ಳರ ಕೈಗೆ ಪ್ರಾಣ ನ್ನೊಪ್ಪಿಸುವುದೇ ಗತಿ!

ಚಕ್ರವರ್ತಿ—ಹಾಗೇವೇ ಕಾಣುತ್ತದೆ. ಮುಂದೆ ಹೋದರೆ ವಿಪತ್ತುಂಟಾಗು ವುದೇ ಸರಿ! ನಾನು ಭಯಪಡುತಿದ್ದಂತಾಯಿತು, ಏನುಮಾಡೋಣ!

ಹೀಗೆಂದು ಭಯವಿಹ್ವಲರಾಗಿ ಮಾತಾಡುತ್ತಿರುವಾಗ ಮುಂದುಗಡೆ ಬರುತ್ತಿದ್ದವರಿಬ್ಬರೂ ತಮ್ಮೆದುರಿಗೆ ಜನರು ಬರುವುದನ್ನು ಕಂಡು, 'ಯಾರೋ ಅದು?' ಎಂದು ಕೂಗುಹಾಕಿದರು.

ಅಷ್ಟು ಕೇಳಿದರೋ ಇಲ್ಲವೊ, ಬೋಯಿಗಳು ಪಲ್ಲಕ್ಕಿಯನ್ನು ನೆಲದಮೇಲೆ ಹಾಕಿಬಿಟ್ಟು, 'ಅಯ್ಯೋ! ಅಪ್ಪಾ! ಕೆಟ್ಟೆನೊ! ಸತ್ತೆನೊ!' ಎಂದು ಕೂ[illegible] ಕೊಂಡು ಕಾಡುಬಿದ್ದು ದಿಕ್ಕೆಟ್ಟು ಓಡಿಹೋದರು. ಅದನ್ನು ಕಂಡು ದುರ್ಲಭ ಚಕ್ರವರ್ತಿ ಮಹಾಶಯನು ಅದೇ ಮಾರ್ಗವನ್ನು ಹಿಡಿದನು. ಫುಲ್ಲಮಣಿಯು 'ನನ್ನನ್ನು ಕೈಬಿಟ್ಟು ಹೋದಿಯೇನೋ!' ಎಂದು ಅರಚುತ್ತ ಅವನ ಹಿಂದೆ ಹಿಂದೆ ಓಡಿದಳು

ಆ ಹತ್ತುಮಂದಿ ಜನರಿಗೆ ಅಷ್ಟೊಂದು ಭಯಕ್ಕೆ ಕಾರಣರಾದ ಮುಂದು ಗಡೆ ಬರುತ್ತಿದ್ದವರಿಬ್ಬರೂ ದಾರಿಯಲ್ಲಿ ಹೋಗುವ ಪ್ರಯಾಣಿಕರಾಗಿದ್ದರು:

ಕಳ್ಳರಲ್ಲ ; ಅವರಿಬ್ಬರೂ ಹಿಂದೂಸ್ಥಾನದವರು. ದಿನಾಜಪುರದಲ್ಲಿ ಸರ್ಕಾರದ ಚಾಕರಿಯನ್ನು ಸಂಪಾದಿಸಿಕೊಳ್ಳುವುದಕ್ಕೆ ಹೋಗುತಿದ್ದವರು. ಕೋಳಿ ಕೂಗುವ ಹೊತ್ತಿಗೆದ್ದು ಪಯಣವಾಗಿ ಹೊರಟು ಬರುತಿದ್ದವರು ಬೋಯಿಗಳು ಓಡಿಹೋದು ದನ್ನು ಕಂಡು ಬಹಳ ನಕ್ಕು, ಬಳಿಕ ತಮ್ಮ ಹಾದಿಗೊಂಡು ಹೋದರು. ಆದರೆ ಬೋಯಿಗಳಾಗಲಿ, ಫುಲ್ಲಮಣಿಯಾಗಲಿ, ಚಕ್ರವರ್ತಿ ಮಹಾಶಯನಾಗಲಿ ಆರೂ ಪುನಃ ಅತ್ತಕಡೆ ಹಿಂದಿರುಗಿ ನೋಡಲಿಲ್ಲ.

ಪ್ರಫುಲ್ಲೆಯು ಪಲ್ಲಕ್ಕಿಯಲ್ಲಿದ್ದು ಕುಳಿತುಕೊಂಡು ತನ್ನ ಕೈಯಿಂದ ಮುಖಕ್ಕೆ ಕಟ್ಟಿದ್ದ ಬಟ್ಟೆಯನ್ನು ಬಿಚ್ಚಿದಳು. ಅಷ್ಟುಹೊತ್ತಿನಲ್ಲಾರೂ ಇಲ್ಲದಾ ಅರಣ್ಯದಲ್ಲಿ ಕೂಗಿಕೊಂಡರೆ ಪ್ರಯೋಜನವೇನು ? ಶಬ್ದವನ್ನು ಕೇಳಿ ಕಳ್ಳರೇ ಬಂದರೂ ಬರಬಹುದೆಂದು ಯೋಚಿಸಿದಳು. ಮೊದಲು ಅವಳಿಗೆ ಭಯದಿಂದ ಎಚ್ಚರ ತಪ್ಪಿದಂತಾಯಿತು. ಕೂಡಲೆ ಎಚ್ಚತ್ತುಕೊಂಡು, ಸುಮ್ಮನಿದ್ದರೆ ಪ್ರಯೋಜನವಿಲ್ಲವೆಂದೂ, ಧೈರ್ಯ ಮಾಡದಿದ್ದರೆ ಉಪಾಯವಿಲ್ಲವೆಂದೂ ತಿಳಿದಳು. ಬೋಯಿಗಳು ಪಲ್ಲಕ್ಕಿಯನ್ನು ಬಿಸುಟು ಓಡಿಹೋದಾಗ ಮತ್ತೊಂದು ವಿಪತ್ತಿಗೆ ಕಾರಣವಾಯಿತೆಂದು ತಿಳಿದಳು. ಮೆಲ್ಲ ಮೆಲ್ಲಗೆ ಪಲ್ಲಕ್ಕಿಯ ಬಾಗಿಲನ್ನು ತೆರದು ಹೊರಗೆ ನೋಡಲಾಗಿ, ಪ್ರಯಾಣಿಕರಿಬ್ಬರು ಬರುತಿದ್ದುದನ್ನು ಕಂಡಳು. ಅವರನ್ನು ನೋಡಿ ಪುನಃ ಶಬ್ದಮಾಡದೆ ಪಲ್ಲಕ್ಕಿಯ ಬಾಗಿಲನ್ನು ಹಾಕಿಕೊಂಡು ಬಾಗಿಲ ಕಂಡಿಯಿಂದ ನೋಡುತ್ತಿದ್ದಹಾಗೆ ಅವರಿಬ್ಬರೂ ಮುಂದೆ ಹೊರಟು ಹೋದರು. ಅನಂತರ ಪ್ರಫುಲ್ಲೆಯು ಪಲ್ಲಕ್ಕಿಯಿಂದ ಹೊರಗೆ ಬಂದು ನೋಡಲಾಗಿ ಅಲ್ಲಾರೂ ಇರಲಿಲ್ಲ.

ಪ್ರಫುಲ್ಲೆಯು ತನ್ನನ್ನು ಚೋರಿಮಾಡಿಕೊಂಡು ಬಂದವರು ಪುನಃ ಬರುವ ಸಂಭವವಿರಬಹುದೆಂತಲೂ, ಬಂದ ಮಾರ್ಗವನ್ನು ಹಿಡಿದು ಹೋದರೆ ಅವರ ಕೈಗೆ ಸಿಕ್ಕಿ ಬೀಳುವೆನೆಂತಲೂ ತಿಳಿದು, ಅದಕ್ಕೆ ಬದಲಾಗಿ ಅರಣ್ಯದಲ್ಲಿದ್ದು ಸಾಯು ವುದು ಮೇಲೆಂದು ಯೋಚಿಸಿ, ಬೆಳಗಾದ ಬಳಿಕ ಎಲ್ಲಾದರೂ ಹೋಗಬಹುದೆಂದು ಭಾವಿಸಿಕೊಂಡಳು.

ಹೀಗೆಂದು ಭಾವಿಸಿಕೊಂಡು ಪ್ರಫುಲ್ಲೆಯು ಕಾಡಿನೊಳಗೆ ಪ್ರವೇಶಿಸಿದಳು. ಅದೃಷ್ಟವು ಚೆನ್ನಾಗಿದ್ದು ಬೋಯಿಗಳು ಹೋದ ಮಾರ್ಗದಲ್ಲಿ ಹೋಗಲಿಲ್ಲವಾಗಿ ಅವರಾರೂ ಕಣ್ಣಿಗೆ ಬೀಳಲಿಲ್ಲ. ಅಲ್ಲಿಯೇ ಅಡವಿಯಲ್ಲಿ ಧೈರ್ಯವಾಗಿದ್ದಳು. ಸ್ವಲ್ಪ ಹೊತ್ತಿನಲ್ಲಿಯೇ ಬೆಳಕು ಹರಿಯಿತು.

ಬೆಳಗಾದಮೇಲೆ ಪ್ರಫುಲ್ಲೆಯು ವನದೊಳಗೆ ಅಲ್ಲಲ್ಲಿ ತಿರುಗಾಡುತ್ತಿದ್ದಳು. ಅಡವಿಯನ್ನು ಬಿಟ್ಟು ಹೊರಗೆ ಬರಲು ಮಾರ್ಗವು ಸಿಗಲಿಲ್ಲ ಒಂದು ಸ್ಥಳದಲ್ಲಿ ಅಳಿಸಿ ಹೋದೊಂದು ಕಾಲುಹಾದಿಯು ಕಣ್ಣಿಗೆ ಬಿತ್ತು. ಅದು ಕಾಡಿನೊಳಗೆ ಹೋಗುವ ಹಾದಿಯಾಗಿದ್ದಿತು. ಕಾಲುಹಾದಿಯಿದ್ದರೆ ಮುಂದೆ ಊರು ಇರ

ಬೇಕೆಂದು ಆ ಮಾರ್ಗವಾಗಿ ಹೋದಳು. ಮನೆಗೆ ಹಿಂದಿರುಗಿ ಹೋಗಲು ಭಯ; ಹೋದರೆ ಪುನಃ ಕಳ್ಳರ ಭಯ. ಕಳ್ಳರ ಕೈಗೆ ಬೀಳುವುದಕ್ಕಿಂತ ಕಾಡು ಮೃಗಗಳ ಬಾಯಿಗೆ ಬೀಳುವುದು ಮೇಲೆಂದು ಊರು ಕಡೆಗೆ ತಿರುಗಲಿಲ್ಲ.

ಪ್ರಫುಲ್ಲೆಯು ಕಾಲುಹಾದಿಯನ್ನು ಹಿಡಿದು ಬಹಳ ದೂರ ಹೋದಳು. ಆಗಲೇ ಹೊತ್ತುಇಳಿಯುತ್ತ ಬಂದಿದ್ದಿತು. ಆದರೂ ಗ್ರಾಮವಾವುದೂ ಸಿಗಲಿಲ್ಲ. ಕಡೆಗೆ ಕಾಲುಹಾದಿಯು ಅಳಿಸಿಹೋಗಿ ಮುಂದೆ ಮಾರ್ಗವು ಗೊತ್ತಾಗಲಿಲ್ಲ. ಆದರೆ ಅಲ್ಲಿ ಎರಡು ಮೂರು ಹಳೇ ಇಟ್ಟಿಗೆಗಳು ಬಿದ್ದಿದ್ದವು. ಮನಸ್ಸಿಗೆ ಸ್ವಲ್ಪ ಭರವಸೆಯುಂಟಾಯಿತು. ಇಟ್ಟಿಗೆಯು ಬಿದ್ದಿದ್ದುದರಿಂದ ಹತ್ತಿರ ಮನುಷ್ಯರು ವಾಸವಾಗಿರುವ ಮನೆಯಿರಬೇಕೆಂದು ತಿಳಿದುಕೊಂಡಳು.

ಹೋಗುತ್ತ ಹೋಗುತ್ತ ಇಟ್ಟಿಗೆಗಳ ಸಂಖ್ಯೆಯು ಹೆಚ್ಚಾಗುತ್ತ ಬಂದಿತು. ಅಡವಿಯು ಹೋಗುವುದಕ್ಕೆ ಅಸಾಧ್ಯವಾಗಿ ಬೆಳದಿದ್ದಿತು. ಹೇಗೋ ಹಾಗೆ ಮಾಡಿ ಮುಂದೆ ಹೋದಳು. ಹೋಗಿ ನೋಡಲಾಗಿ ಅಲ್ಲಿ ಹೆಚ್ಚು ಕಾಡು ಬೆಳೆದಿದ್ದ ಸ್ಥಳದಲ್ಲೊಂದು ಬಿದ್ದುಹೋದ ದೊಡ್ಡ ಮಹಡಿಯು ಕಂಡುಬಂದಿತು. ಪ್ರಫುಲ್ಲೆಯು ಇಟ್ಟಿಗೆಯ ರಾಶಿಯ ಮೇಲೆ ಹತ್ತಿ ಸುತ್ತು ನೋಡಿದಳು. ಮನೆಯಲ್ಲಿ ಬಿದ್ದುಹೋಗದ ಕೆಲವು ಭಾಗಗಳನ್ನು ಕಂಡು ಅದರಲ್ಲಿ ಮನುಷ್ಯರು ವಾಸವಾಗಿದ್ದರೂ ಇರಬಹುದೆಂದು ಭಾವಿಸಿಕೊಂಡವಳು, ಹೋಗಿ ಮನೆಯೊಳಗೆ ಪ್ರವೇಶಮಾಡಿ ನೋಡಿದಳು. ಬಾಗಿಲುಗಳೆಲ್ಲಾ ತೆರದಿದ್ದವು. ಒಳಗಾರು ಇರಲಿಲ್ಲ. ಆದರೆ ಮನುಷ್ಯರು ವಾಸವಾಗಿದ್ದ ಚಿಹ್ನೆಗಳಿದ್ದವು. ಒಳಗೊಬ್ಬ ಮುದುಕನು ಸಂಕಟಪಡುವಂತಿದ್ದ ಶಬ್ದವು ಕೇಳಿತು. ಶಬ್ದವು ಬಂದಕಡೆ ಹೋಗಿ ನೋಡಲಾಗಿ ಮುದುಕನೊಬ್ಬನು ಸಂಕಟಪಡುತ್ತಿದ್ದನು. ಅವನ ದೇಹವು ಶೀರ್ಣವಾಗಿ, ಓಷ್ಠವು ಒಣಗಿ, ಕಣ್ಣುಗಳು ಗುಂಡಿಗಿಳಿದು, ಶ್ವಾಸವು ವೇಗವಾಗಿದ್ದಿತು. ಅವನಿಗೆ ಮರಣವು ಹತ್ತರವಾಗಿದೆಯೆಂದು ತಿಳಿದು ಅವನ ಹಾಸಿಗೆಯ ಬಳಿ ಹೋಗಿ ನಿಂತಳು.

ಮುದುಕನು ಒಣಗಿಹೋಗಿದ್ದ ಗಂಟಲಿನಿಂದ, 'ಅಮ್ಮ! ನೀನಾರೆ? ನೀನಾವ ದೇವತೆಯೆ? ಪ್ರಾಣ ಹೋಗುವಾಗ ನನ್ನನ್ನುದ್ಧಾರ ಮಾಡುವುದಕ್ಕೆ ಬಂದಿಯೇನಮ್ಮ!' ಎಂದನು.

ಪ್ರಫುಲ್ಲ—ನಾನೊಬ್ಬ ಅನಾಥೆ–ದಿಕ್ಕಿಲ್ಲದವಳು–ದಾರಿತಪ್ಪಿ ಇಲ್ಲಿಗೆ ಬಂದೆನು. ನೀನೂ ಅನಾಥನಾಗಿರುವಂತೆ ಕಾಣುತ್ತದೆ. ನನ್ನಿಂದೇನಾದರೂ ನಿನಗೆ ಉಪಕಾರವಾಗಬೇಕಾದರೆ ಮಾಡುತ್ತೇನೆ.

ಮುದುಕ—ನನಗೆ ನೀನೀವೇಳೆಯಲ್ಲಿ ಬಹಳ ಉಪಕಾರವನ್ನು ಮಾಡಬಹುದು. ಜಯ ನಂದಲಾಲ! ಈ ವೇಳೆಯಲ್ಲಿ ಮನುಷ್ಯರ ಮುಖವನ್ನು ನೋಡುವಹಾಗಾಯಿತಲ್ಲ! ಅಮ್ಮ! ಬಾಯಾರಿಕೆಯಿಂದ ನನ್ನ ಪ್ರಾಣವು ಕಂಠ

ಗತವಾಗಿದೆ. ಸ್ವಲ್ಪ ನೀರನ್ನು ತಂದುಕೊಡು.

ಮನೆಯಲ್ಲಿ ಕೊಡವಿದ್ದಿತು. ಕೊಡದಲ್ಲಿ ನೀರಿದ್ದಿತು. ಕುಡಿಯುವುದಕ್ಕೆ ಸ್ಥಾಲಿಯಿದ್ದಿತು. ನೀರು ಕೊಡುವುದಕ್ಕಾರೂ ಮನುಷ್ಯರಿರಲಿಲ್ಲ ! ಪ್ರಫುಲ್ಲೆಯು ಅದರಿಂದ ನೀರನ್ನು ತಂದು ಕುಡಿಸಿದಳು.

ಮುದುಕನು ನೀರನ್ನು ಕುಡಿದು ಸ್ವಲ್ಪ ಶಾಂತನಾದನು. ಪ್ರಫುಲ್ಲೆಯು ಅರಣ್ಯ ಮಧ್ಯದಲ್ಲಿ ಮುಮೂರ್ಷು ವೃದ್ಧನೊಬ್ಬನಾ ಅವಸ್ಥೆಯಲ್ಲಿ ಬಿದ್ದಿರುವುದನ್ನು ಕಂಡು ಕುತೂಹಲವುಳ್ಳವಳಾದಳು. ಆದರೆ ವೃದ್ಧನಾಗ ಹೆಚ್ಚು ಮಾತಾಡು ವುದಕ್ಕೆ ಶಕ್ತಿಯುಳ್ಳವನಾಗಿರಲಿಲ್ಲ. ಅದುಕಾರಣ ಅವಳು ಹೆಚ್ಚು ಕೇಳಿ ಅವನ ಪರಿಚಯವನ್ನು ತಿಳಿಯಲಾಗಲಿಲ್ಲ. ಮುದುಕನು ಹೇಳಿದ ಕೆಲವು ಮಾತುಗಳಿಂದ ತಿಳಿಯಬಂದುದೇನೆಂದರೆ :—

ವೃದ್ಧನು ವೈಷ್ಣವನೆಂತಲೂ, ಅವನಿಗಾರೂ ದಿಕ್ಕಿರಲಿಲ್ಲವೆಂತಲೂ, ವೈಷ್ಣವಿ ಯೊಬ್ಬಳಿದ್ದವಳು ಅವನಿಗೆ ಮರಣಕಾಲವು ಬಂದುದನ್ನು ಕಂಡು ಕೈಗೆ ಸಿಕ್ಕಿ ಸಾಮಗ್ರಿಗಳನ್ನು ತೆಗೆದುಕೊಂಡು ಹೋದಳೆಂತಲೂ, ವೈಷ್ಣವ ವೃದ್ಧನಿಗೆ ಸತ್ತರೆ ದಹನ ಮಾಡದೆ ಸಮಾಧಿ ಮಾಡತಕ್ಕುದೆಂತಲೂ, ಅವನ ಕೋರಿಕೆಯ ಪ್ರಕಾರ ಓಡಿಹೋದ ವೈಷ್ಣವಿಯು ಅವನ ಸಮಾಧಿಗೆ ಸಲವಾಗಿ ಒಂದು ಗುಂಡಿಯನ್ನು ತೋಡಿದ್ದಳೆಂತಲೂ, ಹಾರೆ ಗುದ್ದಲಿಗಳು ಅಲ್ಲಿಯೇ ಬಿದ್ದಿರಬೇಕೆಂತಲೂ ತಿಳಿಯ ಬಂದಿತು. ವೃದ್ಧನು ಅಷ್ಟೊಂದು ಮಾತುಗಳನ್ನು ಶ್ರಮಪಟ್ಟು ಹೇಳಿ ಕಡೆಗೆ, ತಾನು ಸತ್ತಕೂಡಲೆ ತನ್ನ ದೇಹವನ್ನಾಗುಂಡಿಗೆ ಹಾಕಿ ಮಣ್ಣು ಮುಚ್ಚ ಬೇಕೆಂದು ಬೇಡಿದನು.

ಪ್ರಫುಲ್ಲೆಯು ಹಾಗೆ ಮಾಡುವದಾಗೊಪ್ಪಿಕೊಂಡಳು. ಅನಂತರ ವೃದ್ಧನು ಪುನಃ ಹೇಳ ತೊಡಗಿದನು :—

“ ನನಗೆ ಸ್ವಲ್ಪ ಧನವಿದೆ, ಅದನ್ನು ನೆಲದಲ್ಲಿ ಹುಗಿದಿಟ್ಟದ್ದೇನೆ. ಓಡಿ ಹೋದಾ ವೈಷ್ಣವಿಗೆ ಅದು ಗೊತ್ತಿಲ್ಲ. ಗೊತ್ತಾಗಿದ್ದರದನ್ನೂ ತೆಗೆದುಕೊಂಡು ಹೋಗದಿರುತ್ತಿರಲಿಲ್ಲ. ಆ ಹಣವನ್ನಾರಿಗಾದರೂ ಕೊಟ್ಟ ಹೊರತು ಪ್ರಾಣವು ಹೋಗುವುದಿಲ್ಲ. ಹಣವನ್ನಾರಿಗೂ ಕೊಡದೆ ಸತ್ತರೆ ಧನಪಿಶಾಚಿಯಾಗಿ ಗತಿ ಯಿಲ್ಲದೆ ಹೋಗುತ್ತೇನೆ. ವೈಷ್ಣವಿಗೆ ಆ ಹಣವನ್ನು ಕೊಡಬೇಕೆಂದಿದ್ದೆನು. ಅವಳೇ ಓಡಿಹೋದಳು. ಮತ್ತಾರ ಮುಖವನ್ನೂ ನೋಡಲಾರೆನು. ಅದು ಕಾರಣ ಆ ಧನವನ್ನೆಲ್ಲಾ ನಿನಗೆ ಕೊಟ್ಟು ಹೋಗುವೆನು. ನಾನೀಗ ಮಲಗಿರುವ ಹಾಸಿಗೆಯ ಕೆಳಗೊಂದು ಹಲಿಗೆಯಿದೆ. ಆ ಹಲಿಗೆಯನ್ನೆತ್ತಬೇಕು. ಎತ್ತಿದರೆ ಅದರ ಕೆಳಗೊಂದು ನೆಲಮುಹಡಿಯಿದೆ. ಅದಕ್ಕಿಳಿಯುವದಕ್ಕೊಂದು ಏಣಿಯನ್ನು ಹಾಕಿದೆ. ಆದರಮೇಲೆ ಇಳಿಯಬೇಕು. ಭಯವೇನೂ ಇಲ್ಲ. ಕೈಯಲ್ಲಿ ದೀಪ ವನ್ನು ತೆಗೆದುಕೊಂಡೊಯ್ಯಬೇಕು. ಕೆಳಗೊಂದು ದೊಡ್ಡದಾದ ಮನೆಯೇ

ಇದೆ. ಆ ಮನೆಯ ವಾಯವ್ಯ ಮೂಲೆಯಲ್ಲಿ ಹುಡುಕಬೇಕು, ಹುಡುಕಿದರೆ ಧನವು ಸಿಗುವುದು."

ಹೀಗೆಂದು ಹೇಳಿದನು. ಪ್ರಫುಲ್ಲೆಯು ಅವನ ಶುಶ್ರೂಷೆಯನ್ನು ಮಾಡಲಾರಂಭಿಸಿದಳು. ವೃದ್ಧನು, 'ದನವಿನ ಕೊಟ್ಟಿಗೆಯಲ್ಲಿ ಹಸುಗಳಿವೆ, ಹಾಲನ್ನು ಕರೆಯುವುದಕ್ಕೆ ಬಂದರೆ ಕರೆದು ತಂದು ಕಾಸಿ ನನಗೆ ಸ್ವಲ್ಪ ಕೊಡು; ನೀನೂ ತೆಗೆದುಕೋ' ಎಂದನು.

ಪ್ರಫುಲ್ಲೆಯು ಹಾಗೆಯೇ ಮಾಡಿದಳು. ಹಾಲನ್ನು ತರುವಾಗ ಸಮಾಧಿಗೋಸ್ಕರ ತೆಗೆದಿದ್ದ ಗುಂಡಿಯನ್ನು ನೋಡಿಕೊಂಡು ಬಂದಿದ್ದಳು. ಅಲ್ಲಿ ಕೊಡಲಿ ಮುಂತಾದವು ಬಿದ್ದಿದ್ದವು.

ಮಧ್ಯಾಹ್ನದ ಮೇಲೆ ವೃದ್ಧನಿಗೆ ಪ್ರಾಣವು ಹೋಯಿತು. ಪ್ರಫುಲ್ಲೆಯು ಅವನನ್ನೆತ್ತಿಕೊಂಡಳು. ವೃದ್ಧನ ಶರೀರವೆಲ್ಲಾ ಕ್ಷಯಿಸಿ ಬಹಳ ಹಗುರವಾಗಿದ್ದಿತು. ಪ್ರಫುಲ್ಲೆಗೆ ಬಲವು ಯಥೇಷ್ಟವಾಗಿದ್ದಿತು! ಅವಳು ಅವನನ್ನೆತ್ತಿಕೊಂಡು ಹೋಗಿ ಗುಂಡಿಯಲ್ಲಿ ಮಲಗಿಸಿ, ಮೇಲೆ ಮಣ್ಣನ್ನು ಹಾಕಿ ಗುಂಡಿಯನ್ನು ಚೆನ್ನಾಗಿ ಮುಚ್ಚಿದಳು. ಅನಂತರ ಹೋಗಿ ಹತ್ತಿರದಲ್ಲಿದ್ದ ಕೊಳದಲ್ಲಿ ಸ್ನಾನವನ್ನು ಮಾಡಿ ಒದ್ದೇಸೀರೆಯುಲ್ಲಿಯೇ ಬಂದು ಅರ್ಧ ಉಟ್ಟುಕೊಂಡು ಅರ್ಧ ಅರ್ಧವಾಗಿ ಬಿಸಿಲಿನಲ್ಲಿ ಒಣಗಿಸಿಕೊಂಡಳು. ಅದಾದ ಬಳಿಕ ಕೊಡಲಿ ಗುದ್ದಲಿಗಳನ್ನು ತೆಗೆದುಕೊಂಡು ವೃದ್ಧನ ಧನವನ್ನು ಹುಡುಕುವುದಕ್ಕೆ ತೊಡಗಿದಳು. ವೃದ್ಧನು ಅವಳಿಗೆ ಧನವನ್ನು ಕೊಟ್ಟುಹೋಗಿದ್ದಾನೆ. ಆದುದರಿಂದ ಅದನ್ನು ತೆಗೆದುಕೊಳ್ಳಲು ಬಾಧಕವೇನೂ ತೋರಲಿಲ್ಲ. ಪ್ರಫುಲ್ಲೆಯು ಬಡವಳೂ ಆಹುದು.

## ಒಂಭತ್ತನೆಯ ಪರಿಚ್ಛೇದ

ಪ್ರಫುಲ್ಲೆಯು ವೃದ್ಧನನ್ನು ಮಣ್ಣು ಮಾಡುವುದಕ್ಕೆ ಮುಂಚೆ ಅವನ ಹಾಸಿಗೆಯನ್ನು ತೆಗೆದು ಕಾಡಿನಲ್ಲಿ ಹಾಕಿಬಿಟ್ಟದ್ದಳು. ಆಗಲೇ ಹಾಸಿಗೆಯ ಕೆಳಗೆ ವೃದ್ಧನು ಹೇಳಿದ್ದಂತೆ ಮೂರು ಮೊಳದ ಸಮಚೌಕದ ಹಲಿಗೆಯು ನೆಲಕ್ಕೆ ಹುಗಿದಿದ್ದುದನ್ನು ನೋಡಿದಳು. ಹಾರೆಯನ್ನು ತಂದು ಹಲಿಗೆಯನ್ನೆಬ್ಬಿದಳು; ಅದರಡಿ ಕತ್ತಲೆ ಕವಿತೊಂದು ಗುಹೆಯಂತೆ ಹಳ್ಳವಿದ್ದಿತು. ಆ ಕತ್ತಲಲ್ಲಿ ಹಣಕಿ ನೋಡಿದಳು; ಇಳಿಯುವುದಕ್ಕೊಂದು ಏಣಿಯು ಕಂಡಿತು.

ಕಾಡಿನಲ್ಲಿ ಸೌದೆಗೆ ಕಡಿಮೆಯಾಗಿರಲಿಲ್ಲ. ಕಡಿದ ಸೌದೆಯು ಅಂಗಳದಲ್ಲಿ ಬಿದ್ದಿತ್ತು. ಅದನ್ನು ತೆಗೆದುಕೊಂಡು ಬಂದು ಸ್ವಲ್ಪ ಸೌದೆಯನ್ನಾ ನೆಲಮಾಳಿಗೆಯಲ್ಲಿ ಹಾಕಿದಳು. ಚಕಮುಕಿ ಕಲ್ಲುಗಳನ್ನು ಹುಡುಕಿದಳು. ವೃದ್ಧನು ಮನೆಯಲ್ಲಿದ್ದವನು ಅವಶ್ಯಕವಾಗಿ ಹೊಗೆಬತ್ತಿಯನ್ನು ಸೇದುತ್ತಿರಬೇಕು. ಸರ್ ವಾಲ್ಟರ್

ರಾಲೆ ಸಾಹೇಬನು* ತಂಬಾಕನ್ನು ಅಮೆರಿಕಾಖಂಡದಲ್ಲಿ ಕಂಡುಹಿಡಿದ ಬಳಿಕ ಆವ ವೃದ್ಧನೇ ಆಗಲಿ, ತಂಬಾಕಿಲ್ಲದೆ ನಶ್ವರವಾದೀ ನೀರಸವಾದ, ದುಃಖಮಯವಾದೀ ಪ್ರಾಣಕ್ಕೆ ಕೊನೆಗಾಣಿಸಬಲ್ಲನು! ಗ್ರಂಥಕಾರರಾದ ನಾವು ಕಂಠೋಕ್ತವಾಗಿ ಹೇಳುವೆವೇನೆಂದರೆ :—ತಂಬಾಕಿನ ಸೇವನೆಯಿಲ್ಲದ ಮುದುಕನಾದವನಿದ್ದರೆ ಅವನ ಸಾವು ಸಾವಲ್ಲ! ಅಂತಹ ಮುದುಕನು ಸಾಯದೆ ಕೆಲವು ದಿನವಿದ್ದೀ ಪೃಥ್ವಿಯ ದುಸ್ಸಹವಾದ ಯಾತನೆಯನ್ನನುಭವಿಸುವುದೇ ಮೇಲೆಂದು ಹೇಳುವೆವು. ಪ್ರಫು ಲ್ಲೆಯು ಹುಡುಕಿ ನೋಡಲಾಗಿ ಅಗ್ನಿಯುತ್ಪಾದಕವಾದ ಚಕಮುಕಿಕಲ್ಲು ಮುಂತಾದ ಸಾಮಗ್ರಿಗಳು ಸಿಕ್ಕವು. ಬೆರಣಿಯನ್ನು ಪುಡಿಮಾಡಿ ಚಕಮುಕಿಯನ್ನು ಹೊಡೆದು ಬೆಂಕಿಯನ್ನು ಮಾಡಿದಳು. ಬೆಂಕಿಯನ್ನು ಕೊಂಡೊಯ್ದು ಏಣಿಯ ಮೂಲಕ ಕೆಳಕ್ಕಿಳಿದಳು. ಹಾರೆ ಗುದ್ದಲಿಗಳನ್ನು ಮೊದಲು ಕೆಳಗೆ ಹಾಕಿದ್ದಳು. ಕೆಳಗಿಳಿದು ನೋಡಲಾಗದು ದಿವ್ಯವಾದೊಂದು ಮನೆಯಾಗಿದ್ದಿತು. ವಾಯವ್ಯ ದಿಕ್ಕನ್ನು ಗೊತ್ತುಮಾಡಿಕೊಂಡಳು. ಕೆಳಗೆ ಹಾಕಿದ್ದ ಸೌದೆಯಿಂದ ಉರಿಯನ್ನು ಮಾಡಿ ದಳು. ಮೇಲಿನ ಬಾಗಿಲು ತೆರೆದಿತ್ತಾಗಿ ಹೊಗೆಯು ಆ ಮಾರ್ಗವಾಗಿ ಹೋಗು ತ್ತಿದ್ದಿತು. ಕೆಳಗಿನ ಮನೆಯೆಲ್ಲಾ ಬೆಳಕಾಯಿತು. ಪ್ರಫುಲ್ಲೆಯು ಅಲ್ಲಲ್ಲಿ ಹಾರೆ ಯನ್ನು ನೆಲಕ್ಕೆ ಹೊಡೆದು ಹುಡುಕಿದಳು.

ಹಾರೆಯನ್ನು ಹೊಡೆಯುತ್ತಿದ್ದಾಗ ಒಂದು ಸ್ಥಳದಲ್ಲಿ 'ಠನ್' ಎಂದು ಶಬ್ದ ವಾಯಿತು! ಪ್ರಫುಲ್ಲೆಯು ಶರೀರವು ರೋಮಾಂಚಿತವಾಯಿತು. ಹಾರೆಯು ಒಂದು ಕೊಡಕ್ಕೆ ತಗುಲಿದ ಶಬ್ದವು ಕೇಳಿತು. ಆದರೆ ಅದಾರ ಹಣವೆಂಬುದನ್ನೂ ಅದರಲ್ಲಿ ಬಂದ ಬಗೆಯನ್ನೂ ಮೊದಲು ಸ್ವಲ್ಪ ತಿಳಿಸುವೆವು.

ವೃದ್ಧನ ಹೆಸರು ಕೃಷ್ಣಗೋವಿಂದದಾಸ. ಅವನು ಕಾಯಸ್ಥನು; ಬಹು ಕಾಲ ಸುಖವಾಗಿದ್ದನು. ಆದರೆ ಬಹಳ ವಯಸ್ಸಾದ ಬಳಿಕ ಒಬ್ಬ ವೈಷ್ಣವಿಯ ಕೈಗೆ ಬಿದ್ದು ಹರಿಕೀರ್ತನೆಯಲ್ಲಿ ಮನಸಿಟ್ಟವನಾಗಿ ವೈರಾಗಿಯ ವೇಷವನ್ನು ತಾಳಿ ವೈಷ್ಣವಿಯೊಡನೆ ಶ್ರೀ ಬೃಂದಾವನಕ್ಕೆ ಪ್ರಯಾಣಮಾಡಿದನು. ಬೃಂದಾವನಕ್ಕೆ ಹೋದಬಳಿಕ ಅವನ ವೈಷ್ಣವಿಯು ಅಲ್ಲಿನ ವೈಷ್ಣವರು ಹಾಡುತ್ತಿದ್ದ ಜಯ ದೇವ ಗೀತ, ಶ್ರೀ ಮದ್ಭಾಗವತ ಮುಂತಾದುದರಲ್ಲಿ ಪಾಂಡಿತ್ಯವನ್ನು ಹೊಂದಿ ಅವರ ರೂಪ ಸೌಂದರ್ಯಗಳನ್ನನುಭವಿಸಿ ಅವರ ಪಾದಪದ್ಮನಿಕರವನ್ನು ಸೇವಿಸುವುದರ ದ್ವಾರಾ ಬಹಳ ಪುಣ್ಯವನ್ನು ಸಂಪಾದಿಸುವುದರಲ್ಲಿ ಮನವಿಟ್ಟವಳಾದಳು. ಕೃಷ್ಣಗೋವಿಂ ದನು ತನ್ನ ಹೊರೆಯ ಸಖಿಯು ಹೊರೆಗಳವಾಗಿ ಹೊಲ್ಲವಾಗುವಳೆಂಬ ಭಯದಿಂದ ಬೃಂದಾವನವನ್ನು ಬಿಟ್ಟು ಅವಳನ್ನು ಕಟ್ಟಿಕೊಂಡು ಪುನಃ ಬಂಗಾಳೆಗೆ ಬಂದನು. ಆಗವನು ಬಡವನಾಗಿದ್ದನು. ಎಲ್ಲಾದರೂ ಹೋಗಿ ಬಂದು ಚಾಕರಿಯನ್ನು ಸಂಪಾದಿಸಬೇಕೆಂಬಾಶೆಯಿಂದ ಮುರಶಿದಾಬಾದಿಗೆ ಬಂದನು. ಅಲ್ಲೊಂದು

* Sir Walter Raleigh.

ಚಾಕರಿಯೂ ಆಯಿತು. ಆದರೆ ಅವನ ವೈಷ್ಣವಿಯು ಬಹಳ ಸುಂದರಿಯೇ
ನಬಾಬಿನ ಮಹಲಿಗೆ ವರ್ತಮಾನವು ಮುಟ್ಟಿ ಅಲ್ಲಿಂದವಳನ್ನು ನಬಿನ ಬೇ
ಆಗಿ ಕೊಂಡೊಯ್ಯಲು ನಬಾಬಿನ ಜನರು ಕೃಷ್ಣಗೋವಿಂದನ ಮನೆಗೆ ಬ
ಹೋಗುತ್ತಿದ್ದರು. ವೈಷ್ಣವಿಯು ಲೋಭಕ್ಕೊಳಗಾಗಿ ಸಮ್ಮತಿಸುವಳಾಗಿದ್ದ
ಕೃಷ್ಣಗೋವಿಂದನು ಅಲ್ಲಿಯೂ ಕೆಲಸವು ಹೋಕಾಗಿ ಹೋಗುವ ಸಂದರ್ಭವ
ನೋಡಿ ವೈಷ್ಣವಿಯನ್ನು ಕರೆದುಕೊಂಡು ಅಲ್ಲಿಂದ ಹೇಳದೆ ಓಡಿಹೋದನು. ಆ
ಹೋಗುವುದೆಲ್ಲಿಗೆ? ಅಮೂಲ್ಯವಾದಾ ಸ್ತ್ರೀರತ್ನವನ್ನಿಟ್ಟುಕೊಂಡು ಜನರು
ವಾಗಿರುವ ಊರಿನಲ್ಲಿರುವುದು ಸರಿಯಲ್ಲವೆಂತಲೂ, ಎಂದಾದರೂ ಆರಾದ
ಅದನ್ನು ಅಪಹರಿಸುವರೆಂತಲೂ ತಿಳಿದು ಕೃಷ್ಣಗೋವಿಂದನು ವೈಷ್ಣವಿಯನ್ನು
ಕೊಂಡು ಪದ್ಮಾನದಿಪಾರಾಗಿ ಹೋಗಿ ಅಲ್ಲೊಂದು ನಿಭೃತಸ್ಥಳವನ್ನು ಹುಡುಕ
ರಂಭಿಸಿ, ಅಲ್ಲಲ್ಲಿ ತಿರುಗಿ, ಬಿದ್ದು ಹೋಗಿದ್ದೀ ಮಹಡಿಯ ಮನೆಗೆ ಬಂದು ಬಿದ್ದ
ನೋಡಲಾಗದು ತನ್ನಾ ಬಹುಮೂಲ್ಯದ ರತ್ನವನ್ನು ಭದ್ರಪಡಿಸಿಟ್ಟುಕೊಳ್ಳುವ
ಜನರ ಕಣ್ಣಿಗೆ ಮರೆಯಾದ ಸ್ಥಳವಾಗಿ ಕಂಡಿತು. ಅಲ್ಲಿಗೆ ಯಮನ ಹೊ
ಬೇರೆ ಜನರು ಬರುವ ಸಂಭವವಿರಲಿಲ್ಲ. ಆದುದರಿಂದ ಅವನು ಅಲ್ಲಿ ನೆಲೆಯ
ನಿಂತನು ಅವನು ಸಂತೆ ಸಂತೆಗೆ ಸ್ವಂತವಾಗಿ ಹೋಗಿ ಬೇಕಾದುದನ್ನು ತಂದ
ಕೊಳ್ಳುವನು. ವೈಷ್ಣವಿಯನ್ನು ಎಲ್ಲಿಗೂ ಕಳುಹುತ್ತಿರಲಿಲ್ಲ.

ಅವನೊಂದುದಿನ ಮನೆಯಲ್ಲೊಂದು ಒಲೆಯನ್ನು ಹಾಕುವುದಕ್ಕೆ ನೆಲವ
ಅಗೆಯುತ್ತಿದ್ದನು. ನೆಲವನ್ನು ಅಗೆಯುತ್ತಿದ್ದಾಗ ಒಂದು ಬಂಗಾರದ ನಾಣ
ಸಿಕ್ಕಿತು. ಅಲ್ಲಿ ಮತ್ತಷ್ಟು ಅಗೆಯಲಾಗಿ ಒಂದು ಕೊಪ್ಪರಿಕೆಯ ತುಂಬ ಹಣ
ಸಿಕ್ಕಿತು.

ಹಣವು ಸಿಕ್ಕದಿದ್ದರೆ ಕೃಷ್ಣಗೋವಿಂದನಿಗೆ ಸಂಸಾರವು ನಡೆಯುವುದು ಕ
ವಾಗುತ್ತಿದ್ದಿತು. ಹಣವು ಸಿಕ್ಕ ಬಳಿಕ ಸ್ವಚ್ಛಂದವಾಗಿ ಕಾಲಕ್ಷೇಪಕ್ಕೆ ಮಾರ್ಗ
ಯಿತು. ಆದರೆ ಕೃಷ್ಣಗೋವಿಂದನಿಗೊಂದು ಹೊಸದಾದ ಆತುರವು ಹುಟ್ಟಿ
ಹಣವು ಸಿಕ್ಕುತ್ತಲೇ ಅಂತಹ ಹಳೇ ಮನೆಯಲ್ಲಿ ಹೆಚ್ಚು ಧನವು ಭೂಗತವಾ
ಬೇಕೆಂದು ತೋರಿ ನಂಬುಗೆಯುಂಟಾಯಿತು. ಅದು ಮೊದಲ್ಗೊಂಡು ಅವ
ಅನುದಿನವೂ ಮಣ್ಣಿನಲ್ಲಿ ಹಣವನ್ನು ಹುಡುಕಲಾರಂಭಿಸಿದನ
ಹುಡುಕಿದಹಾಗೆಲ್ಲಾ ನೆಲದಲ್ಲಿ ಸುರಂಗಗಳೂ ಅದರಲ್ಲಿ ಕಳ್ಳ ಕೊಠಡಿಗ
ಹೊರಬಿದ್ದು, ಧನಪಿಶಾಚಿಯಹಾಗೆ ಅವುಗಳನ್ನೆಲ್ಲಾ ಶೋಧನೆಮಾಡಿದನು. ಆ
ಹೆಚ್ಚೇನೂ ದೊರೆಯಲಿಲ್ಲ. ಒಂದು ವರ್ಷ ಶ್ರಮಪಟ್ಟು ಸ್ವಲ್ಪ ಶ್ರಾಂತನಾದನ
ಆದರೂ ನಿತ್ಯವೂ ನೆಲಮಾಳಿಗೆಗೆ ಹೋಗಿ ಕಳ್ಳ ಕೊಠಡಿಗಳಲ್ಲಿ ಹುಡುಕುವುದ
ಬಿಡಲಿಲ್ಲ. ಹೀಗೆ ಶೋಧಿಸುತ್ತಿರಲಾಗ ಒಂದು ಕತ್ತಲೆಯಾದ ಕೋಣೆಯ
ಒತ್ತಟ್ಟು ಮೂಲೆಯಲ್ಲಿ ಏನೋ ಮಿನುಗುವಹಾಗೆ ಕಂಡಿತು. ಓಡಿಹೋಗಿ ಅದನ

ಕೈಯಲ್ಲಿ ತೆಗೆದು ನೋಡಿದನು. ಮೊಹರಾ! ಇಲಿಯು ಬಿಲಮಾಡಿ ತೆಗೆದುಹಾಕಿದ್ದ ಮಣ್ಣಿನಲ್ಲಿ ಸಿಕ್ಕಿತು.

ಕೃಷ್ಣಗೋವಿಂದನು ಅಂದು ಮತ್ತೇನನ್ನೂ ಮಾಡಲಿಲ್ಲ. ಸಂತೆಯ ದಿನ ಬರುವುದನ್ನು ಕಾದಿದ್ದನು. ಸಂತೆಯ ದಿನ ವೈಷ್ಣವಿಯನ್ನು ಕರೆದು, 'ನನಗೆ ಮೈಯಲ್ಲಿ ಆಲಸ್ಯವಾಗಿದೆ; ನೀನೇ ಹೋಗಿ ಸಂತೆಯಲ್ಲಿ ವ್ಯಾಪಾರವನ್ನು ಮಾಡಿಕೊಂಡು ಬರಬೇಕು' ಎಂದು ಹೇಳಿದನು. ವೈಷ್ಣವಿಯು ಸಂತೆಗೆ ಹೋದಳು. ಅವಳಿಗೆ ಹೊರಗೆ ಹೋಗಲು ಅವಕಾಶ ಸಿಕ್ಕಿದುದರಿಂದ ಜಾಗ್ರತೆಯಾಗಿ ಹಿಂದಿರುಗಿ ಬರಲಾರಳೆಂದು ಕೃಷ್ಣಗೋವಿಂದನು ಆ ಮೂಲೆಯಲ್ಲಿ ಅಗೆದು ನೋಡಲಾಗಿ ಇಪ್ಪತ್ತು ಕೊಪ್ಪರಿಗೆಗಳ ತುಂಬ ಹಣವಿದ್ದಿತು.

ಪೂರ್ವಕಾಲದಲ್ಲಿ ಉತ್ತರ ಬಂಗಾಳೆಯಲ್ಲಿ ನೀಳಧ್ವಜನ ವಂಶದ ಪ್ರಬಲ ಪರಾಕ್ರಮಶಾಲಿಗಳಾದ ರಾಜರು ರಾಜ್ಯವನ್ನಾಳುತ್ತಿದ್ದರು. ಆ ವಂಶದ ಕಡೆಯ ಅರಸಾಗಿದ್ದವನು ನೀಲಾಂಬರದೇವ; ನೀಲಾಂಬರದೇವನಿಗೆ ಅನೇಕ ರಾಜಧಾನಿಗಳಿದ್ದವು. ಅನೇಕ ನಗರಗಳಲ್ಲಿ ಅನೇಕ ಅರಮನೆಗಳಿದ್ದವು. ಅವುಗಳಲ್ಲಿ ಇದೊಂದು ಅರಮನೆಯಾಗಿದ್ದಿತು. ಅಲ್ಲಿ ವರ್ಷಕ್ಕೆ ಒಂದೆರಡು ವಾರಗಳು ಬಂದು ವಾಸಮಾಡುವನು. ಗೌಡದೇಶದ ಬಾದಷಹನು ಉತ್ತರ ಬಂಗಾಳೆಯನ್ನು ಜಯಿಸಲು ನೀಲಾಂಬರನ ಮೇಲೆ ದಂಡನ್ನು ಕಳುಹಿದನು. ಪಠಾನರು ಬಂದು ಜಯಿಸಿ ರಾಜಧಾನಿಯನ್ನು ಕೈವಶಮಾಡಿಕೊಂಡರೆ ತನ್ನ ಪೂರ್ವಪುರುಷರು ಗಳಿಸಿಟ್ಟದ್ದ ಸಂಪತ್ತು ಅವರ ಕೈವಶವಾಗಿ ಹೋಗುವುದೆಂಬ ಭಯದಿಂದ ನೀಲಾಂಬರನು ಮುಂಜಾಗ್ರತನಾಗಿ ಯುದ್ಧವು ಪ್ರಾರಂಭವಾಗುವುದಕ್ಕೆ ಮೊದಲು ಏಕಾಂತವಾಗಿ ರಾಜಭಾಂಡಾರದಲ್ಲಿದ್ದ ದ್ರವ್ಯವನ್ನೆಲ್ಲಾ ಈ ಅರಮನೆಗೆ ತಂದು ನೆಲದಲ್ಲಿ ಹುಗಿದಿಟ್ಟನು. ಹಣವು ಇಟ್ಟದ್ದ ಸ್ಥಳವು ಅವನ ಹೊರತು ಮತ್ತಾರಿಗೂ ಗೊತ್ತಿರಲಿಲ್ಲ. ಯುದ್ಧದಲ್ಲಿ ನೀಲಾಂಬರನು ಬಂದಿಯಾಗಿ ಒಯ್ಯಲ್ಪಟ್ಟನು. ಪಠಾನಾಧಿಪನು ಅವನನ್ನು ಗೌಡದೇಶಕ್ಕೆ ಕೊಂಡೊಯ್ದನು. ಬಳಿಕ ಅವನನ್ನು ಮನುಷ್ಯಲೋಕದಲ್ಲಾರೂ ನೋಡಲಿಲ್ಲ. ಅವನು ದೇಶಕ್ಕೆ ಹಿಂದಿರುಗಿ ಬರಲಿಲ್ಲ. ಅದು ಮೊದಲ್ಗೊಂಡು ಆ ಧನರಾಶಿಯು ಅಲ್ಲಿ ಭೂಗರ್ಭದಲ್ಲಿ ಮರೆಯಾಗಿದ್ದುದು ಕೃಷ್ಣಗೋವಿಂದನಿಗೆ ಸಿಕ್ಕಿತು. ಬಂಗಾರ, ಮುತ್ತು, ಪಚ್ಚೆ, ವಜ್ರ ಮುಂತಾದ ನವರತ್ನಗಳಿಗೆ ಸಂಖ್ಯೆಯಿರಲಿಲ್ಲ. ಆರಣ್ಯವಾರಿಗೂ ಗೊತ್ತಿಲ್ಲ. ಅಷ್ಟೊಂದು ಧನರಾಶಿಯು ಕೃಷ್ಣ ಗೋವಿಂದನ ಕೈವಶವಾಗಿದ್ದಿತು.

ಕೃಷ್ಣಗೋವಿಂದನು ಧನವನ್ನೆಲ್ಲಾ ಹಾಗೆಯೇ ನೆಲದಲ್ಲಿ ಮಣ್ಣುಹಾಕಿ ಮುಚ್ಚಿಟ್ಟಿದ್ದನು. ಅವನ ವೈಷ್ಣವಿಗೆ ಒಂದು ದಿನವಾದರೂ ಅದರ ಪ್ರಸ್ತಾಪವನ್ನು ಕುರಿತು ತಿಳಿಸಿರಲಿಲ್ಲ. ಅವನು ಬಹಳ ಕೃಪಣ. ಅದರಿಂದೊಂದು ಮೊಹರನ್ನಾದರೂ ತೆಗೆದು ವೆಚ್ಚಮಾಡಿರಲಿಲ್ಲ. ಅದನ್ನು ತನ್ನ ಮೈರಕ್ತದಂತೆ ಕಾಪಾಡು

ತಿದ್ದನು. ಮೊದಲು ಸಿಕ್ಕಿದ ಕೊಪ್ಪರಿಗೆಯ ಹಣದಿಂದ ವೆಚ್ಚಕ್ಕೆ ತೆಗೆದುಕೊಳ್ಳು ತ್ತಿದ್ದನು. ಅವನಾ ಧನರಾಶಿಯೆಲ್ಲಾ ಈಗ ಪ್ರಫುಲ್ಲೆಗೆ ಸಿಕ್ಕಿತು. ಕೊಪ್ಪರಿಗೆ ಗಳನ್ನೆಲ್ಲ ಚೆನ್ನಾಗಿ ಮುಚ್ಚಿ ಮರೆಮಾಡಿ ಪ್ರಫುಲ್ಲೆಯು ಬಂದು ಮಲಗಿಕೊಂಡಳು. ಹಗಲೆಲ್ಲಾ ಶ್ರಮಪಟ್ಟಿದ್ದ ಪ್ರಫುಲ್ಲೆಗೆ ಅಲ್ಲಿದ್ದಾ ಹುಲ್ಲಿನ ಹಾಸಿಗೆಯಲ್ಲಿ ಜಾಗ್ರತೆ ಯಾಗಿ ನಿದ್ರೆಯು ಬಂದಿತು.

---

## ಹತ್ತನೆಯ ಪರಿಚ್ಛೇದ

ಈಗ ಫುಲ್ಲಮಣಿಯ ವಿಚಾರವನ್ನು ಕುರಿತು ಹೇಳುವೆವು. ಫುಲ್ಲಮಣಿಯು ಹರಿಣಿಯ ಹಾಗೆ ಹಾರಿ ಹಾರಿ ಪ್ರಾಣದಲ್ಲಿ ಪ್ರಾಣವಿಲ್ಲದೆ ಓಡುತ್ತಾಳೆ! ಕಳ್ಳರ ಭಯಕ್ಕೋಸ್ಕರ ದುರ್ಲಭಚಂದ್ರ ಚಕ್ರವರ್ತಿಯು ಮುಂದೆ ಮುಂದೆ ಓಡುತ್ತಾನೆ. ಫುಲ್ಲಮಣಿಯು ಅವನ ಬೆನ್ನು ಹತ್ತಿದ್ದಾಳೆ. ದುರ್ಲಭನ ದೌಡು ಅತಿವೇಗವಾದುದರಿಂದ ಹಿಂದುಗಡೆ ದೌಡಾಗಿ ಹೋಗುತ್ತಿದ್ದ ಅವನ ಪ್ರೀತಿಪಾತ್ರೆ ಗವನು ದುರ್ಲಭನಾಗಿ ಹೋದನು. ಫುಲ್ಲಮಣಿಯು, 'ಎಲೋ! ನಿಲ್ಲೋ! ನನ್ನನ್ನು ಕೈಬಿಟ್ಟು ಹೋಗಬೇಡವೋ!' ಎಂದು ಮುಂತಾಗಿ ಕೂಗನ್ನು ಹೆಚ್ಚು ಮಾಡಿದಹಾಗೆಲ್ಲಾ ದುರ್ಲಭಚಂದ್ರನು ಅಷ್ಟಷ್ಟು ಘಟ್ಟಿಯಾಗಿ, 'ಅಯ್ಯೊಪ್ಪೋ! ಅಗೋ! ಬಂದರಲ್ಲೋ!' ಎಂದು ಕೂಗುತ್ತ ಕಾಡು ಮುಳ್ಳುಗಿಡಗಳಲ್ಲಿ ನುಸಿದು, ದಿಬ್ಬಗಳನ್ನು ಏರಿ ಬಿದ್ದು, ಹಾರಿ ಕೆಸರು ಗುಂಡಿಗಳಲ್ಲಿ ಬಿದ್ದೆದ್ದು, ದಾಟುತ್ತ ಊರ್ಧ್ವಶ್ವಾಸದಲ್ಲಿ ಓಡುತ್ತಾನೆ—ಹಾ! ಕಚ್ಚೆಯು ಬಿಚ್ಚಿಹೋಗಿದೆ, ಒಂದು ಕಾಲಿನ ಚಡಾವು ಎಲ್ಲಿಯೋ ಬಿದ್ದುಹೋಯಿತು. ಉಟ್ಟಿದ್ದ ಧೋತ್ರ ದೊಂದು ಭಾಗವು ಹರಿದುಹೋಗಿ ಮುಳ್ಳುಗಿಡಕ್ಕೆ ತಗಲಿಕೊಂಡು ಅವನ ಶೌರ್ಯ ಪ್ರತಾಪಗಳಿಗೆ ಧ್ವಜಪಟ ಸ್ವರೂಪವಾಗಿ ಗಾಳಿಗೆ ಹಾರುತಿದೆ. ಆಗ ಫುಲ್ಲಮಣಿ ಸುಂದರಿಯು, 'ನನ್ನ ಹಾಳ್ಮಗನೆ! ಹೇಡಿಮುಂಡೆ! ಹೆಂಗಸನ್ನು ಹಿಂದೆಬಿಟ್ಟು ಓಡಿಹೋಗುವನೆ! ಕಳ್ಳರ ಕೈಗೆ ಸಿಕ್ಕಿಹಾಕಿ ಹೋದೆಯೇನೋ!' ಎಂದು ಅರಚಿದಳು. ಅದನ್ನು ಕೇಳಿ ದುರ್ಲಭನು, ಹೆಂಗಸು ಕಳ್ಳರ ಕೈಗೆ ಸಿಕ್ಕಿಬಿದ್ದಳೆಂದು ತಿಳಿದವನಾಗಿ ಹಿಂದಿರುಗಿ ನೋಡದೆ ಮತ್ತಷ್ಟು ಗಟ್ಟಿಯಾಗಿ ಕೂಗಿಕೊಳ್ಳುತ್ತ ವಾಯುವೇಗದಿಂದ ದೌಡುಕಿತ್ತನು. ಫುಲ್ಲಮಣಿಯು, 'ಎಲೋ! ನಿನಗೆ ಕೇಡು ಬರಲೊ! ಹೇಡಿ ಮುಂಡೆಗಂಡ! ನಿನ್ನನ್ನು ಸುಡ! ಹಾದರಗಿತ್ತಿಯ ಮಗನೆ! ಬಿಟ್ಟು ಹೋಗಬೇಡವೊ!' ಎಂದು ಮುಂತಾದ ನಾನಾ ವಿಧವಾದ ನಾಮಾವಳಿಗಳಿಂದ ಕೂಗುತ್ತ ಓಡುತ್ತಿದ್ದಳು. ಅಷ್ಟೊಂದು ಹೊತ್ತಿಗೆ ದುರ್ಲಭನು ಅದೃಶ್ಯನಾಗಿ ಬಿಟ್ಟನು. ಫುಲ್ಲಮಣಿಯು ಕೂಗಿ ಕೂಗಿ ಗಂಟ್ಲು ಕುಗ್ಗಿ ಸೊಲ್ಲಡಗಿ ಅಳುವುದಕ್ಕೆ ತೊಡಗಿದಳು. ಅಳುತ್ತ ದುರ್ಲಭನ ತಾಯಿತಂದೆಗಳ ಮೇಲೆ ನಾನಾ ವಿಧವಾದ ದೋಷಾರೋಪಣೆ ಮಾಡುತ್ತಿದ್ದಳು.

ಇತ್ತಲಾಗಿ ಫುಲ್ಲಮಣಿಯು ನೋಡಲು ಕಳ್ಳರಾರೂ ಬರಲಿಲ್ಲ; ಸ್ವಲ್ಪ ನಿಂತು ನೋಡಿದಳು. ಅಳುವನ್ನು ನಿಲ್ಲಿಸಿ ನೋಡಿದಳು—ಕಳ್ಳರೂ ಬರಲಿಲ್ಲ; ದುರ್ಲಭನೂ ಕಾಣಲಿಲ್ಲ. ಆಗವಳಾ ಅರಣ್ಯದಿಂದ ಹೊರಗೆ ಹೋಗುವುದಕ್ಕೆ ದಾರಿಯನ್ನು ಹುಡುಕಲಾರಂಭಿಸಿದಳು. ಅವಳಂತಹ ಚತುರೆಗೆ ದಾರಿಯು ಸಿಕ್ಕುವುದು ಕಷ್ಟ ವಿಲ್ಲ. ದಾರಿಯನ್ನು ಕಂಡುಹಿಡಿದು ಕಾಡಿನಿಂದ ಹೊರಗೆ ಹೊರಟು ರಸ್ತೆಗೆ ಬಂದು ನಿಂತಳು. ಅಲ್ಲಾರನ್ನೂ ಕಾಣದೆ ಮನೆಯಕಡೆಗೆ ತಿರುಗಿದಳು. ಆಗವಳಿಗೆ ದುರ್ಲಭನಮೇಲೆ ಕಡಿಕೋಪ.

ಬಹಳ ಹೊತ್ತಿನ ಮೇಲೆ ಮನೆಗೆ ಬಂದು ಸೇರಿದಳು. ಬಂದು ನೋಡಲಾಗಿ ಅವಳ ಅಕ್ಕ ಅಳಕಮಣಿಯು ಮನೆಯಲ್ಲಿರಲಿಲ್ಲ. ಬಾಗಿಲನ್ನು ಹಾಕಿಕೊಂಡು ಸ್ನಾನಕ್ಕೆ ಕೆರೆಗೆ ಹೋಗಿದ್ದಳು. ಫುಲ್ಲಮಣಿಯು ಆರಿಗೂ ಏನನ್ನೂ ಹೇಳದೆ ಬೀಗ ವನ್ನು ಮುರಿದು ಬಾಗಿಲನ್ನು ತೆರೆದು ಓರೆಮಾಡಿಕೊಂಡು ಒತ್ತಟ್ಟಿ ಮಲಗಿದಳು. ರಾತ್ರಿ ನಿದ್ದೆಯಿಲ್ಲ, ಮಲಗುತ್ತಲೇ ನಿದ್ದೆಯು ಬಂದಿತು.

ಅವಳಕ್ಕನು ಬಂದವಳನ್ನೆಬ್ಬಿಸಿ, 'ಏನೆ! ಏಕೆ ಇಷ್ಟು ಹೊತ್ತಾಯಿತು?' ಎಂದು ಕೇಳಿದಳು.

ಫುಲ್ಲಮಣಿ—ಅದೇಕೆ? ನಾನೆಲ್ಲಿಗೆ ಹೋಗಿದ್ದೆನೆ!

ಅಳಕಮಣಿ—ಮತ್ತೆಲ್ಲಿಗೆ ಹೋಗುವೆ? ಬ್ರಾಹ್ಮಣರ ಮನೆಗೆ ಮಲಗುವು ದಕ್ಕೆ ಹೋಗಿದ್ದವಳು ಇಷ್ಟು ಹೊತ್ತಾದರೂ ಬರಲಿಲ್ಲ. ಅದಕ್ಕೆ ಸಲವಾಗಿ ಕೇಳಿದೆನು.

ಫುಲ್ಲಮಣಿ—ನಿನ್ನ ಕಣ್ಣು ಇಂಗಿತು! ದೇವರು ಹಣೆಯಮೇಲೆ ಕಣ್ಣು ಕೊಟ್ಟಿಲ್ಲವೆ! ನಿನ್ನ ಕಣ್ಣೆದೆರಿಗೇನೇ ಹೊತ್ತಾರೆ ಬೆಳಗಿನ ಜಾಮಕ್ಕೆ ಬಂದು ಮಲಗಿದೆನಲ್ಲೆ! ನೋಡಲಿಲ್ಲವೆ?

ಅಳಕಮಣಿ—ಅದೇನೇ! ತಂಗಿ? ನಾನು ಬ್ರಾಹ್ಮಣರ ಮನೆಗೆ ಕೋಳಿ ಕೂಗುವ ಹೊತ್ತಿನಲ್ಲಿ ಹೋಗಿ ನಿನ್ನನ್ನು ಹುಡುಕಿ ಕೂಗಿ ಬಂದಿದ್ದೇನೆ. ನಿನ್ನನ್ನು ಕಾಣಲಿಲ್ಲ. ಅಲ್ಲಾರನ್ನೂ ನೋಡಲಿಲ್ಲ. ಅಯ್ಯೊ! ಪಾಪವೆ! ಆ ಪ್ರಫುಲ್ಲೆಯು ಏನಾದಳೆ?

ಫುಲ್ಲಮಣಿ—(ಮುಖವು ಕಳೆಗಿಟ್ಟು) ಸುಮ್ಮನಿರು! ಅಕ್ಕ! ಕೂಗಬೇಡ; ಆ ಮಾತನ್ನು ಬಾಯಿಂದ ಹೇಳಬೇಡ!

ಅಳಕಮಣಿ—(ಭಯದಿಂದ) ಏಕೆ? ಏನಾದಳೆ?

ಫುಲ್ಲಮಣಿ—ಆ ಮಾತನ್ನು ಹೇಳಬಾರದು.

ಅಳಕಮಣಿ—ಏಕೆ? ತಂಗಿ!

ಫುಲ್ಲಮಣಿ—ನಾವು ಬಡವರು–ಬ್ರಾಹ್ಮಣರು ದೇವರಹಾಗೆ. ಅವರಮಾತು ನಮಗೇಕೆ? ಅಕ್ಕ!

ಅಳಕಮಣಿ—ಅದೇಕೆ? ಪ್ರಫುಲ್ಲೆಯು ಏನನ್ನು ಮಾಡಿದಳು?

ಫುಲ್ಲಮಣಿ—ಪ್ರಫುಲ್ಲೆಯು ಈಗ ಇದ್ದಾಳೆಯೆ? ಏನು?

ಅಳಕಮಣಿ—(ಪುನಃ ಭಯದಿಂದ) ಅದೇನೆ? ಏನು ಹೇಳುತ್ತಿ?

ಫುಲ್ಲಮಣಿ—(ಮೆಲ್ಲ ಮೆಲ್ಲಗೆ) ಏನು ಹೇಳಿದೆ? ಆರಿಗೂ ಹೇಳಬೇಡ, ನಿನ್ನೆ ರಾತ್ರಿ ಅವಳ ತಾಯಿಯು ಬಂದು ಅವಳನ್ನು ಕರೆದುಕೊಂಡು ಹೋದಳು.

ಅಳಕಮಣಿ—ಹಾಗೊ!

ಅಳಕಮಣಿಯ ಮೈಯೆಲ್ಲಾ ಥರಥರ ನಡುಗಿತು. ಫುಲ್ಲಮಣಿಯು ಒ[illegible] ಪೊಳ್ಳು ಕಥೆಯನ್ನು ಹೇಳಿದಳು. ಏನೆಂದರೆ—'ನಾನು ಮಲಗಿದ್ದ ಹಾಸಿ[illegible] ಮೇಲೆ ಪ್ರಫುಲ್ಲೆಯು ಮಲಗಿದ್ದಳು. ಒಳ್ಳೇ ಅರ್ಧರಾತ್ರಿಯಲ್ಲಿ ಅವಳ ತಾಯಿ[illegible] ಬಂದು ಕುಳಿತಿದ್ದಳು. ಆಗ ಮನೆಯೊಳ್ಳೊಂದು ದೊಡ್ಡ ಬಿರುಗಾಳಿಯೆದ್ದಿತು. [illegible] ಮನೆಯಲ್ಲಾರೂ ಇರಲಿಲ್ಲ. ಪ್ರಫುಲ್ಲೆಯು ಮೂರ್ಛಿತೆಯಾಗಿ ಹಲ್ಲುಕ[illegible] ಕೊಂಡು ಬಿದ್ದಿದ್ದಳು' ಎಂದು ಮುಂತಾಗಿ ಹೇಳಿ ಕಡೆಗೆ ಕಥೆಯನ್ನು ಮು[illegible] ವಾಗ, 'ಈ ಮಾತುಗಳನ್ನಾರಿಗೂ ಹೇಳಬೇಡ, ನನ್ನಾಣೆ!' ಎಂದಳು.

ಅಕ್ಕನು, 'ಇಲ್ಲ, ಅಂತಹ ಮಾತುಗಳನ್ನಾರಿಗಾದರೂ ಹೇಳುವುದುಂ[illegible] ಎಂದು ಹೇಳಿ, ಕೂಡಲೆ ಅಕ್ಕಿಯನ್ನು ತೊಳೆಯುವುದಕ್ಕೆ ಮೊರವನ್ನು ತೆ[illegible] ಕೊಂಡು ಕೆರೆಗೆ ಹೊರಟಳು. ಹೋಗುತ್ತ ದಾರಿಯಲ್ಲಿ ಮನೆಮನೆಯಲ್ಲಿಯೂ ಕಥೆಯನ್ನು ಮತ್ತಷ್ಟು ಸೇರಿಸಿ ಸಾಲಂಕಾರವಾದ ವ್ಯಾಖ್ಯಾನದಿಂದ ಹೇಳಿ, [illegible] ರಿಗೂ ಆರಿಗೂ ಹೇಳಬೇಡಿರೆಂದು ಹೇಳಿಕೊಂಡು ಬಂದಳು. ಕೂಡಲೆ ಊರಲ್ಲೆ[illegible] ಪ್ರಚಾರವಾಯಿತು. ಸ್ವಲ್ಪ ದಿನದಲ್ಲಿಯೇ ಕಥೆಯು ರೂಪಾಂತರವನ್ನು [illegible] ಪ್ರಫುಲ್ಲೆಯ ಅತ್ತೆಯ ಮನೆಗೆ ತಲ್ಪಿತು. ಕಥೆಯು ತಾಳಿದ ರೂಪಾಂತರವ[illegible] ಕುರಿತು ಕಡೆಗೆ ಹೇಳುವೆವು.

---

## ಹನ್ನೊಂದನೆಯ ಪರಿಚ್ಛೇದ

ಪ್ರಫುಲ್ಲೆಯು ಬೆಳಿಗ್ಗೆ ಎದ್ದು, 'ಏನು ಮಾಡಲಿ? ಎಲ್ಲಿಗೆ ಹೋಗಲಿ? ಈ [illegible] ನಲ್ಲಿರುವುದು ಸರಿಯಲ್ಲ; ಸ್ಥಳವೂ ಸರಿಯಾದುದಲ್ಲ. ಇಲ್ಲೊಬ್ಬಳೇ [illegible] ವುದು ಹೇಗೆ? ಹೋಗುವುದೆಲ್ಲಿಗೆ? ಮನೆಗೆ ಹಿಂದಿರುಗಿ ಹೋಗಲೆ? ಹೋದರೆ [illegible] ಕಳ್ಳರು ಹಿಡಿದುಕೊಂಡು ಹೋಗುವರು; ನಾನು ಹೋಗುವಲ್ಲಿಗೆ ಈ ಧನ[illegible] ಯನ್ನು ಕೊಂಡೊಯ್ದು ಹೋಗುವುದು ಹೇಗೆ? ಜನಗಳಿಂದ ಹೊರಿಸಿಕೊ[illegible] ಹೋದರೆ ಎಲ್ಲರಿಗೂ ಬಹಿರಂಗವಾಗಿ ಕಳ್ಳರು ಬಿದ್ದು ದೋಚಿಕೊಂಡು ಹೋ[illegible] ವರು. ಜನರು ಸಿಗುವುದೆಲ್ಲಿ? ಜನರು ಸಿಕ್ಕರೂ ಅವರನ್ನು ನಂಬುವುದು ಹೇಗೆ[illegible]

ನನ್ನನ್ನು ಹಿಡಿದುಹಾಕಿ ಹಣವನ್ನೆಲ್ಲಾ ದೋಚಿಕೊಂಡು ಹೋಗುವುದು ಎಷ್ಟು ಹೊತ್ತು? ಧನದಾಶೆಯನ್ನು ಅಡಗಿಸಲಾರಿಗೆ ಸಾಧ್ಯ?' ಎಂದು ಮುಂತಾಗಿ ಯೋಚಿಸುತ್ತಿದ್ದಳು.

ಪ್ರಫುಲ್ಲೆಯು ಬಹಳಹೊತ್ತು ಯೋಚಿಸಿದಳು. ಕಡೆಗೆ, 'ಅದೃಷ್ಟವು ಹೇಗಿದ್ದರೂ, ದಾರಿದ್ರ್ಯದ ದುಃಖವನ್ನು ಹೆಚ್ಚು ಸಹಿಸಲಾರೆನು. ಇಲ್ಲಿಯೇ ಇದ್ದುಬಿಡುವೆನು' ಎಂದು ಸಿದ್ಧಾಂತ ಮಾಡಿಕೊಂಡಳು. 'ಸ್ವಸ್ಥಾನವಾದ ದುರ್ಗಾಪುರಕ್ಕೂ ಈ ಸ್ಥಳಕ್ಕೂ ಪ್ರಭೇದವಿಲ್ಲವೆಂತಲೂ ಅಲ್ಲಿ ಕಳ್ಳರು ಕೊಂಡೊಯ್ದಂತೆ ಇಲ್ಲಿಯೂ ಕೊಂಡೊಯ್ದರೆ ಹೋಗಲೆಂದೂ' ಯೋಚಿಸಿಕೊಂಡಳು.

ಈ ಪ್ರಕಾರ ಮನಸ್ಸನ್ನು ಸ್ಥಿರಮಾಡಿಕೊಂಡು ಪ್ರಫುಲ್ಲೆಯು ಗೃಹಕಾರ್ಯದಲ್ಲಿ ಪ್ರವೃತ್ತೆಯಾದಳು. ಮನೆಯ ಬಾಗಿಲನ್ನು ಗುಡಿಸಿ ಸಾರಿಸಿ ಪರಿಷ್ಕಾರಮಾಡಿದಳು. ಗೋವುಗಳ ಸೇವೆಯನ್ನು ಮಾಡಿದಳು. ಬಳಿಕ ಅಡಿಗೆಯ ಪ್ರಯತ್ನ—ಏನನ್ನು ಅಡಿಗೆ ಮಾಡುವುದು? ಅಕ್ಕಿ ಬೇಳೆ ಮಡಕೆ ಕಟ್ಟಿಗೆ ಆವದೂ ಇಲ್ಲ. ಪ್ರಫುಲ್ಲೆಯು ಒಂದು ಮೊಹರಾವನ್ನು ತೆಗೆದುಕೊಂಡು ಸಂತೆಗೆ ಹೊರಟಳು. ಅದರಿಂದವಳ ಧೈರ್ಯವು ಎಷ್ಟರದೆಂಬುದು ಗೊತ್ತಾಗುವುದು.

ಆ ಅಡವಿಯಲ್ಲಿ ಸಂತೆಯೆಲ್ಲಿ? ಪ್ರಫುಲ್ಲೆಯು ವಿಚಾರಿಸಿಕೊಂಡು ಹೋಗುವೆನೆಂದು ಯೋಚಿಸಿಕೊಂಡಳು. ಕಾಲು ಹಾದಿಯ ಗುರುತೊಂದಿದ್ದಿತೆಂದು ಹೇಳಿದ್ದೆವಷ್ಟೆ. ಆ ಹಾದಿಯನ್ನು ಹಿಡಿದು ಹೊರಟಳು.

ಹೋಗುತ್ತ ದಾರಿಯಲ್ಲೊಬ್ಬ ಬ್ರಾಹ್ಮಣನನ್ನು ಕಂಡಳು. ಬ್ರಾಹ್ಮಣನ ಮೈಯಲ್ಲಿ ವಿಭೂತಿ, ಮುಖದಲ್ಲಿ ಗಂಧದಬೊಟ್ಟು, ತಲೆಯು ಕ್ಷೌರವಾಗಿದೆ, ನೋಡುವುದಕ್ಕೆ ಸುಪುರುಷನಾಗಿ ಗೌರವರ್ಣವುಳ್ಳವನಾಗಿದ್ದನು. ವಯಸ್ಸು ಹೆಚ್ಚಾಗಿರಲಿಲ್ಲ. ಪ್ರಫುಲ್ಲೆಯನ್ನು ಕಂಡು ವಿಸ್ಮಿತನಾಗಿ, 'ಅಮ್ಮ! ಎಲ್ಲಿಗೆ ಹೋಗುತ್ತಿ?' ಎಂದು ಕೇಳಿದನು.

ಪ್ರಫುಲ್ಲ—ನಾನು ಸಂತೆಗೆ ಹೋಗುತ್ತೇನೆ.

ಬ್ರಾಹ್ಮಣ—ಇತ್ತಕಡೆ ಸಂತೆಗೆ ದಾರಿಯುಂಟೆ?

ಪ್ರಫುಲ್ಲ—ಹಾಗಾದರಾವಕಡೆ ಹೋಗಬೇಕು?

ಬ್ರಾಹ್ಮಣ—ನೀನೆಲ್ಲಿಂದ ಬರುತ್ತಿ?

ಪ್ರಫುಲ್ಲ—ಈ ಕಾಡಿನಿಂದಲೇ.

ಬ್ರಾಹ್ಮಣ—ನೀನೀ ಕಾಡಿನಲ್ಲಿಯೇ ವಾಸವಾಗಿರುವುದು?

ಪ್ರಫುಲ್ಲ—ಅಹುದು.

ಬ್ರಾಹ್ಮಣ—ಹಾಗಾದರೆ, ಸಂತೆಗೆ ಮಾರ್ಗವು ಗೊತ್ತಿಲ್ಲವೆ?

ಪ್ರಫುಲ್ಲ—ನಾನು ನೂತನವಾಗಿ ಬಂದೆನು.

ಬ್ರಾಹ್ಮಣ—ಈ ಅರಣ್ಯಕ್ಕಾರೂ ಬೇಕೆಂದು ಬರುವುದಿಲ್ಲ. ನೀನು ಬಂದದು

ಹೇಗೆ ?

ಪ್ರಫುಲ್ಲ—ನನಗೆ ಸಂತೆಗೆ ದಾರಿಯನ್ನು ತೋರಿಕೊಡಿ.

ಬ್ರಾಹ್ಮಣ—ಸಂತೆಯು ಒಂದು ಮಧ್ಯಾಹ್ನದ ಹಾದಿಯಿದೆ. ನೀನೊಬ್ಬಳೇ ಹೋಗಲಾರೆ. ಕಳ್ಳರ ಹಾವಳಿ ಹೆಚ್ಚು. ನಿನ್ನ ಜತೆಯಲ್ಲಿ ಮತ್ತಾರಿದ್ದಾರೆ ?

ಪ್ರಫುಲ್ಲ—ಮತ್ತಾರೂ ಇಲ್ಲ.

ಬ್ರಾಹ್ಮಣನು ಬಹಳಹೊತ್ತು ಪ್ರಫುಲ್ಲೆಯ ಮುಖವನ್ನು ನೋಡಿ ಬಳಿಕ ಮನಸ್ಸಿನಲ್ಲಿ, 'ಈ ಬಾಲೆಯು ಸಕಲ ಲಕ್ಷಣಗಳುಳ್ಳ ಗುಣವತಿಯಾಗಿದ್ದಾಳೆ—ಮತ್ತೂ ನೋಡೋಣ' ವೆಂದಂದುಕೊಂಡು, ಪ್ರಕಾಶ್ಯವಾಗಿ, 'ನೀನೊಬ್ಬಳೇ ಸಂತೆಗೆ ಹೋಗಲಾರೆ, ಹೋದರೆ ವಿಪತ್ತಿನಲ್ಲಿ ಬೀಳುವೆ, ಇಲ್ಲಿಯೇ ನಮ್ಮದೊಂದು ಅಂಗಡಿಯಿದೆ, ಅಲ್ಲಿ ಅಕ್ಕಿ ಬೇಳೆ ಮುಂತಾದುವನ್ನು ಕೊಂಡುಕೊಳ್ಳಬಹುದು' ಎಂದನು.

ಪ್ರಫುಲ್ಲ—ಹಾಗಿದ್ದರೆ, ಅನುಕೂಲವಾಯಿತು. ಆದರೆ ನಿಮ್ಮನ್ನು ನೋಡಿದರೆ ಬ್ರಾಹ್ಮಣ ಪಂಡಿತರಂತೆ ಕಾಣುತ್ತದೆ.

ಬ್ರಾಹ್ಮಣ—ಬ್ರಾಹ್ಮಣ ಪಂಡಿತರಲ್ಲಿ ಅನೇಕ ವಿಧವುಂಟು—ಬಾ, ತಾಯಿ! ನನ್ನ ಸಂಗಡ ಬಾ.

ಹೀಗೆಂದು ಹೇಳಿ ಬ್ರಾಹ್ಮಣನು ಪ್ರಫುಲ್ಲೆಯನ್ನು ಕರೆದುಕೊಂಡು ಮತ್ತೂ ಹೆಚ್ಚು ನಿಬಿಡವಾದ ಅರಣ್ಯದಲ್ಲಿ ಪ್ರವೇಶಮಾಡಿದನು. ಪ್ರಫುಲ್ಲೆಗೆ ಸ್ವಲ್ಪ ಭಯವಾಯಿತು. ಆದರೆ ಅಡವಿಯಲ್ಲಿ ಭಯವಿಲ್ಲದಿರುವುದೆಲ್ಲಿ ? ಅಲ್ಲೊಂದು ಕುಟೀರವಿದ್ದಿತು. ಅದಕ್ಕೆ ತಾಳೇ ಓಲೇಗರಿ ಹೊದ್ದಿಸಿದ್ದಿತು, ತಡಿಕೆಯ ಬಾಗಿಲು, ಬ್ರಾಹ್ಮಣನು ತಡಿಕೆಯ ಬಾಗಿಲನ್ನು ತೆಗೆದನು. ನೋಡಲಾಗಿ ಅದು ಅಂಗಡಿಯಾಗಿರಲಿಲ್ಲ ಆದರೆ ಮಡಕೆ, ಕುಡಿಕೆ, ಅಕ್ಕಿ, ಬೇಳೆ, ಉಪ್ಪು, ಎಣ್ಣೆ ಮುಂತಾದ ಸಾಮಗ್ರಿಗಳೆಲ್ಲಾ ಯಥೇಷ್ಟವಾಗಿದ್ದುವು. ಬ್ರಾಹ್ಮಣನು, 'ನೀನು ಹೊತ್ತುಕೊಂಡು ಹೋಗುವಷ್ಟು ಬೇಕಾದುದನ್ನೆಲ್ಲಾ ತೆಗೆದುಕೊಂಡು ಹೋಗು ?' ಎಂದು ಹೇಳಿದನು.

ಪ್ರಫುಲ್ಲೆಯು ಹೊರುವಷ್ಟು ಸಾಮಾನುಗಳನ್ನು ತೆಗೆದುಕೊಂಡಳು. ಅನಂತರ ಅದಕ್ಕೇನು ಕೊಡಬೇಕೆಂದಳು.

ಬ್ರಾಹ್ಮಣ—ಒಂದು ಆಣೆ.

ಪ್ರಫುಲ್ಲ—ನನ್ನಲಿ ಚಿಲ್ಲರೆಯಿಲ್ಲ.

ಬ್ರಾಹ್ಮಣ—ರೂಪಾಯಿ ಇದ್ದರೆ ಕೊಡು ಮುರಿಸಿಕೊಡುತ್ತೇನೆ.

ಪ್ರಫುಲ್ಲ—ನನ್ನಲ್ಲಿ ರೂಪಾಯಿಯೂ ಇಲ್ಲ.

ಬ್ರಾಹ್ಮಣ—ಹಾಗಾದರೆ ಏನನ್ನು ತೆಗೆದುಕೊಂಡು ಸಂತೆಗೆ ಹೋಗುತ್ತಿದ್ದೆ.

ಪ್ರಫುಲ್ಲ—ನನ್ನಲ್ಲಿ ಒಂದು ಮೊಹರಾ ಇದೆ.

ಬ್ರಾಹ್ಮಣ—ಎಲ್ಲಿ ? ತೋರಿಸು, ನೋಡೋಣ.

ಪ್ರಫುಲ್ಲೆಯು ಮೊಹರಾವನ್ನು ತೋರಿದಳು. ಬ್ರಾಹ್ಮಣನು ನೋಡಿ ಅದನ್ನು ಹಿಂದಕ್ಕೆ ಕೊಟ್ಟು, 'ಮೊಹರಾಕ್ಕೆ ಕೊಡುವಷ್ಟು ಚಿಲ್ಲರೆ ನನ್ನಲ್ಲಿಲ್ಲ—ನಡೆ, ನಿನ್ನ ಸಂಗಡ ಬರುತ್ತೇನೆ; ಅಲ್ಲಿ ನನಗೆ ಪದಾರ್ಥಗಳ ಬೆಲೆಯನ್ನು ಕೊಡು' ಎಂದನು.

ಪ್ರಫುಲ್ಲ—ಮನೆಯಲ್ಲಿಯೂ ನನ್ನಲ್ಲಿ ಚಿಲ್ಲರೆಯಿಲ್ಲ.

ಬ್ರಾಹ್ಮಣ—ಇರುವುದೆಲ್ಲಾ ಮೊಹರಾನೆ! ಚಿಂತೆಯಿಲ್ಲ. ನಿನ್ನ ಸಂಗಡ ಬಂದು ನೀನಿರುವ ಮನೆಯನ್ನು ನೋಡಿಕೊಂಡು ಬರುತ್ತೇನೆ. ನಿನಗೆ ಚಿಲ್ಲರೆ ಸಿಕ್ಕಿದಾಗ ನನಗೆ ಕೊಡಬಹುದು. ನಾನೇ ಬಂದು ತೆಗೆದುಕೊಳ್ಳುತ್ತೇನೆ.

ಬ್ರಾಹ್ಮಣನು, "ಎಲ್ಲಾ ಮೊಹರಾವೆ!" ಎಂದು ಹೇಳಿದ ಮಾತು ಪ್ರಫುಲ್ಲೆಯ ಕಿವಿಗೆ ಶ್ರಾವ್ಯವಾಗಿರಲಿಲ್ಲ. ಅವಳು ಮನಸ್ಸಿನಲ್ಲಿ, ಚತುರನಾದೀ ಬ್ರಾಹ್ಮಣನು ನನ್ನಲ್ಲಿ ಅನೇಕ ಮೊಹರಾಗಳಿವೆಯೆಂದು ತಿಳಿದು ಅದರ ಆಶೆಯಿಂದ ನನ್ನ ಮನೆಯನ್ನು ನೋಡಿಕೊಂಡು ಬರಲು ಇಷ್ಟವುಳ್ಳವನಾಗಿದ್ದನೆಂದು ತಿಳಿದುಕೊಂಡು, ಅವಳು ತೆಗೆದುಕೊಂಡಿದ್ದ ಪದಾರ್ಥಗಳನ್ನು ಕೆಳಗಿಟ್ಟು, 'ನಾನು ಸಂತೆಗೆ ಹೋಗಬೇಕು, ಬಟ್ಟೆಗಿಟ್ಟೆ ತೆಗೆದುಕೊಳ್ಳಬೇಕು' ಎಂದು ಹೇಳಿದಳು. ಬ್ರಾಹ್ಮಣನು ನಕ್ಕನು. ನಕ್ಕು, 'ಬೇಡ ತಾಯಿ! ನಿನ್ನ ಮನೆಯನ್ನು ಗೊತ್ತುಮಾಡಿಕೊಂಡು ನಿನ್ನ ಮೊಹರಾಗಳನ್ನು ಕಳವು ಮಾಡುವೆನೆಂದು ತಿಳಿದೆಯೊ? ಹಾಗೆ ನೀನು ತಿಳಿದುಕೊಂಡಿದ್ದು ಸಂತೆಗೆ ಹೋದರೂ ನನಗೆ ಕೈಬಿಟ್ಟು ಹೋಗಲಾರೆ; ನಾನು ನಿನ್ನನ್ನು ಎಡಬಿಡದೆ ಸಂಗಡ ಇದ್ದರೆ ನೀನು ಹೇಗೆ ನನ್ನಿಂದ ತಪ್ಪಿಸಿಕೊಂಡು ಹೋಗುವೆ?' ಎಂದನು.

ಸರ್ವನಾಶ! ಪ್ರಫುಲ್ಲೆಯ ಮೈಯೆಲ್ಲಾ ನಡುಗಿತು.

ಬ್ರಾಹ್ಮಣ—ನಿನ್ನನ್ನು ನಾನು ವಂಚಿಸುವುದಿಲ್ಲ—ನನ್ನನ್ನು ನೀನು ಬ್ರಾಹ್ಮಣ ಪಂಡಿತನೆಂದಲಾದರೂ ತಿಳಿಯಬಹುದು, ಮತ್ತಾರೆಂದಾದರೂ ತಿಳಿಯಬಹುದು. ಆದರೆ ನಾನು ಕಳ್ಳರಿಗೆಲ್ಲಾ ಯಜಮಾನ—ನನ್ನ ಹೆಸರು 'ಭವಾನಿ ಠಾಕೂರ' ಎಂದು ಹೇಳುತ್ತಾರೆ.

ಪ್ರಫುಲ್ಲೆಯು ಪ್ರತಿಮೆಯಹಾಗೆ ಸ್ಪಂದಹೀನೆಯಾದಳು! ದುರ್ಗಾಪುರದಲ್ಲಿಯೂ ಭವಾನಿಪಾಠಕನು ವಿಖ್ಯಾತನಾದ ಕಳ್ಳನೆಂದು ಖ್ಯಾತಿಕೊಂಡಿದ್ದನು. ಅವನ ಹೆಸರನ್ನು ಹೇಳಿದರೆ ದೇಶವೆಲ್ಲಾ ಕಂಪಾಯಮಾನವಾಗುತಿದ್ದಿತು. ಪ್ರಫುಲ್ಲೆಗೆ ಮಾತು ಹೊರಡಲಿಲ್ಲ.

ಭವಾನಿಪಾಠಕ—ನಿನಗೆ ನಂಬುಗೆಯಾಗದಿದ್ದರೆ ಪ್ರತ್ಯಕ್ಷವಾಗಿ ತೋರುತ್ತೇನೆ. ಹೀಗೆಂದು ಹೇಳಿ ಗುಡಿಸಲಿನೊಳಗೆ ಹೋಗಿ ಒಂದು ಸಣ್ಣದಾದ ತಮಟೆಯನ್ನು ತಂದು ಅದನ್ನೆರಡು-ಮೂರು ತಡವೆ ಕೈಯಿಂದ ಹೊಡೆದನು. ಅದರ ಶಬ್ದವಾದ ಅರ್ಧಗಳಿಗೆಯೊಳಗೆ ಐವತ್ತು ಮಂದಿ ಕಾಲಾಂತಕ ಯಮದೂತರಂತೆ ಬಲಿಷ್ಠರಾದ ಯೌವನ ಪುರುಷರು ದೊಡ್ಡ ದೊಡ್ಡ ದೊಣ್ಣೆಗಳನ್ನು ಹಿಡಿದುಕೊಂಡು ಇದಿರಿಗೆ

ಬಂದು ನಿಂತು 'ಏನಪ್ಪಣೆ' ಎಂದರು.

ಭವಾನಿಪಾಠಕ—ಈ ಹುಡುಗಿಯನ್ನು ನೋಡಿ ಗುರ್ತಿಸಿಕೊಂಡಿರಿ. ಅವಳನ್ನು ನಾನು ತಾಯಿಯೆಂದು ಕರೆಯುತ್ತೇನೆ. ನೀವೆಲ್ಲರೂ ಅವಳನ್ನು ತಾಯಿಯಂತಲೇ ಕರೆಯಬೇಕಲ್ಲದೆ ತಾಯಿಯಂತೆ ಭಾವಿಸಬೇಕು. ನೀವು ಅವಳಿಗಾವ ತೊಂದರೆ ಯನ್ನೂ ಕೊಡಕೂಡದು, ಇತರರೂ ಕೊಡದ ಹಾಗೆ ನೋಡಿಕೊಳ್ಳಬೇಕು, ಈಗ ಹೊರಟುಹೋಗಿರಿ.

ಅಷ್ಟೊಂದು ಹೇಳುತ್ತಲೇ ದಳಪತ್ತಿಗೆರಗಿ ಬಂದಿದ್ದವರೆಲ್ಲರೂ ಒಂದು ನಿಮಿಷದಲ್ಲಿ ಅದೃಶ್ಯರಾಗಿ ಹೋಗಿಬಿಟ್ಟರು.

ಪ್ರಫುಲ್ಲೆಯು ಬಹಳ ವಿಸ್ಮಿತೆಯಾದಳು ಅವಳು ಸ್ಥಿರಬುದ್ಧಿಯುಳ್ಳವಳಾದ ಕಾರಣ, ಅವನಿಗೆ ಶರಣಾಗತೆಯಾಗುವುದರ ಹೊರತು ಬೇರೆ ಉಪಾಯವಿಲ್ಲವೆಂದು ತಿಳಿದುಕೊಂಡು, 'ನಡೆಯಿರಿ, ತಮಗೆನ್ನ ಮನೆಯನ್ನು ತೋರುತ್ತೇನೆ' ಎಂದಳು.

ಪ್ರಫುಲ್ಲೆಯು ತಾನು ತೆಗೆದುಕೊಂಡು ಕೆಳಗಿಟ್ಟಿದ್ದ ಪದಾರ್ಥಗಳನ್ನು ಪುನಃ ತೆಗೆದುಕೊಂಡು ಮುಂದೆ ಮುಂದೆ ಹೋದಳು. ಭವಾಣಿಪಾಠಕನು ಹಿಂದೆ ಹಿಂದೆ ಹೋದನು. ಇಬ್ಬರೂ ಬಿದ್ದುಹೋಗಿದ್ದಾ ದೊಡ್ಡಮಹಡಿಯ ಮನೆಗೆ ಬಂದರು. ಹೊರೆಯನ್ನಿಳಿಸಿ ಒಳಗಿಟ್ಟು ಒಂದು ಹುಲ್ಲು ಹರಕುಚಾಪೆಯನ್ನು ಹಾಸಿ ಭವಾನಿ ಠಾಕೂರನನ್ನು ಕುಳಿತಿರಬೇಕೆಂದು ಹೇಳಿದಳು. ಕೃಷ್ಣಗೋವಿಂದನದೊಂದು ಹುಲ್ಲು ಹರಕು ಚಾಪೆಯು ಮನೆಯಲ್ಲಿದ್ದಿತು.

---

## ಹನ್ನೆರಡನೆಯ ಪರಿಚ್ಛೇದ

ಭವಾನಿಪಾಠಕ—ಈ ಮುರುಕು ಅರಮನೆಯಲ್ಲಿ ನಿನಗೆ ಮೊಹರಾಗಳು ಸಿಕ್ಕವೋ?

ಪ್ರಫುಲ್ಲ—ಅಹುದು, ಮಹಾಸ್ವಾಮಿ!

ಭವಾನಿ—ಎಷ್ಟು ?

ಪ್ರಫುಲ್ಲ—ಬಹಳವಾಗಿ ಸಿಕ್ಕವು.

ಭವಾನಿ—ಸರಿಯಾಗಿ ಹೇಳು. ಇಲ್ಲದಿದ್ದರೆ ನನ್ನ ಜನರು ಬಂದು ಮನೆ ಯಲ್ಲಾ ಹುಡುಕುವರು.

ಪ್ರಫುಲ್ಲ—ಇಪ್ಪತ್ತು ಕೊಪ್ಪರಿಗೆ.

ಭವಾನಿ—ಅಷ್ಟೊಂದು ಹಣವನ್ನು ನೀನೇನು ಮಾಡುವೆ ?

ಪ್ರಫುಲ್ಲ—ನಮ್ಮ ದೇಶಕ್ಕೆ ಕೊಂಡೊಯ್ಯುವೆನು.

ಭವಾನಿ—ಭದ್ರವಾಗಿಟ್ಟು ಕಾಪಾಡಿಕೊಳ್ಳಬಲ್ಲೆಯಾ ?

ಪ್ರಫುಲ್ಲ—ನೀವು ಸಹಾಯಮಾಡಿದರೆ ಆಗಬಹುದು.

ಭವಾನಿ—ನನಗೀ ಅರಣ್ಯದಲ್ಲಿ ಪೂರ್ಣವಾದ ಅಧಿಕಾರವುಂಟು. ಅರಣ್ಯದ

ಹೊರಗಡೆ ನನಗೆ ಅಂತಹ ಅಧಿಕಾರವಿಲ್ಲ. ನೀನೀ ಅರಣ್ಯದ ಹೊರಗೆ ಧನವನ್ನೆಲ್ಲಾ ತೆಗೆದುಕೊಂಡು ಹೋದರೆ ನಾನದನ್ನು ಕಾಪಾಡಲು ಸಹಾಯವನ್ನು ಮಾಡಲಾರೆನು.

ಪ್ರಫುಲ್ಲ—ಹಾಗಾದರೆ ಈ ಅರಣ್ಯದಲ್ಲಿಯೇ ಧನವನ್ನೆಲ್ಲಾ ಇಟ್ಟುಕೊಂಡಿರುವೆನು. ತಾವು ಕಾಪಾಡುವಿರಾ ?

ಭವಾನಿ—ಕಾಪಾಡುವೆನು. ಆದರೆ ನೀನು ಅಷ್ಟೊಂದು ಧನರಾಶಿಯನ್ನಿಟ್ಟುಕೊಂಡು ಏನನ್ನು ಮಾಡುವೆ ?

ಪ್ರಫುಲ್ಲ—ಜನರು ಐಶ್ವರ್ಯವನ್ನಿಟ್ಟುಕೊಂಡು ಏನುಮಾಡುತ್ತಾರೆ ?

ಭವಾನಿ—ಅನುಭವಿಸುತ್ತಾರೆ.

ಪ್ರಫುಲ್ಲ—ನಾನೂ ಅನುಭವಿಸುವೆನು.

ಭವಾನಿಠಾಕೂರನು 'ಓಹೋ!' ಎಂದು ನಕ್ಕನು. ಪ್ರಫುಲ್ಲೆಯು ಅಪ್ರತಿಭೆಯಾದಳು. ಅದನ್ನು ನೋಡಿ ಭವಾನಿಠಾಕೂರನು, 'ತಾಯಿ! ಮುಗ್ಧರಾದ ಹೆಂಗಸರಂತೆ ಮಾತಾಡಿದುದರಿಂದ ನಕ್ಕೆನು. ನಿನಗಾರೂ ದಿಕ್ಕಿಲ್ಲವೆಂದು ಹೇಳಿದೆ. ನೀನಾರನ್ನಿಟ್ಟುಕೊಂಡು ಈ ಐಶ್ವರ್ಯವನ್ನು ಭೋಗಿಸುವೆ? ಒಬ್ಬಳೇ ಐಶ್ವರ್ಯವನ್ನು ಅನುಭವಿಸಲಾದೀತೆ ?' ಎಂದನು.

ಪ್ರಫುಲ್ಲೆಯು ಮುಖತಗ್ಗಿದವಳಾದಳು. ಭವಾನಿಠಾಕೂರನು ಮುಂದೆ ಹೇಳತೊಡಗಿದನು, "ಕೇಳು, ಜನರು ಐಶ್ವರ್ಯವನ್ನಿಟ್ಟುಕೊಂಡು ಕೆಲವರು ಅನುಭವಿಸುತ್ತಾರೆ. ಕೆಲವರುಪುಣ್ಯವನ್ನು ಸಂಪಾದಿಸುತ್ತಾರೆ. ಕೆಲವರು ನರಕಕ್ಕೆ ಮಾರ್ಗವನ್ನು ಸರಿಮಾಡಿಕೊಳ್ಳುತ್ತಾರೆ. ನೀನು ಅನುಭವಿಸಲಾರೆ, ಏಕೆಂದರೆ ನಿನಗಾರೂ ಇಲ್ಲ. ನೀನು ಎರಡು ಕೆಲಸವನ್ನು ಮಾಡಬಹುದು. ಪುಣ್ಯವನ್ನು ಸಂಪಾದಿಸಬಹುದು. ಪಾಪದ ರಾಶಿಯನ್ನಾದರೂ ಕೂಡಿಟ್ಟುಕೊಳ್ಳಬಹುದು ನೀನಾವುದನ್ನು ಮಾಡುವೆ?" ಎಂದು ಕೇಳಿದನು.

ಪ್ರಫುಲ್ಲೆಯು ಬಹಳ ಸಾಹಸವುಳ್ಳವಳು. ಅವಳು, 'ನಿಮ್ಮ ಮಾತುಗಳನ್ನು ಕೇಳಿದರೆ, ಕಳ್ಳರಿಗೆ ದಳಪತಿಯ ಬಾಯಿಂದ ಹೊರಡತಕ್ಕ ಮಾತುಗಳಾಗಿ ಕಾಣುವುದಿಲ್ಲ'ವೆಂದಳು.

ಬ್ರಾಹ್ಮಣ—ಇಲ್ಲ. ನಾನು ಕೇವಲ ಕಳ್ಳರಿಗೆ ದಳಪತಿಯಲ್ಲ. ಇನ್ನು ಮುಂದೆ ನಿನ್ನಲ್ಲಿ ನಾನು ಕಳ್ಳರ ಸರದಾರನಲ್ಲ. ನಾನು ನಿನ್ನನ್ನು ತಾಯಿಯೆಂದು ಕರೆದಿದ್ದೇನೆ. ಅದುಕಾರಣ ನಿನ್ನಲ್ಲಿ ಹೇಳುವುದೆಲ್ಲ ಒಳ್ಳೆಯದನ್ನೇ ಹೇಳುವೆನು. ಧನವನ್ನು ಅನುಭೋಗಿಸುವುದು ನಿನ್ನಿಂದಾಗದು. ಏಕೆಂದರೆ, ನಿನಗಾರೂ ಇಲ್ಲ. ಹಾಗಾದಬಳಿಕ ಈ ಧನದಿಂದ ಪುಣ್ಯವನ್ನಾದರೂ ಸಂಪಾದಿಸಬಹುದು, ಅಥವಾ ಪಾಪವನ್ನಾದರೂ ಸಂಪಾದಿಸಬಹುದು. ನಿನಗಾವ ಮಾರ್ಗದಲ್ಲಿ ಹೋಗುವುದಕ್ಕೆ ಇಷ್ಟ !

ಪ್ರಫುಲ್ಲ—ಪಾಪಮಾರ್ಗವನ್ನೇ ಅನುಸರಿಸುವೆನೆಂದು ಹೇಳಿದರೆ ?

ಬ್ರಾಹ್ಮಣ—ಹಾಗಾದರೆ, ಜನರನ್ನು ಕೊಟ್ಟು ನಿನ್ನನ್ನು ನಿನ್ನ ಹಣದೊಂದಿಗೆ ಈ ಅರಣ್ಯದಿಂದ ಹೊರಕ್ಕೆ ಕಳುಹುವೆನು. ಬೇಕಾದರೆ ಈ ಅರಣ್ಯದಲ್ಲಿಯೇ ನನ್ನ ಅನುಚರರು ಹಣದಾಶೆಗೆ ನಿನ್ನೊಂದಿಗೆ ಭೋಗಪಡಲಿಷ್ಟವುಳ್ಳವರು ಅನೇಕರಿದ್ದಾರೆ. ನಿನಗೆ ಅಂತಹ ಆಶೆಯಿದ್ದರೆ ಇಂದೀ ನಿಮಿಷದಲ್ಲಿ ವನದಿಂದ ನಿನ್ನನ್ನು ಕಳುಹುವೆನು. ಈ ಅರಣ್ಯವು ನನ್ನದಾಗಿದೆ.

ಪ್ರಫುಲ್ಲ—ಜನರನ್ನು ಕೊಟ್ಟು ನನ್ನೊಂದಿಗೆ ಹಣವನ್ನೂ ಕೊಟ್ಟು ನನ್ನನ್ನು ಕಳುಹಿದರೆ ನಷ್ಟವೇನು ?

ಭವಾನಿ—ಹಣವನ್ನು ಕಾಪಾಡಿಕೊಳ್ಳಬಲ್ಲೆಯಾ ? ನಿನಗೆ ರೂಪಯೌವನಗಳಿವೆ. ಒಂದುವೇಳೆ ಕಳ್ಳರ ಕೈಗೆ ಸಿಕ್ಕದೆ ಉದ್ಧಾರವಾದರೂ ಆಗಬಹುದು. ಆದರೆ ರೂಪಯೌವನಗಳಿಂದುದ್ಧಾರವಾಗಲಾರೆ. ಧನವು ಮುಗಿದುಹೋದರೂ ಪಾಪವನ್ನಾಚರಿಸುವ ಆಶೆಯು ಮುಗಿಯುವುದಿಲ್ಲ. ಹಣವನ್ನು ವೆಚ್ಚಮಾಡುವುದಕ್ಕೆ ಪ್ರಾರಂಭಿಸಿದರೆ ಎಷ್ಟೊಂದು ಹಣವಿದ್ದರೂ ಸಾಲದು. ತಾಯಿ ! ಅದು ಮುಗಿದು ಹೋದ ಬಳಿಕ ಮತ್ತೇನು ?

ಪ್ರಫುಲ್ಲ—ಮುಗಿದುಹೋದ ಬಳಿಕ ಮತ್ತೇನು ?

ಭವಾನಿ—ನರಕಕ್ಕೆ ಮಾರ್ಗವು ನಿರಾಳ. ಆಶೆಯು ಉಳಿದುಕೊಳ್ಳುವುದು. ಆಶೆಯು ಪರಿತೃಪ್ತಿಯಾಗುವುದಕ್ಕೆ ಉಪಾಯವಿಡುವುದಿಲ್ಲ. ಅದೇ ನರಕಕ್ಕೆ ಹೋಗುವ ಮಾರ್ಗ. ಪುಣ್ಯವನ್ನು ಸಂಪಾದಿಸುವೆಯಾ ?

ಪ್ರಫುಲ್ಲ—ಸ್ವಾಮಿ! ನಾನು ಗೃಹಸ್ಥರ ಮನೆಯ ಹೆಂಗಸು. ಪಾಪವೆಂಬುದನ್ನಾವಾಗಲೂ ಅರಿಯೆನು. ನಾನೇಕೆ ಪಾಪದ ಮಾರ್ಗದಲ್ಲಿ ಬೀಳಲಿ ? ನಾನೊಬ್ಬ ದರಿದ್ರ ಹೆಂಗಸು. ಅನ್ನವಸ್ತ್ರವಾದರೆ ಅದೆನಗೆ ಯಥೇಷ್ಟ. ನನಗೆ ಧನವೂ ಬೇಡ ಐಶ್ವರ್ಯವೂ ಬೇಡ ; ಕಾಲಕ್ಷೇಪವಾದರೆ ಸಾಕು. ಹಣವನ್ನೆಲ್ಲಾ ನೀವೇ ತೆಗೆದುಕೊಳ್ಳಿರಿ. ಪಾಪಮಾಡದಿರುವುದಕ್ಕೆನಗೊಂದು ಹಿಡಿ ಅನ್ನವಾದರೆ ಸಾಕು. ಹಾಗಾವಪಾದರೂ ಒಂದೇರ್ಪಾಡನ್ನು ಮಾಡಿರಿ.

ಭವಾನಿಠಾಕೂರನು ಮನಸ್ಸಿನಲ್ಲಿ ಪ್ರಫುಲ್ಲೆಯನ್ನು ಕುರಿತು, ಈ ಪ್ರಪಂಚದಲ್ಲಿ ಧನ್ಯೆಯಾದ ಪುಣ್ಯಾತ್ಮೆ, ಎಂದಂದುಕೊಂಡು ಪ್ರಕಾಶ್ಯವಾಗಿ, 'ಧನವೆಲ್ಲಾ ನಿನ್ನದು, ನಾನದನ್ನು ತೆಗೆದುಕೊಳ್ಳುವುದಿಲ್ಲ' ವೆಂದನು.

ಪ್ರಫುಲ್ಲೆಯು ಆಶ್ಚರ್ಯಗೊಂಡಳು. ಭವಾನಿಠಾಕೂರನು ಅವಳ ಭಾವವನ್ನು ತಿಳಿದು, 'ನೀನು ನಿನ್ನ ಮನಸ್ಸಿನಲ್ಲಿ ನನ್ನನ್ನು ಕಳವು ದರೋಡೆ ಮಾಡಿ ಪರರ ಸ್ವತ್ತನ್ನು ಕಿತ್ತು ತಿನ್ನುವವನು ಹೀಗೊಂದು ವೇಷವನ್ನು ತಾಳಿರುವನೆಂದು ತಿಳಿದುಕೊಂಡಿರಬಹುದಲ್ಲವೆ ? ಈಗಾ ಮಾತುಗಳನ್ನೆಲ್ಲಾ ನಿನಗೆ ಹೇಳಿ ಪ್ರಯೋಜನವಿಲ್ಲ. ನೀನು ಪಾಪಾಚರಣೆಯಲ್ಲಿ ಪ್ರವೃತ್ತೆಯಾಗುವಳಾದರೆ ನಿನ್ನ ಧನವ

ನ್ನೆಲ್ಲಾ ಲೂಟಮಾಡಿದರೂ ಮಾಡಬಲ್ಲೆನು. ನಾನೀಗ ನಿನ್ನ ಹಣವನ್ನು ಮುಟ್ಟಲಾರೆನು. ಪುನಃ ನಿನ್ನನ್ನು ಕೇಳುವೆನೇನೆಂದರೆ; ಈ ಹಣವನ್ನಿಟ್ಟು ಕೊಂಡು ಏನನ್ನು ಮಾಡುವೆ? ಹೇಳು' ಎಂದನು.

ಪ್ರಫುಲ್ಲ—ನೀವು ಜ್ಞಾನಿಗಳಾಗಿ ತೋರುತ್ತದೆ. ಹಣವನ್ನಿಟ್ಟುಕೊಂಡು ಏನನ್ನು ಮಾಡಲಿ? ನೀವೆ ಹೇಳಿ.

ಭವಾನಿ—ನಿನಗದನ್ನು ತಿಳಿಯಹೇಳಬೇಕಾದರೆ ಆರೇಳು ವರ್ಷಕಾಲ ಬೇಕು. ನೀನು ತಿಳಿದುಕೊಳ್ಳುವುದಾದರೆ ಅದನ್ನೆಲ್ಲಾ ಹೇಳಿಕೊಡುವೆನು. ಆರೇಳು ವರ್ಷ ಗಳವರೆಗೂ ಆ ಹಣವನ್ನು ಮುಟ್ಟಬೇಡ. ನಿನ್ನ ಅನ್ನ ಬಟ್ಟೆಗೆ ಕಡಿಮೆಯಾಗಲಾ ರದು. ನಿನ್ನ ಊಟ ಉಪಚಾರಗಳಿಗೆ ಬೇಕಾದವುಗಳನ್ನು ನಾನು ಕಳುಹುತಿರು ವೆನು. ಆದರೆ ನಾನು ಹೇಳುವುದಕ್ಕೆ ವಿರೋಧವಾಗಿ ನೀನು ನಡಿಯಕೂಡದು. ಹಾಗೆ ಮಾಡುವುದಕ್ಕೊಪ್ಪುವಿಯೊ?

ಪ್ರಫುಲ್ಲ—ನಾನೆಲ್ಲಿ ವಾಸವಾಗಿರಬೇಕು?

ಭವಾನಿ—ಈ ಮನೆಯಲ್ಲಿಯೇ; ಬಿದ್ದುಹೋಗಿರುವುದನ್ನೆಲ್ಲಾ ಸರಿಮಾಡಿ ಕೊಡುವೆನು.

ಪ್ರಫುಲ್ಲ—ಇಲ್ಲೊಬ್ಬಳೇ ಇರಲೆ?

ಭವಾನಿ—ಬೇಡ. ಇಬ್ಬರು ಹೆಂಗಸರನ್ನು ಕಳುಹುವೆನು. ಅವರು ನಿನ್ನ ಜತೆಯಲ್ಲಿರುವರು. ಭಯಪಡಬೇಡ. ಈ ಅರಣ್ಯಕ್ಕೆಲ್ಲಾ ನಾನೊಬ್ಬ ಯಜಮಾ ನನು. ನಾನಿರುವಾಗ ನಿನಗಾವ ತೊಂದರೆಯೂ ಉಂಟಾಗದು.

ಪ್ರಫುಲ್ಲ—ನೀವು ನನಗೆ ಹೇಗೆ ಹೇಳಿಕೊಡುವಿರಿ?

ಭವಾನಿ—ನಿನಗೆ ಓದುಬರಹ ಬರುವುದೊ?

ಪ್ರಫುಲ್ಲ—ಇಲ್ಲ.

ಭವಾನಿ—ಮೊದಲು ಓದುವುದಕ್ಕೂ ಬರೆಯುವುದಕ್ಕೂ ಕಲಿಸುವೆನು.

ಪ್ರಫುಲ್ಲೆಯು ಒಪ್ಪಿಕೊಂಡಳು. ಅರಣ್ಯದ ಮಧ್ಯದಲ್ಲೊಬ್ಬನು ಸಹಾ ಯಕ್ಕೆ ಸಿಕ್ಕಿದುದಕ್ಕೆ ಸಲವಾಗಿ ಆನಂದಿತೆಯಾದಳು.

ಭವಾನಿಠಾಕೂರನು ಅಲ್ಲಿಂದೆದ್ದು ಹೊರಗೆಬಂದು ನೋಡಲಾಗಿ ಅವನಿಗೋ ಸ್ಕರ ಒಬ್ಬ ಮನುಷ್ಯನು ಕಾದಿದ್ದನು. ಅವನು ಬಹಳ ಬಲಿಷ್ಠನಾಗಿಯೂ ಬೃಹದಾಕಾರವುಳ್ಳವನಾಗಿಯೂ ಇದ್ದನು. ಅವನನ್ನು ನೋಡಿ ಭವಾನಿಠಾಕೂ ರನು, 'ರಂಗರಾಜ! ಇಲ್ಲೇಕೆ ಬಂದೆ?' ಎಂದು ಕೇಳಿದನು.

ರಂಗರಾಜ—ತಮ್ಮನ್ನು ಹುಡುಕಿಕೊಂಡು ಬಂದೆನು. ತಾವು ಇಲ್ಲೇಕೆ ಬರೋಣವಾಯಿತು?

ಭವಾನಿ—ಇಂದಿನದವರೆಗೂ ನಾನು ಹುಡುಕುತ್ತಿದ್ದುದು ಇಂದೆನಗೆ ಸಿಕ್ಕಿತು.

ರಂಗರಾಜ—ರಾಜನೆ?

ಭವಾನಿ—ರಾಣಿ.

ರಂಗರಾಜ—ರಾಜನನ್ನಾಗಲಿ ರಾಣಿಯನ್ನಾಗಲಿ ಹುಡುಕಬೇಕಾಗಿದ್ದ ಆವಶ್ಯಕವಿರಲಿಲ್ಲ. ಇಂಗ್ಲೀಷರು ರಾಜರಾಗುವರು. ಕಲಿಕತ್ತೆಯಲ್ಲಿ ಹಸ್ಟಿನ್* ಎಂಬ ಇಂಗ್ಲೀಷರವನೊಬ್ಬನು ರಾಜ್ಯದ ಪ್ರಣಾಳಿಯನ್ನು ಚೆನ್ನಾಗಿ ಏರ್ಪಾಡು ಮಾಡುವುದರಲ್ಲಿದ್ದಾನೆ.

ಭವಾನಿ—ನಾನು ಅಂತಹ ರಾಜನನ್ನು ಹುಡುಕುವುದಿಲ್ಲ. ನಾನು ಹುಡುಕುತ್ತಿದ್ದುದನ್ನು ನೀನೇ ಬಲ್ಲೆ.

ರಂಗರಾಜ—ಸಿಕ್ಕಂತಾಯಿತೆ?

ಭವಾನಿ—ಸಿದ್ಧವಾದುದು ಸಿಗಲಿಲ್ಲ. ಆರೇಳು ವರ್ಷ ಶ್ರಮಿಸಿ ತಿದ್ದಬೇಕು. ಜಗದೀಶ್ವರನು ಕಬ್ಬಿಣವನ್ನು ಮಾಡಿರುವನು. ಮನುಷ್ಯನದರಿಂದ ಆಯುಧ ಮುಂತಾದುದನ್ನು ಮಾಡಿಕೊಳ್ಳಬೇಕು. ಈಗ ಒಳ್ಳೇ ಉಕ್ಕಿನ ಗಟ್ಟಿಯು ಸಿಕ್ಕಿದೆ. ಆರೇಳು ವರ್ಷಗಳು ಶ್ರಮಿಸಿ ತಿದ್ದಿ ಹರತ ಮಾಡಬೇಕು. ಈ ಮನೆಯೊಳಗೆ ನನ್ನ ಹೊರ್ತು ಮತ್ತಾರೂ ಗಂಡಸರು ಪ್ರವೇಶಿಸದಂತೆ ನೋಡಿಕೊ. ಹೆಂಗಸು ಯುವತಿ ಹಾಗೂ ಸುಂದರಿ.

ರಂಗರಾಜ—ಅಪ್ಪಣೆಯು ಪ್ರಕಾರ. ಇಂದು ಇಜಾರದಾರನ ಜನರು ರಂಜನಪುರವನ್ನು ಲೂಟಿಮಾಡಿದರು. ಅದಕ್ಕೆ ಸಲವಾಗಿ ತಮ್ಮನ್ನು ಹುಡುಕಿಕೊಂಡು ಬಂದೆನು.

ಭವಾನಿ—ಹಾಗಾದರೆ ನಡಿ; ನಾವು ಇಜಾರದಾರನ ಜನರನ್ನು ಲೂಟಿಮಾಡಿ ಗ್ರಾಮಸ್ಥರ ಹಣವನ್ನು ಗ್ರಾಮಸ್ಥರಿಗೊಪ್ಪಿಸಿ ಬರೋಣ; ಗ್ರಾಮದವರಿಗೆ ಅನುಕೂಲ ಮಾಡೋಣ; ಅದಾಗುವುದೊ?

ರಂಗರಾಜ—ಹಾಗಾಗುವುದಕ್ಕೇನೂ ಅನುಮಾನವಿಲ್ಲ.

## ಹದಿಮೂರನೆಯ ಪರಿಚ್ಛೇದ

ಭವಾನಿಠಾಕೂರನು ಹೇಳಿದ್ದ ಪ್ರಕಾರ ಹೆಂಗಸರಿಬ್ಬರನ್ನು ಕಳುಹಿದನು. ಒಬ್ಬಳು ಸಂತೆ ಮುಂತಾದ ಕಡೆ ಹೋಗುವವಳು. ಮತ್ತೊಬ್ಬಳು ಪ್ರಫುಲ್ಲೆಯ ಸಂಗಡ ಇರುವವಳು. ಇಬ್ಬರೂ ಬೇರೆ ಬೇರೆ ಸ್ವಭಾವದವರು. ಸಂತೆ ಮುಂತಾದ ಕಡೆ ಹೋಗುವವಳ ಹೆಸರು ಸಗಣಕ್ಕ. ಅವಳಿಗೆ ಎಪ್ಪತ್ತಮೂರುವರ್ಷ. ಕಪ್ಪಿನೊಳಗೆ ಕಪ್ಪಾದ ಮೈ, ಕಿವಿಯು ಶುದ್ಧವಾಗಿ ಕೇಳದಿದ್ದರೂ ಅಷ್ಟೊಂದು ಕೇಡಲ್ಲ; ಕೈಸನ್ನೆ ಮೇಲಾದರೂ ಕೆಲಸವನ್ನು ನಡೆಯಿಸಬಹುದು. ಸಗಣಕ್ಕನಿಗಾದರೊ, ಹಾಗಿರಲಿಲ್ಲ. ಒಂದೊಂದು ಮಾತು ಕೇಳುವುದು

*ವಾರನ್ ಹೇಸ್ಟಿಂಗ್ಸ್ (Warren Hastings)

ಒಂದೊಂದು ಮಾತು ಕೇಳುತ್ತಿರಲಿಲ್ಲ. ಹಾಗಾದರೆ ಬಹಳ ಕಷ್ಟ.

ಮತ್ತೊಬ್ಬಳು ಪ್ರಫುಲ್ಲೆಯ ಜತೆಯಲ್ಲಿರತಕ್ಕವಳು ಬೇರೆ ಪ್ರಕೃತಿಯ ಹೆಂಗಸು. ವಯಸ್ಸಿನಲ್ಲಿ ಪ್ರಫುಲ್ಲೆಗಿಂತ ಐದುವರ್ಷ ಹೆಚ್ಚಿರಬಹುದು. ಉಜ್ವಲವಾದ ಶ್ಯಾಮಲ ವರ್ಣದವಳು. ವರ್ಷಾಕಾಲದ ಎಳೆಗರಿಕೆಯ ರಂಗು. ರೂಪವು ತುಳುಕುತಿದ್ದಿತು.

ಇಬ್ಬರೂ ಒಂದೇ ಸ್ಥಳಕ್ಕೆ ಬಂದು ಸೇರಿದರು. ಪೂರ್ಣಿಮೆಯೂ ಅಮಾವಾಸ್ಯೆಯೂ ಪರಸ್ಪರ ಕೈಹಿಡಿದುಕೊಂಡು ಬಂದಂತಾಯಿತು. ಸಗಣಕ್ಕನು ಬಂದು ಪ್ರಫುಲ್ಲೆಗೆ ನಮಸ್ಕಾರವನ್ನು ಮಾಡಿದಳು. ಮತ್ತೊಬ್ಬಳು, 'ಅವಳೊಬ ಕಾಳಮ್ಮ, ಎಲ್ಲರೂ ಅವಳನ್ನು ಸಗಣಕ್ಕ ಎಂದು ಕರೆಯುತ್ತಾರೆ' ಎಂದಳು.

ಪ್ರಫುಲ್ಲ—ಸಗಣಕ್ಕ! ನಿನಗೆ ಎಷ್ಟು ಮಂದಿ ಮಕ್ಕಳಿದ್ದಾರೆ?

ಸಗಣಕ್ಕ—ಎಲ್ಲಿದ್ದೇನೆ? ಮನೆಯಬಿಟ್ಟು ಮತ್ತೆಲ್ಲಿದ್ದ? ಮನೆಯಲ್ಲಿದ್ದೆನು.

ಪ್ರಫುಲ್ಲ—ನೀನಾವ ಜಾತಿಯವಳು?

ಸ—ಯಾತಾಯಾತ ಮಾಡುವುದನ್ನು ಚೆನ್ನಾಗಿ ಬಲ್ಲೆನು. ಎಲ್ಲಿಗೆ ಹೋಗೆಂದರೆ ಅಲ್ಲಿಗೆ ಹೋಗಬಲ್ಲೆನು.

ಪ್ರಫುಲ್ಲ—ಅದಲ್ಲ, ನೀವಾವ ಜನರು?

ಸ—ನಿಮಗೆ ಬೇರೆ ಜನರಿಂದ ಪ್ರಯೋಜನವೇನವೇನು? ತಾಯಿ! ನೀನಾವ ಕೆಲಸವನ್ನು ಹೇಳಿದರೂ ಅದನ್ನೆಲ್ಲಾ ಮಾಡಿಕೊಡುವೆನು, ಅಂದರೆ ಒಂದೆರಡು ಕೆಲಸವನ್ನು ಮಾಡುವುದಕ್ಕೆ ಕೈಲಿ ಸಾಗದು.

ಪ್ರಫುಲ್ಲ—ಕೈಲಿ ಸಾಗದ ಕೆಲಸವಾವದು? ಸಗಣಕ್ಕನಿಗೆ ಮುಚ್ಚಿಹೋಗಿದ್ದ ಕಿವಿಯು ಬಿಚ್ಚಿತು. ಆಗವಳು, 'ಆಗದ ಕೆಲಸವಾವದೆ? ನೀರನ್ನು ಹೊರಲಾರೆನು, ನನ್ನ ಸೊಂಟದಲ್ಲಿ ಬಲವು ಕಡಿಮೆಯಾಯಿತು. ಬಟ್ಟೆಗಿಟ್ಟೆಯನ್ನು ನೀನೇ ಒಗೆದುಕೊಳ್ಳಬೇಕಮ್ಮ.

ಪ್ರಫುಲ್ಲ—ನೀನು ಮಾಡುವ ಕೆಲಸಗಳಾವುವು?

ಸ—ಪಾತ್ರಗೀತ್ರೆ ನೀನೇ ಬೆಳಗಿಕೊಳ್ಳಬೇಕು.

ಪ್ರಫುಲ್ಲ—ಅದು ಆಗದ ಕೆಲಸವಾಯಿತು. ಹಾಗಾದರೆ ನಿನ್ನಿಂದಾಗುವ ಕೆಲಸವೇನು?

ಸ—ಮತ್ತೇನೂ ಇಲ್ಲ. ಮನೆಯನ್ನು ಗುಡಿಸಿ ಸಾರಿಸುವುದಾಗುವುದಿಲ್ಲ.

ಪ್ರಫುಲ್ಲ—ನೀನು ಮಾಡಬಲ್ಲಾದ ಕೆಲಸವಾವದು?

ಸ—ನೀನು ಹೇಳುವ ಮಿಕ್ಕ ಕೆಲಸವನ್ನೆಲ್ಲಾ ಮಾಡುತ್ತೇನೆ. ಊಟ ಮಾಡಿದುದನ್ನು ಜೀರ್ಣಿಸಿಕೊಳ್ಳುತ್ತೇನೆ. ಊಟಮಾಡಿದ ಎಲೆಯನ್ನು ನಾನೇ ತೆಗೆದುಹಾಕುವೆನು, ಬೇರೆ ಮುಖ್ಯ ಮುಖ್ಯವಾದ ಕೆಲಸವನ್ನೆಲ್ಲಾ ಮಾಡಬಲ್ಲೆನು. ಸಂತೆಗೆ ಹೋಗಿ ಬರುವೆನು.

ಪ್ರಫುಲ್ಲ—ಸಂತೆಯಲ್ಲಿ ಮಾಡುವ ವ್ಯಾಪಾರದ ಲೆಕ್ಕವನ್ನು ಹೇಳಬಲ್ಲೆಯಾ!

ಸ—ಅಮ್ಮ! ನಾನು ಬಹಳ ಮುದುಕಿ, ಅರುಳುಮರುಳು, ಸ ಗಷ್ಟೊಂದು ಗೊತ್ತಾಗಬಲ್ಲದೆ? ದುಡ್ಡೂ ಕಾಸೂ ಕೊಟ್ಟರೆ ಅದನ್ನೆಲ್ಲಾ ವೆ ಮಾಡಿ ಬರುವೆನು. ನೀನದನ್ನು ನೋಡಿದರೆ ಅಷ್ಟೊಂದು ವೆಚ್ಚವಾಗಿರದೆಂ ತಿಳಿಯುವೆ.

ಪ್ರಫುಲ್ಲ—ಅಜ್ಜಿ! ನಿನ್ನಂತಹವಳು ಸಿಗುವುದು ಕಷ್ಟ.

ಸ—ಅಮ್ಮ! ಅದೆಲ್ಲಾ ನಿಮ್ಮ ಅಂತಃಕರಣದಿಂದ ಹೇಳುವ ಮಾತು.

ಪ್ರಫುಲ್ಲೆಯು ಮತ್ತೊಬ್ಬಳನ್ನು ಕುರಿತು, 'ನಿನ್ನ ಹೆಸರೇನೆ? ತಾಯಿ' ಎಂದಳು.

ಹೊಸದಾಗಿ ಬಂದ ಸುಂದರಿ—ಅಮ್ಮ! ಅದೆನಗೆ ಗೊತ್ತಿಲ್ಲ.

ಪ್ರಫುಲ್ಲೆಯು ನಕ್ಕು, 'ಅದೇನೆ? ತಾಯಿತಂದೆಗಳು ಹೆಸರಿಟ್ಟಿಲ್ಲವೆ!' ಎಂದಳು.

ಸುಂದರಿ—ಇಟ್ಟಿರಬಹುದು. ಆದರೆ ನನಗದು ಚೆನ್ನಾಗಿ ಗೊತ್ತಿಲ್ಲ.

ಪ್ರಫುಲ್ಲ—ಅದು ಹೇಗೆ? ತಾಯಿ!

ಸುಂದರಿ—ಬುದ್ಧಿ ಬರುವುದಕ್ಕೆ ಮುಂಚೆ ನಾನು ತಾಯಿತಂದೆಗಳ ಬಿಟ್ಟಗಲಿದೆನು. ಚಿಕ್ಕವಳಾಗಿದ್ದಾಗಲೇ ನಾನು ಕಳವಾಗಿ ಹೋದೆನು.

ಪ್ರಫುಲ್ಲ—ಆಗಲಿ. ಕಳವುಮಾಡಿ ಕೊಂಡೊಯ್ದವರಾದರೂ ಒಂದು ಹೆ ಸರನ್ನು ಹಿಡಿದು ಕರೆಯಬೇಕಲ್ಲವೆ?

ಸುಂದರಿ—ನಾನಾವಿಧವಾದ ಹೆಸರು.

ಪ್ರಫುಲ್ಲ—ಅವಾವ ಹೆಸರು?

ಸುಂದರಿ—ಸೊಟ್ಟಮೋರೆ, ಕೆಟ್ಟಮೋರೆ, ಜಪ್ಪೆ, ನಿರ್ಭಾಗ್ಯೆ, ಸುಟ್ಟಮೋ ಇಷ್ಟೊಂದು ಹೆಸರು.

ಸಗಣಕ್ಕನಿಗೆ ಅದುವರೆಗೂ ಕಿವಿಯು ಮುಚ್ಚಿಹೋಗಿದ್ದುದು, ಸರ್ವ ಕೇಳುತ್ತಿದ್ದಾ ಗುಣವಾಚಕ ಶಬ್ದಗಳನ್ನು ಕೇಳುತ್ತಲೇ ಶ್ರುತಿಯು ಜಾಗರಿತವಾ 'ಆವಾರೆ? ನನ್ನನ್ನು ಸೊಟ್ಟಮೋರೆಯನ್ನುವಳೇ ಸೊಟ್ಟಮೋರೆ, ನನ್ನ ಕೆಟ್ಟಮೋರೆಯನ್ನುವಳೇ ಸುಟ್ಟಮೋರೆ, ನನ್ನನ್ನಾರು ಬಂಜೆಯನ್ನುವಳೋ ಅವಳೇ ಬಂಜರಂಡೆ' ಎಂದಳು.

ಸುಂದರಿ—(ನಕ್ಕು) ಬಂಜೆಯೆಂದು ಹೇಳಿಲ್ಲವೆ, ತಾಯಿ!

ಸಗಣಕ್ಕ—ಬಂಜೆಯೆಂದು ಹೇಳಿದ್ದರೂ ಹೇಳಿರಬಹುದು, ಹೇಳದಿದ್ದರೂ ಹೇಳುತ್ತಿ. ಹೇಳದೇಕೆ?

ಪ್ರಫುಲ್ಲೆಯು ನಕ್ಕು, 'ನಿನ್ನನ್ನು ಕುರಿತು ಹೇಳಲಿಲ್ಲ, ತಾಯಿ! ಅವಳೆನ್ನನ್ನು ಹಾಗೆಂದು ಹೇಳಿದಳು' ಎಂದಳು.

ಆಗ ಸಗಣಕ್ಕನು ನಿಟ್ಟುಸುರನ್ನು ಬಿಟ್ಟು, 'ನನ್ನ ಹಣೆಬರಹ! ನನಗಲ್ಲವೆ? ಹೇಳಲಿ, ನೀನು ಕೋಪಮಾಡಬೇಡ, ತಾಯಿ! ಆ ಬ್ರಾಹ್ಮಣಿಯ ಬಾಯಿ ಬಹಳ ಕೆಟ್ಟಬಾಯಿ. ತಾಯಿ! ನೀನು ಕೋಪಿಸಿಕೊಳ್ಳಬೇಡಮ್ಮ!' ಎಂದಳು. ಸಗಣಕ್ಕನ ಬಾಯಲ್ಲಿ ಈ ಪ್ರಕಾರ ಸ್ವಂತಪಕ್ಷವಾಗಿ ವೀರರಸವೂ ಪಕ್ಷಾಂತರದಲ್ಲಿ ಶಾಂತಿ ರಸವೂ ಪರಿಪೂರ್ಣವಾದ ವಾಕ್ಯಪರಂಪರೆಯನ್ನು ಕೇಳಿ ಪ್ರಫುಲ್ಲೆಯು ಪ್ರೀತಳಾಗಿ ಮತ್ತೊಬ್ಬಳನ್ನು ಕುರಿತು, 'ಬ್ರಾಹ್ಮಣಿಯೆ? ನನಗೆ ಹೇಳಲಿಲ್ಲವೇಕೆ? ನಾನು ನಿನಗೆ ನಮಸ್ಕಾರವನ್ನು ಮಾಡಲಿಲ್ಲವಲ್ಲ?' ಎಂದು ಹೇಳಿ, ಅವಳಿಗೆ ಪ್ರಣಾಮ ವನ್ನು ಮಾಡಿದಳು.

ಸುಂದರಿಯು ಆಶೀರ್ವದಿಸಿ, 'ಅಹುದು, ನಾನು ಬ್ರಾಹ್ಮಣಿಯೆಂದು ಕೇಳಿ ದ್ದೇನೆ, ಆದರೆ ನಾನು ಬ್ರಾಹ್ಮಣಿಯಲ್ಲ'ವೆಂದಳು.

ಪ್ರಫುಲ್ಲ—ಅದೇಕೆ?

ಸುಂದರಿ—ಬ್ರಾಹ್ಮಣನನ್ನು ಕೂಡಲಿಲ್ಲ.

ಪ್ರಫುಲ್ಲ—ಮದುವೆಯಾಗಿಲ್ಲವೆ? ಏಕೆ?

ಸುಂದರಿ—ಹುಡುಗಿಯಾಗಿದ್ದಾಗಲೇ ಕಳವಾದವಳಿಗೆ ಮದುವೆಯನ್ನು ಮಾಡುವರಾರು?

ಪ್ರಫುಲ್ಲ—ನೀನು ಚಿರಕಾಲದಿಂದಲೂ ಕಳ್ಳರ ಮನೆಯಲ್ಲಿಯೇ ಇರುವುದು?

ಸುಂದರಿ—ಕಳ್ಳನು ನನ್ನನ್ನೊಬ್ಬ ರಾಜನಿಗೆ ಮಾರಿದನು.

ಪ್ರಫುಲ್ಲ—ರಾಜನು ನಿನಗೆ ಮದುವೆ ಮಾಡಲಿಲ್ಲವೆ?

ಸುಂದರಿ—ರಾಜಪುತ್ರನಿಗೆ ಇಷ್ಟವಿದ್ದಿತು. ಆದರೆ ಮದುವೆಯು ಗಾಂಧರ್ವ ವಿಧಾನವಾಗಿ ಆಯಿತೆಂದು ಹೇಳಬಹುದು.

ಪ್ರಫುಲ್ಲ—ನೀನೇ ಪಾತ್ರಿಯೊ?

ಸುಂದರಿ—ಎಷ್ಟೊಂದು ದಿನದವರೆಗವನು ಹಾಗೆ ಇಷ್ಟವುಳ್ಳವನಾಗಿದ್ದನೋ ಅದನ್ನು ಹೇಳಲಾರೆನು.

ಪ್ರಫುಲ್ಲ—ಬಳಿಕ?

ಸುಂದರಿ—ಅವನ ರೀತಿಯನ್ನು ಕಂಡು ಓಡಿಹೋದೆನು.

ಪ್ರಫುಲ್ಲ—ಬಳಿಕ?

ಸುಂದರಿ—ರಾಜಮಹಿಷಿಯು ಕೆಲವು ಆಭರಣಗಳನ್ನು ಕೊಟ್ಟಿದ್ದಳು. ಒಡವೆಯನ್ನು ತೆಗೆದುಕೊಂಡು ಓಡಿಹೋದೆನಾಗಿ ಕಳ್ಳರ ಕೈಗೆ ಸಿಕ್ಕಿಬಿದ್ದೆನು. ಆ ಕಳ್ಳರ ಯಜಮಾನ ಭವಾನಿಠಾಕೂರನು ನನ್ನ ಕಥೆಯನ್ನೆಲ್ಲಾ ಕೇಳಿ ನನ್ನ ಆಭರಣಗಳನ್ನು ತೆಗೆದುಕೊಳ್ಳದೆ ಅದಕ್ಕಿಮ್ಮಡಿ ನಗನಟ್ಟುಗಳನ್ನು ಕೊಟ್ಟು ತನ್ನ ಮನೆಯಲ್ಲಿಟ್ಟುಕೊಂಡು ನನ್ನ ಸಂರಕ್ಷಣೆ ಮಾಡಿದನು. ನಾನವನ ಮಗಳು. ಅವನೆನಗೆ ತಂದೆ. ನನ್ನನ್ನು ಒಂದು ವಿಧವಾಗಿ ಕನ್ಯಾದಾನ ಮಾಡಿದ್ದಾನೆ.

ಪ್ರಪ್ಫುಲ್ಲ—ಒಂದು ವಿಧವಾಗಿ ಅಂದರೇನು?

ಸುಂದರಿ—ಸರ್ವಸ್ವವೂ ಶ್ರೀಕೃಷ್ಣನಿಗೆ ಸಂಪ್ರದಾನ ಮಾಡಿದ್ದಾನೆ.

ಪ್ರಪ್ಫುಲ್ಲ—ಅದು ಎಂತಹುದುದು?

ಸುಂದರಿ—ರೂಪ, ಯೌವನ, ಪ್ರಾಣ ಎಲ್ಲಾ ಅವನಿಗೆ ಅರ್ಪಣೆ.

ಪ್ರಪ್ಫುಲ್ಲ—ನಿನಗೆ ಸ್ವಾಮಿಯು ಶ್ರೀಕೃಷ್ಣನೆ?

ಸುಂದರಿ—ಅಹುದು, ಏಕೆಂದರೆ, ನನ್ನ ಮೇಲೆ ಸಂಪೂರ್ಣ ಅಧಿಕಾರಿಯು ಆರೋ ಅವನೇ ನನಗೆ ಸ್ವಾಮಿ,

ಪ್ರಪ್ಫುಲ್ಲೆಯು ನಿಟ್ಟುಸಿರನ್ನು ಬಿಟ್ಟು, 'ನಾನದನ್ನು ಹೇಳಲಾರೆನು ನೀನಾದಾಗಲೂ ಸ್ವಾಮಿಯನ್ನು ನೋಡಿಲ್ಲವೆಂದು ಹೇಳುತ್ತಿ; ಸ್ವಾಮಿಯನ್ನು ನೋಡಿದ್ದರೆ, ಶ್ರೀಕೃಷ್ಣನಲ್ಲಿಯೂ ಮನಸ್ಸು ಹೋಗದು.'

ಮೂರ್ಖನಾದ ಪ್ರಜೇಶ್ವರನು ಆ ಮಾತನ್ನು ಕೇಳಿ ತಿಳದಿರಲಿಲ್ಲ!

ಸುಂದರಿ—ಶ್ರೀಕೃಷ್ಣನಲ್ಲಿ ಹೆಂಗಸರೆಲ್ಲರ ಮನಸ್ಸು ಹೋಗಬಹುದು ಏಕೆಂದರೆ, ಅವನ ರೂಪವು ಅನಂತವಾದುದು. ಅವನ ಯೌವನವೂ ಅನಂತವಾದುದು, ಅವನ ಐಶ್ವರ್ಯವೂ ಅನಂತವಾದುದು, ಗುಣವೂ ಅನಂತವಾದುದು

ಆ ಯುವತಿಯು ಭವಾನಿಠಾಕೂರನ ಶಿಷ್ಯಳು. ಆದರೆ ಪ್ರಫುಲ್ಲೆಯ ನಿರಕ್ಷರೆ—ಆದುಕಾರಣ ಅವಳಾ ಸುಂದರಿಯ ಮಾತಿಗೆ ಉತ್ತರವನ್ನು ಕೊಡಲಾರ ಹೋದಳು. ಉತ್ತರವನ್ನು ಹಿಂದೂ ಧರ್ಮಗ್ರಂಥಗಳನ್ನು ಮಾಡಿರುವರು ಬಲ್ಲರು. ಈಶ್ವರನು ಅನಂತನು. ಆದರೆ ಅನಂತನಾದವನನ್ನು ಎಂದರೆ, ಆ ಮಧ್ಯಾಂತವಿಲ್ಲದವನನ್ನು ಸಣ್ಣದಾದೀ ನಮ್ಮ ಮನಸ್ಸೆಂಬ ಪಿಂಜರದಲ್ಲಿ ಹೊ ಲಾರೆವು. ಸಾಂತನಾಗಿದ್ದರೆ, ಎಂದರೆ, ಹುಟ್ಟು ನಿಟ್ಟ ಗೊತ್ತಾಗಿದ್ದವನಾಗಿದ್ದ ಅಂತಹವನನ್ನು ನಮ್ಮ ಮನಸ್ಸಿನಲ್ಲಿ ಹೊಗಿಸಿ ಧ್ಯಾನಿಸಬಹುದು. ಆದುದರಿಂದ ಈಶ್ವರನು ಅನಂತನಾದ ಶ್ರೀಕೃಷ್ಣ ರೂಪಿಯಾಗಿ ಪ್ರಕಾಶಿಸುತ್ತಿದ್ದಾನೆ! ಸ್ವಾಮಿ ಎಂದರೆ, ಹೆಂಗಸರಿಗೆ ಪತಿಯು ಮತ್ತೂ ಹೆಚ್ಚು ಪರಿಷ್ಕಾರವಾಗಿ ಮನದ ನಾಟುವ ಸಾಂತನಾದ ಭಗವಂತನಾಗಿದ್ದಾನೆ. ಆದುಕಾರಣ ಹಿಂದೂ ಹೆಂಗಸ ಪತಿಯೇ ಪ್ರತ್ಯಕ್ಷ ದೇವತಾಸ್ವರೂಪನಾಗಿದ್ದಾನೆ. ಈಯಂಶದಲ್ಲಿ ಹಿಂದೂ ಸಮಾಜವನ್ನು ಬಿಟ್ಟರೆ ಬೇರೆ ಸಮಾಜಗಳೆಲ್ಲಾ ನಿಕೃಷ್ಟವಾದುವುವು.

ಪ್ರಫುಲ್ಲೆಯು ತಿಳಿಯದ ಹೆಂಗಸು; ಅದನ್ನೆಲ್ಲಾ ತಿಳಿದಿರಲಿಲ್ಲವಾ ಅಷ್ಟೊಂದು ಮಾತುಗಳನ್ನೆಲ್ಲಾ ತಿಳಿಯಲಾರನೆಂದು ಹೇಳಿ, 'ನಿನ್ನ ಹೆಸರೇನು ಸಖಿ! ಇದುವರೆಗೂ ಹೇಳದೆ ಹೋದೆ?' ಎಂದಳು.

ಸಖಿ—ನನಗೆ ನಿಶಿ ಎಂದು ಭವಾನಿಠಾಕೂರನು ಹೆಸರಿಟ್ಟಿದ್ದಾನೆ. ನಾನು ಹ ಲಿಗೆ ತಂಗಿಯಾದ ನಿಶಿ. ನೀನೊಂದುದಿನ ಹಗಲನ್ನು ನೋಡಿ ಅವಳ ಸಂಗಡ ಮಾತ ಡಲು ಕರೆತರುವೆನು. ಅದು ಹೋಗಲಿ. ನಾನೀಗ ಹೇಳುತ್ತಿದ್ದ ಮಾತನ್ನು ಕೇಳು

ಈಶ್ವರನೇ ಪರಮಸ್ವಾಮಿಯಾಗಿದ್ದಾನೆ. ಹೆಂಗಸರಿಗೆ ಪತಿಯೇ ದೇವರು. ಶ್ರೀಕೃಷ್ಣನು ಎಲ್ಲರಿಗೂ ದೇವರು. ಎರಡು ದೇವರು ಏಕೆ? ತಾಯಿ! ಇಬ್ಬರು ಈಶ್ವರರು ಉಂಟೆ? ಅಲ್ಪವಾದೀ ಪ್ರಾಣದಲ್ಲಿರುವ ಅಲ್ಪತರವಾದ ಭಕ್ತಿಯನ್ನು ಎರಡು ಭಾಗವಾಗಿ ಮಾಡಿದರೆ ಒಂದೊಂದು ಭಾಗವು ಎಷ್ಟಾದೀತು?

ಪ್ರಫುಲ್ಲ—ದೂರ ಹೋಗು! ಅಂತಹ ಮಾತನ್ನು ಹೇಳಬೇಡ! ಹೆಂಗಸಿನ ಭಕ್ತಿಗೆ ಕೊನೆಯುಂಟೆ?

ನಿಶಿ—ಹೆಂಗಸಿನ ಪ್ರೀತಿವಿಶ್ವಾಸವೆನ್ನುವುದು ಬೇರೆ.

ಪ್ರಫುಲ್ಲ—ನನಗದು ಇದುವರೆಗೂ ಗೊತ್ತಿರಲಿಲ್ಲ. ನನಗವೆರಡೂ ನೂತನ ವಿಷಯಗಳು.

ಪ್ರಫುಲ್ಲೆಯ ಕಣ್ಣುಗಳಿಂದ ದರದರ ನೀರು ಸುರಿಯಲಾರಂಭವಾಯಿತು. ಅದನ್ನು ನೋಡಿ, ನಿಶಿಯು, 'ತಂಗಿ! ನೀನು ಅನೇಕ ದುಃಖಗಳನ್ನನುಭವಿಸಿದಂತೆ ಕಾಣುತ್ತದೆ' ಎಂದು ಹೇಳಿ, ಅವಳ ಗಲ್ಲವನ್ನು ಹಿಡಿದು ಕಣ್ಣೀರನ್ನೊರಸಿ, ತನಗಷ್ಟು ಗೊತ್ತಿರಲಿಲ್ಲವೆಂದು ಹೇಳಿ ಈಶ್ವರಭಕ್ತಿಗೆ ಪತಿಭಕ್ತಿಯೇ ಪ್ರಥಮ ಸೋಪಾನವೆಂದು ತಿಳಿದುಕೊಂಡಳು./

---

## ಹದಿನಾಲ್ಕನೆಯ ಪರಿಚ್ಛೇದ.

ಯಾವ ರಾತ್ರಿ ದುರ್ಲಭಚಕ್ರವರ್ತಿಯು ಪ್ರಫುಲ್ಲೆಯನ್ನು ಅವಳ ತಾಯಿಯ ಮನೆಯಿಂದ ಹಿಡಿದುಕೊಂಡು ಹೋದನೋ ದೈವಗತಿಯಿಂದಾ ರಾತ್ರಿ ವ್ರಜೇಶ್ವರನು ದುರ್ಗಾಪುರದಲ್ಲಿ ಅವಳ ಮನೆಗೆ ಬಂದನು. ವ್ರಜೇಶ್ವರನಿಗೆ ಒಂದು ಕುದುರೆಯಿದ್ದಿತು. ಕುದುರೆಯ ಸವಾರಿಯಲ್ಲಿ ಘಟಿಕ. ತನ್ನ ಮನೆಯಲ್ಲಿ ತಾಯಿ ತಂದೆಗಳೂ ಮನೆಯವರೆಲ್ಲರೂ ಮಲಗಿದ ಬಳಿಕ ಗೋಪ್ಯವಾಗಿ ಕುದುರೆಯನ್ನು ಹತ್ತಿಕೊಂಡು ಮನೆಯಿಂದ ಅಂಧಕಾರದಲ್ಲಿ ಹೊರಟನು. ಅವನು ಪ್ರಫುಲ್ಲೆಯ ಮನೆಗೆ ಬಂದಾಗ ಆ ಮನೆಯು ಜನಶೂನ್ಯವಾಗಿದ್ದಿತು. ಶುದ್ಧ ಅಂಧಕಾರ! ಪ್ರಫುಲ್ಲೆಯನ್ನು ಕಳ್ಳರು ಕೊಂಡೊಯ್ದು ಹೋಗಿದ್ದರು. ಆರನ್ನಾದರೂ ವಿಚಾರಿಸೋಣವೆಂದರೆ ರಾತ್ರಿ ಹೊತ್ತಾಗಿದ್ದುದರಿಂದ ನೆರೆಯವರಾರನ್ನೂ ನೋಡಲಿಲ್ಲ.

ವ್ರಜೇಶ್ವರನು ಪ್ರಫುಲ್ಲೆಯನ್ನು ಕಾಣದೆ ಮನಸ್ಸಿನಲ್ಲಿ, ಅವಳೊಬ್ಬಳೇ ಆಗಿದ್ದ ಕಾರಣ ಮಲಗುವುದಕ್ಕೆ ಮತ್ತಾರ ಮನೆಗೋ ಹೋಗಿರಬೇಕೆಂದು ತಿಳಿದುಕೊಂಡನು. ಆದರೆ ಅವಳು ಮನೆಗೆ ಬರುವವರೆಗೂ ಕಾದಿರುವುದಕ್ಕವನಿಗೆ ಅವಕಾಶವಿಲ್ಲ. ತಂದೆಯ ಭಯ. ಆ ರಾತ್ರಿಯೇ ಹಿಂದಿರುಗಿ ತನ್ನ ಊರಿಗೆ ಬಂದುಬಿಟ್ಟನು. ಅನಂತರ ಕೆಲವು ದಿನಗಳು ಕಳೆದವು. ಹರವಲ್ಲಭನ ಸಂಸಾರವು ಮೊದಲಿನಂತೆ ನಡೆಯುವುದು. ಎಲ್ಲರೂ ಊಟಮಾಡುವರು. ಕೊರತೆಯಿಲ್ಲದೆ ತಂತಮ್ಮ ಕೆಲಸಗಳನ್ನು ಮಾಡಿಕೊಂಡು ಸುಖವಾಗಿರುವರು. ವ್ರಜೇಶ್ವರನಿಗೆ ಹಾಗೆ ನಡೆಯುತ್ತಿರ

ಲಿಲ್ಲ. ಹಠಾತ್ತಾಗಿ ಆರಿಗೂ ಏನೇನೂ ಗೊತ್ತಾಗಲಿಲ್ಲ. ಮೊದಲು ತಾಯಿಗೆ ಸ್ವಲ್ಪ ಗೊತ್ತಾಗುತ್ತಾ ಬಂದಿತು. ಮಗನು ಊಟವನ್ನು ಸರಿಯಾಗಿ ಮಾಡುವುದಿಲ್ಲ, ಕೊಟ್ಟ ಹಾಲನ್ನು ಕುಡಿಯನು. ಅಡಿಗೆ ಸರಿಯಾಗಿಲ್ಲವೆಂದು ಬಡಿಸಿದುದನ್ನೆಲ್ಲಾ ಎಲೆಯಲ್ಲಿ ಬಿಟ್ಟಿರುವನು. ತಾಯಿಯು ನೋಡಿ ಮಗನಿಗೆ ಮಂದಾಗ್ನಿಯಾಗಿದೆ ಎಂದು ಒಳ್ಳೊಳ್ಳೆ ಜೀರ್ಣಕಾರಿ ಮಾತ್ರೆ ಲೇಹಗಳನ್ನು ಮಾಡಿಸಿಕೊಟ್ಟಳು; ಬಳಿಕ ವೈದ್ಯರನ್ನು ಕರೆಯಿಸಿದಳು. ವೈದ್ಯನು ಬಂದು ನೋಡಿ ಸಪ್ಪೆ ಔಷಧವನ್ನು ಕೊಟ್ಟು ಪಥ್ಯದಲ್ಲಿರಬೇಕೆಂದನು. ವ್ರಜೇಶ್ವರನು ವೈದ್ಯನನ್ನೂ ತಾಯಿಯನ್ನೂ ಹಾಸ್ಯ ಮಾಡಿ ಕಳುಹಿಸಿಬಿಟ್ಟನು. ತಾಯಿಯನ್ನು ಗದರಿಸಿಕೊಂಡು ಕಳುಹಿಸಿದಂತೆ ಬ್ರಹ್ಮಠಾಕುರಾಣಿಯನ್ನು ಕಳುಹಿಸಲು ಸಾಧ್ಯವಿಲ್ಲ. ಮುದುಕಿ ಬ್ರಹ್ಮಠಾಕು ರಾಣಿಯು ವ್ರಜೇಶ್ವರನೊಬ್ಬನೇ ಇದ್ದುದನ್ನು ಕಂಡು ಅವನ ಕೋಣೆಗೆ ಹೋಗಿ ಅವನನ್ನು ಹಿಡಿದಳು.

ಬ್ರಹ್ಮ—ಎಲಾ, ವ್ರಜ! ನೀನೇಕೆ ಹೋಗಿ ನಯನೆಯನ್ನು ನೋಡುವುದಿಲ್ಲ?

ವ್ರಜನು ನಕ್ಕು, 'ಮುಖವೋ ಶುದ್ಧ ಅಮಾವಾಸ್ಯೆ ರಾತ್ರಿ; ಅದರಲ್ಲಿಯೂ ಮೋಡಕವಿತುಕೊಂಡ ರಾತ್ರಿ; ನೋಡುವುದಕ್ಕೆ ಚೆನ್ನಾಗಿದೆಯಲ್ಲವೆ!' ಎಂದನು.

ಬ್ರಹ್ಮ—ಅವಳು ಸಾಯಲಿ. ಅವಳ ಮಾತನ್ನು ಬಿಡು. ಅವಳ ಮಾತು ಅವಳಿಗೇವೇ ಗೊತ್ತು. ನಾನು ಕಾಣೆ. ನೀನೇಕೆ ಊಟಮಾಡುವುದಿಲ್ಲ?

ವ್ರಜ—ನೀನು ಅಡಿಗೆಮಾಡುತ್ತಿಯೆಂದು!

ಬ್ರಹ್ಮ—ನಾನು ಮೊದಲಿನಿಂದಲೂ ಅಡಿಗೆಮಾಡುತ್ತೇನೆ.

ವ್ರಜ—ಈಗಾ ಅಡಿಗೆಮಾಡುವ ಕೈ ಕೆಟ್ಟುಹೋಯಿತು.

ಬ್ರಹ್ಮ—ಹಾಲನ್ನು ನಾನು ಮಾಡುತ್ತೇನೆಯೆ? ಅದಕ್ಕೂ ಅಡಿಗೆಮಾಡು ವವರ ದೋಷವೊ?

ವ್ರಜ—ಗೌಳಿಗಿತ್ತಿಯ ಹಾಲು ಬಿಗಡಾಯಿಸಿಹೋಯಿತು.

ಬ್ರಹ್ಮ—ನೀನು ಹಗಲೂ ರಾತ್ರಿ ಏನೋ ಸಂಕಟಪಟ್ಟುಕೊಂಡು ಯೋಚಿ ಸುತ್ತಿರುವುದೇಕೆ?

ವ್ರಜ—ನೀನೇಕೆ ಸಾಯಲಿಲ್ಲವೆಂತಲೂ, ನಿನ್ನನ್ನು ಎಂದು ಗಂಗೆಗೆ ತೆಗೆದು ಕೊಂಡು ಹೋಗಲೆಂತಲೂ ಯೋಚಿಸುತಿದ್ದೇನೆ.

ಬ್ರಹ್ಮ—ನಿನ್ನ ಜಂಭದ ಮಾತನ್ನು ಬಿಡು. ಅನೇಕರು ಬಾಯಲ್ಲಿ ಇಂತಹ ಮಾತನ್ನು ಹೇಳಬಹುದು. ನಾನು ಸತ್ತರೆ ಒಂದು ಹುಣಿಸೆಮರದ ಬುಡದಲ್ಲೆಳೆದು ಹಾಕಿಬಿಡಿವಿರಿ. ಒಂದು ತುಲಸಿಯ ಕಡ್ಡಿಯನ್ನೂ ಮೇಲೆ ಹಾಕುವುದಿಲ್ಲ. ಅದು ಹೋಗಲಿ, ನೀನು ಯೋಚಿಸುವುದು ಅದಲ್ಲ. ಆದರೆ ನೀನು ನನ್ನ ಗಂಗೆಯನ್ನು ಯೋಚಿಸಿಕೊಂಡು ಇಷ್ಟು ನರಳುವುದೇಕೆ? ಅದನ್ನು ಹೇಳು.

ವ್ರಜ—ಅದೇನು ಕಡಿಮೆಯಾದ ಯೋಚನೆಯೆ?

ಬ್ರಹ್ಮ—ನೀನು ನಿನ್ನೆ ಸ್ನಾನಕ್ಕೆ ಹೋದವನು ನದಿಯ ಮೆಟ್ಟಿಲುಗಳ ಮೇಲೆ ಕುಳಿತು ಅದನ್ನು ಯೋಚಿಸುತಿದ್ದೆಯೆ? ನಿನ್ನ ಕಣ್ಣಿನಿಂದ ನೀರು ಹರಿಯುತಿದ್ದಿತೇಕೆ?

ವ್ರಜ—ಸ್ನಾನಮಾಡಿದರೆ, ನೀನು ಮಾಡಿದ ಅನ್ನವನ್ನು ತಿನ್ನಬೇಕಲ್ಲ! ಎಂಬ ದುಃಖದಿಂದ ಕಣ್ಣಿನಿಂದ ನೀರು ಸುರಿಯುತಿದ್ದಿತು.

ಬ್ರಹ್ಮ—ಸಾಗರೆಯು ಬಂದು ಅಡಿಗೆಯನ್ನು ಮಾಡಲೆ? ಹಾಗಾದರೆ ಊಟ ಮಾಡುವಿಯಾ?

ವ್ರಜ—ಸಾಗರೆಯು ನಿತ್ಯವೂ ಬಂದು ಅಡಿಗೆಮಾಡುವಳೊ? ಅವಳು ಅಡಿಗೆಯನ್ನು ಮಾಡಕೂತರೆ, ಆಡುವವಳಾರು? ಹರಟೆಹರಟುವವರಾರು? ಅವಳು ಮಾಡಿದರೆ ಬೇಯದ ಅಕ್ಕಿ, ಉಪ್ಪಿಲ್ಲದ ಚಟ್ಣಿ, ಹುಳಿಯಿಲ್ಲದ ಹುಳಿ, ನೀನು ಅವಳು ಮಾಡಿದ ಅಡಿಗೆಯನ್ನು ಒಂದು ದಿನ ತಿಂದುನೋಡು, ಗೊತ್ತಾಗುವುದು.

ಬ್ರಹ್ಮ—ಪ್ರಫುಲ್ಲೆಯು ಬಂದು ಅಡಿಗೆಯನ್ನು ಮಾಡಲೆ?

ಬೀದಿಯಲ್ಲಿ ರಾತ್ರಿಹೊತ್ತು ಬೆಳಕನ್ನು ಕೊಂಡೊಯ್ಯುವಾಗ ಪಾರ್ಶ್ವದಲ್ಲಿರುವ ಮನೆಯು ಆ ಬೆಳಕಿನಲ್ಲಿ ಒತ್ತಡವೆ ನಕ್ಕು ಪುನಃ ಕೂಡ್ಲೆ ಕತ್ತಲಾಗುವಂತೆ ಪ್ರಫುಲ್ಲೆಯ ಹೆಸರನ್ನು ಹೇಳುತ್ತಲೇ ವ್ರಜೇಶ್ವರನ ಮುಖವು ನಕ್ಕಂತಾಗಿ ಕೂಡ್ಲೆ ಕತ್ತಲು ಕವಿತಂತಾಯಿತು. ಅವನು ಬ್ರಹ್ಮಠಾಕುರಾಣಿಯ ಪ್ರಶ್ನೆಗೆ 'ಆ ಬಹಿಷ್ಕಾರದವಳೆ?' ಎಂದನು.

ಬ್ರಹ್ಮ—ಬಹಿಷ್ಕಾರದವಳಲ್ಲ. [ಅವರಮೇಲಿನ ಅಪವಾದವು ಸುಳ್ಳೆಂಬುದನ್ನು ಎಲ್ಲರೂ ಚೆನ್ನಾಗಿ ಬಲ್ಲರು. ನಿಮ್ಮ ತಂದೆಗೆ ಜಾತಿಯ ಜನರ ಭಯ ಇಲ್ಲದಿದ್ದರೆ ಆತನೂ ಆ ಅಪವಾದವು ಸುಳ್ಳೆಂದೊಪ್ಪಿಕೊಳ್ಳುತ್ತಿದ್ದನು. ಸಮಾಜವು ಮಕ್ಕಳಿಗಿಂತಲೂ ದೊಡ್ಡದಲ್ಲ. ಮತ್ತೊಮ್ಮೆ ನಿಮ್ಮ ತಂದೆಯಸಂಗಡ ಮಾತಾಡಿ ನೋಡಲೆ?

ವ್ರಜ—ಬೇಡ. ನನಗೋಸ್ಕರ ಜನರಲ್ಲಿ ನಮ್ಮ ತಂದೆಗೆ ಅಪಮಾನವುಂಟಾಗುವುದು. ಆದರಿಂದ ಪ್ರಯೋಜನವಿಲ್ಲ.

ಅಂದು ಹೆಚ್ಚು ಮಾತು ನಡೆಯಲಿಲ್ಲ. ಬ್ರಹ್ಮಠಾಕುರಾಣಿಗೂ ಹೆಚ್ಚು ಸಂಗತಿಗಳಾವವೂ ಗೊತ್ತಾಗಲಿಲ್ಲ. ಪ್ರಫುಲ್ಲೆಯ ಮಾತು ಬಂದುದು ಸಾಮಾನ್ಯವಾಗಲಿಲ್ಲ. ಪ್ರಫುಲ್ಲೆಯ ರೂಪವು ಅತುಲನೀಯವಾದುದು. ಆ ರೂಪವೊಂದೇ ವ್ರಜೇಶ್ವರನ ಹೃದಯವನ್ನೆಲ್ಲಾ ಅಧಿಕಾರಮಾಡುತ್ತ ಅದರಲ್ಲಿ ಅವನ ಮನಸ್ಸು ಮುಣುಗಿಹೋಗಿದ್ದಿತು. ಅವನವಳೊಂದು ರಾತ್ರಿ ಮಾತ್ರ ನೋಡಿದ್ದನು. ಆಗ ನೋಡಿದ್ದುದರಲ್ಲಿ ಅವನಿಗವಳ ಸೌಂದರ್ಯಕ್ಕಿಂತ ಅವಳ ಮನಸ್ಸು ಹೆಚ್ಚು ಸುಂದರವಾದುದೆಂತಲೂ ಹೆಚ್ಚು ಮಾಧುರ್ಯವಾದುದೆಂತಲೂ ಕಂಡುಬಂದಿದ್ದಿತು. ಮದುವೆಯಾದ ಹೆಂಡತಿ ಪ್ರಫುಲ್ಲೆಯು ಮನೆಯಲ್ಲಿ ತಕ್ಕ ಸ್ಥಾನಾಧಿಕಾರಗಳನ್ನು ಹೊಂದಿ ಗಂಡನ ಹತ್ತಿರ ಇದ್ದಿದ್ದರೆ ವ್ರಜೇಶ್ವರನಿಗೆ ಉಂಟಾಗಿದ್ದಾ ಉನ್ಮಾದಕರವಾದ ಮೋಹವು ಅತ್ಯಂತ ಪ್ರೀತಿಕರವಾದ ಸ್ನೇಹದಲ್ಲಿ ಪರಿಣಮಿಸುತಿದ್ದಿತು. ರೂಪದಿಂದುಂಟಾಗಿದ್ದ

ಮೋಹವು ಹೋಗಿ ಗುಣದಿಂದುಂಟಾಗಿದ್ದ ಮೋಹವು ಸ್ಥಾಯಿಯಾಗಿ ನಿಲ್ಲುತ್ತಿದ್ದಿ ಆದರದು ಹಾಗಾಗಲಿಲ್ಲ. ಪ್ರಫುಲ್ಲೆಯು ಮಿಂಚಿನ ಹಾಗೆ ಒತ್ತಡವೆ ಹೋ ಚಿರಕಾಲ ಕತ್ತಲಲ್ಲಿ ಸೇರಿಹೋದಳು. ಆದ್ದರಿಂದ ಗುಣದಿಂದುಂಟಾ ಮೋಹವು ಸಹಸ್ರಪಾಲು ವೃದ್ಧಿಯನ್ನೈದು ಬಲವಾಗಿ ಬೇರಿಳಿದು ನಿಂತಿ ಅದೇನೋ ಸಾಮಾನ್ಯವಾದುದು, ಅದು ಹಾಗಿರಲಿ—ಅದಲ್ಲದೆ ಅವಳಲ್ಲಾ ದಾ ವಾದ ಕರುಣೆ—ಭಂಗಾರದ ಪ್ರತಿಮೆಯಂತಿದ್ದಾ ಪ್ರಫುಲ್ಲೆಯನ್ನವಳ ಸಹಜ ಗೃಹಿಣಿಯ ಅಧಿಕಾರದಿಂದ ತಪ್ಪಿಸಿ, ಅಪಮಾನಪಡಿಸಿ ಸುಳ್ಳು ಅಪವಾದನ ಹೊರಿಸಿ, ಚಿರಕಾಲವೂ ಬಹಿಷ್ಕಾರಕ್ಕೆ ಗುರಿಮಾಡಿದ ಅನ್ಯಾಯಕ್ಕೆ ಸಲ ಅವಳ ಮೇಲೆ ಉಂಟಾಗಿದ್ದ ಅತ್ಯಂತವಾದಾ ಕರುಣೆ—ಅವಳೀಗ ಅನ್ನಕ್ಕೆ ಭಿಕಾರಿ! ಅನ್ನವಿಲ್ಲದೆ ಸಾಯುವುದರಲ್ಲಿದ್ದಾಳೆ. ಪ್ರಗಾಢವಾದಾ ಅನುರಾ ಮೇಲೆ ಈ ಯೋಚನೆಗಳಿಂದುಂಟಾದ ಗಭೀರವಾದಾ ಕರುಣೆ. ವ್ರಜೇಶ್ವ ಹೃದಯವು ಪ್ರಫುಲ್ಲಮಯವಾಯಿತು. ಹೃದಯದಲ್ಲಿ ಮತ್ತಾವುದಕ್ಕೂ ಸ್ಥಳ ಲಿಲ್ಲ. ಮುದುಕಿ ಬ್ರಹ್ಮಠಾಕುರಾಣಿಗೆ ಅದೆಲ್ಲಾ ಗೊತ್ತಾಗಲಿಲ್ಲ.

ಕೆಲವು ದಿನಗಳಾದ ಬಳಿಕ ಪ್ರಫುಲ್ಲೆಯು ಕಣ್ಣಿಗೆ ಕಾಣದೆ ಅಂತರ್ಹಿತೆಯಾ ಳೆಂದು ಫುಲ್ಲಮಣಿಯು ಪ್ರಚಾರಪಡಿಸಿದ್ದ ಸಮಾಚಾರವು ಹರವಲ್ಲಭನ ಮನೆ ತಲಪಿತು. ಹಾಗೆ ಬಂದು ತಲಪುವುದರಲ್ಲಿ ಸಮಾಚಾರವು ವಿಕಾರಾಂತರವ ತಾಳಿ, ಪ್ರಫುಲ್ಲೆಯು ವಾತಶ್ಲೇಷ್ಮವಿಕಾರದಿಂದ ಸತ್ತುಹೋದಳೆಂತಲೂ, ಸಾಯ ವುದಕ್ಕೆ ಮುಂಚೆ ಸತ್ತುಹೋಗಿದ್ದ ತನ್ನ ತಾಯಿಯನ್ನು ಕಂಡಳೆಂತ ಸುದ್ದಿಯು ಬಂದು ಮುಟ್ಟಿತು. ವ್ರಜೇಶ್ವರನವನ್ನು ಕೇಳಿದನು.

ಹರವಲ್ಲಭನೂ ಕೇಳಿ ಸೂತಕವಿದ್ದು ಸ್ನಾನಮಾಡಿ ಪ್ರಫುಲ್ಲೆಗೆ ಸಲ ಶ್ರಾದ್ಧಗಳನ್ನು ಮಾಡಕೂಡದೆಂದು ನಿಷೇಧಿಸಿ, 'ಬ್ರಾಹ್ಮಣನು ಬಹಿಷ್ಕೃತ ಶ್ರಾದ್ಧವನ್ನು ಮಾಡುವುದುಂಟೆ?' ಎಂದು ಹೇಳಿದನು. ನಯನತಾರೆಯು ಸ್ನಾ ವನ್ನು ಮಾಡಿ ತಲೆಯನ್ನೊರಸಿಕೊಂಡು ತಲೆಯ ಕವದಲನ್ನೊಣಗಿಸಿಕೊಳ್ಳುತ್ತ 'ಒಂದು ಪಾಪವು ಹೋಯಿತು; ಮತ್ತೊಬ್ಬಳಿಗೆ ಸಲವಾಗಿ ಒಮ್ಮೆ ಮುಣುಗುಹಾ ಸ್ನಾನವನ್ನು ಮಾಡಿ ತಲೆಯನ್ನು ತೊಳೆದುಕೊಂಡರೆ ಮೈ ತಣ್ಣಗಾಗಿ ಶುದ್ಧಿಯಾಗ ವುದು' ಎಂದುಕೊಂಡಳು. ಕೆಲವುಕಾಲ ತಳ್ಳಿತು. ವ್ರಜೇಶ್ವರನ ದೇಹವು ದಿನೆ ದಿನೆ ಕ್ಷೀಣಿಸಿಕೊಂಡು ಕೃಶವಾಗುತ್ತ ಬಂದಿತು. ಹಾಸಿಗೆಯನ್ನು ಬಿಟ್ಟೇಳಲಾರ ಹೋದನು. ರೋಗವು ಅಷ್ಟೊಂದು ಪ್ರಬಲವಾದುದಲ್ಲ. ಸ್ವಲ್ಪಮಾತ್ರ ಜ್ವರ ಹೆಚ್ಚೇನೂ ಇಲ್ಲ. ಆದರೆ ಹುಡುಗನಿಗೆ ಶುದ್ಧವಾಗಿ ಬಲವಿಲ್ಲ. ಹಾಸಿಗೆಯಿ ದೆದ್ದು ಕೂಡಲಾರ. ವೈದ್ಯನು ಬಂದು ನೋಡಿದನು. ಔಷಧ ಮಂತ್ರಗಳಿಂದ ಏನೇನೂ ಸಾಧ್ಯವಾಗಲಿಲ್ಲ. ರೋಗವು ವೃದ್ಧಿಗೊಂಡಿತು. ಕಡೆಗೆ ವ್ರಜೇಶ್ವರನು ಉಳಿಯುವುದು ಸಂದೇಹಕ್ಕೆ ಬಂದಿತು.

ರೋಗಕ್ಕೆ ಮುಖ್ಯ ಕಾರಣವು ಹೆಚ್ಚುದಿನ ಗುಟ್ಟಾಗಿರಲಿಲ್ಲ; ಅದು ಹೊರಗೆಬಿದ್ದಿತು, ಮೊದಲು ಮುದುಕಿಗೆ ಗೊತ್ತಾಯಿತು. ಅನಂತರ ಯಜಮಾನನಿಗೆ ತಿಳಿಯಿತು. ಆಗ ಹರವಲ್ಲಭನಿಗೆ ಎದೆಯಲ್ಲಿ ಶೂಲವು ಇರಿದಂತಾಯಿತು. ಹರವಲ್ಲಭನು ಅಳುತಳುತ, 'ಛೀ ! ಛೀ ' ಏನನ್ನು ಮಾಡಿಬಿಟ್ಟೆ! ನನ್ನ ಬುಡಕ್ಕೆ ನಾನೇ ಕೊಡ್ಲಿಯನ್ನು ಹಾಕಿದಂತಾಯಿತು !! ಎಂದಂದುಕೊಂಡನು. ಯಜಮಾನಿಯು ' ಮಗುವು ಬದುಕಿಕೊಳ್ಳದಿದ್ದರೆ ವಿಷವನ್ನು ತೆಗೆದುಕೊಳ್ಳುವೆನು.' ಎಂದಂದುಕೊಂಡಳು. ಹರವಲ್ಲಭನು ' ದೇವರು ವಜ್ರೇಶ್ವರನನ್ನು ಬದುಕಿಸಿದರೆ ಮುಂದೆ ಅವನ ಮನೋಗತವನ್ನು ತಿಳಿದುಕೊಳ್ಳದೆ ಅವ ಕೆಲಸವನ್ನೂ ಮಾಡುವುದಿಲ್ಲ' ವೆಂದು ಪ್ರತಿಜ್ಞೆಯನ್ನು ಮಾಡಿದನು.

ವ್ರಜೇಶ್ವರನು ಬದುಕಿಕೊಂಡನು. ಕ್ರಮವಾಗಿ ಆರೋಗ್ಯಲಾಭವುಂಟಾಗಲಾರಂಭಿಸಿತು. ಒಂದು ದಿವ ಹರವಲ್ಲಭನ ತಂದೆಯ ಶ್ರಾದ್ಧವು ಬಂತು ಹರವಲ್ಲಭನು ಶ್ರಾದ್ಧವನ್ನು ಮಾಡುತ್ತಿದ್ದನು. ವ್ರಜೇಶ್ವರನು ಏನೋ ಕೆಲಸಕ್ಕೋಸ್ಕರ ಅಲ್ಲಿಗೆ ಹೋದನು ಶ್ರಾದ್ಧಾಂತ್ಯದಲ್ಲಿ ಪುರೋಹಿತನು ಮಂತ್ರ ಹೇಳುವುದರಲ್ಲಿ ;—

'ಪಿತಾ ಸ್ವರ್ಗಃ ಪಿತಾ ಧರ್ಮ ಪಿತಾಹಿ ಪರಮಂ ತಪಃ|
ಪಿತರಿ ಪ್ರೀತಿಮಾಪನ್ನೇ ಪ್ರೀಯಂತೆ ಸರ್ವದೇವತಾಃ||'

ಎಂದು ಹೇಳಿದನು.

ಆ ಮಂತ್ರವನ್ನು ವಜ್ರೇಶ್ವರನು ಕಂಠಸ್ಥಮಾಡಿದನು. ಪ್ರಫುಲ್ಲೆಗೋಸ್ಕರ ದುಃಖವುಂಟಾದಾಗ ಮನಸ್ಸಿನ ಸಮಾಧಾನಕ್ಕೆ ಸಲವಾಗಿ ಕಂಠಸ್ಥವಾಗಿದ್ದಾ;—

'ಪಿತಾ ಸ್ವರ್ಗಃ ಪಿತಾ ಧರ್ಮ ಪಿತಾಹಿ ಪರಮಂತಪಃ|
ಪಿತರಿ ಪ್ರೀತಿಮಾಪನ್ನೇ ಪ್ರೀಯಂತೆ ಸರ್ವದೇವತಾಃ||'

ಎಂಬೀ ಮಂತ್ರವನ್ನು ಹೇಳಿಕೊಳ್ಳುವನು. ಮಂತ್ರಾರ್ಥವೇನೆಂದರೆ:—

ಪಿತನೇ ಸ್ವರ್ಗ, ಪಿತನೇ ಧರ್ಮ, ಪಿತನೇ ಪರಮ ತಪಸ್ಸು.
ಪಿತನು ಪ್ರೀತನಾದರೆ ಸರ್ವದೇವತೆಗಳೂ ಪ್ರೀತರಾಗುತ್ತಾರೆ.

ಈ ಪ್ರಕಾರ ಮನಸ್ಸಿನಲ್ಲಿ ಯೋಚಿಸುತ್ತ ವ್ರಜೇಶ್ವರನು ಪ್ರಫುಲ್ಲೆಯನ್ನು ಮರೆಯಲು ಪ್ರಯತ್ನಮಾಡುತ್ತಿದ್ದನು. ವ್ರಜೇಶ್ವರನ ತಂದೆಯೇ ಪ್ರಫುಲ್ಲೆಯ ಮರಣಕ್ಕೆ ಕಾರಣನಾದನೆಂದು ಮನಸ್ಸಿಗೆ ಹೊಳೆದರೆ ಅವನು, "ಪಿತಾ ಸ್ವರ್ಗಃ ಪಿತಾ ಧರ್ಮ ಪಿತಾಹಿ ಪರಮಂತಪಃ" ಎಂದು ಮನಸ್ಸಿನಲ್ಲಿ ಹೇಳಿಕೊಳ್ಳುವನು.

ಪ್ರಫುಲ್ಲೆಯು ಹೋದರೂ ವ್ರಜೇಶ್ವರನಿಗೆ ತಂದೆಯ ಮೇಲೆ ಅಚಲವಾದ ಭಕ್ತಿಯು ನೆಲೆಯಾಗಿ ನಿಂತಿತು.

---

## ಹದಿನೈದನೆಯ ಪರಿಚ್ಛೇಧ

ಪ್ರಫುಲ್ಲೆಯ ವಿದ್ಯಾಭ್ಯಾಸವು ಪ್ರಾರಂಭವಾಯಿತು. ನಿಶಿ ಠಾಕೂರಾಣಿಯು ರಾಜನ ಮನೆಯಲ್ಲಿದ್ದು ಅಲ್ಲಿಂದ ಬಂದು ಭವಾನಿಠಾಕೂರನ ಹತ್ತಿರ

ಓದು ಬರಹಗಳನ್ನು ಕಲಿತಿದ್ದಳು. ಅವಳ ಬಳಿ ಪ್ರಫುಲ್ಲೆಯು ಓನಾಮ ಮೊದಲ್ಗೊಂಡು ಪುಸ್ತಕವನ್ನೋದುವವರೆಗೂ ಕಲಿತು, ಗಣಿತ ಮುಂತಾದುವುಗಳನ್ನೂ ಅಭ್ಯಾಸ ಮಾಡಿದಳು. ಅನಂತರ ಭವಾನಿಠಾಕೂರನೇ ಸ್ವಂತವಾಗಿ ಪಾಠವನ್ನು ಹೇಳುವ ಭಾರವನ್ನು ವಹಿಸಿದನು. ಪಾಠವನ್ನು ಹೇಳುತ್ತ ನಾಲ್ಕಾರು ದಿನಗಳಲ್ಲಿಯೇ ಅವನಿಗೆ ಆಶ್ಚರ್ಯವುಂಟಾಯಿತು. ಪ್ರಫುಲ್ಲೆಯು ಬಹಳ ಶೀಘ್ರವಾಗಿ ಕಲಿಯುವಳು. ಅವಳ ಪರಿಶ್ರಮವನ್ನು ನೋಡಿ ನಿಶಿಗೂ ಆಶ್ಚರ್ಯವುಂಟಾಯಿತು. ಮೊದಲು ವ್ಯಾಕರಣವು ಪ್ರಾರಂಭವಾಯಿತು. ಪಾಠವನ್ನು ಕಲಿತುಕೊಂಡು ಪ್ರಫುಲ್ಲೆಯು ಆವಾಗಲೂ "ಸುಔಜಸ್, ಅಂಔಜಸ್" ಎಂದು ಮುಂತಾದ ವ್ಯಾಕರಣ ಸೂತ್ರಗಳನ್ನೇ ಬಾಯಲ್ಲಿ ಹೇಳುತ್ತಿರುವಳು. ಅವಳು ಅಡಿಗೆ, ಭೋಜನ, ಶಯನ ಮಾಡುವುದೆಲ್ಲಾ ಹೆಸರಿಗೆ ಮಾತ್ರ. ಆವಾಗಲೂ ಓದುವದರಲ್ಲಿರುವಳು. ವ್ಯಾಕರಣವು ಕೆಲವು ತಿಂಗಳಲ್ಲಿ ಪೂರೈಸಿತು. ಅನಂತರ ವ್ಯಾಕರಣ ಸೂತ್ರಗಳಿಗೆ ಉದಾಹರಣ ಸ್ವರೂಪವಾದ ಭಟ್ಟಿಕಾವ್ಯವನ್ನು ನೀರು ಕುಡಿದಹಾಗೆ ಓದಿಬಿಟ್ಟಳು. ಅದರೊಂದಿಗೆ ಅಮರವನ್ನೂ ಪೂರಾ ಘಟ್ಟಿಮಾಡಿದಳು. ರಘುವಂಶ, ಕುಮಾರಸಂಭವ, ನೈಷಧ, ಶಕುಂತಳಾ ಮುಂತಾದ ಕಾವ್ಯಗಳನ್ನು ನಿರ್ವಿಘ್ನವಾಗಿ ಪೂರೈಸಿದಳು. ಅನಂತರ ಪಾಠಕ ಠಾಕೂರನು ಸಾಂಖ್ಯದರ್ಶನ, ವೇದಾಂತ, ನ್ಯಾಯ ಈ ಶಾಸ್ತ್ರಗಳನ್ನು ಹೇಳಿದನು. ಆ ಶಾಸ್ತ್ರಗಳನ್ನು ಸ್ವಲ್ಪ ಸ್ವಲ್ಪ ಮಾತ್ರ ತಿಳಿಸಿದನು. ಅವುಗಳ ಪರಿಚಯುವಾದ ಬಳಿಕ ಯೋಗಶಾಸ್ತ್ರವನ್ನು ಹೇಳಿಕೊಟ್ಟನು. ಕಡೆಗಾ ಎಲ್ಲಾ ಗ್ರಂಥಗಳಿಗಿಂತ ಶ್ರೇಷ್ಠವಾದ ಶ್ರೀಮದ್ಭಗವದ್ಗೀತೆಯನ್ನು ಉಪದೇಶ ಮಾಡಿದನು. ಐದು ವರ್ಷದಲ್ಲಿ ವಿದ್ಯಾಭ್ಯಾಸವು ಸಂಪೂರ್ಣವಾಯಿತು.

ಆ ವಿದ್ಯಾಭ್ಯಾಸವಲ್ಲದೆ ಪ್ರಫುಲ್ಲೆಗೆ ಮತ್ತೊಂದು ವಿಧವಾದ ವಿದ್ಯಾಭ್ಯಾಸವೂ ಆಗುತ್ತಿದ್ದಿತು. ಸಗಣಕ್ಕನಾವ ಕೆಲಸಗಳನ್ನೂ ಮಾಡುತ್ತಿರಲಿಲ್ಲ. ಕೇವಲ ಸಂತೆಗೆ ಹೋಗುವಳು—ಅದೂ ಭವಾನಿಠಾಕೂರನು ಹೇಳಿದರೆ ಹೋಗುವಳು. ನಿಶಿಯೂ ಹೆಚ್ಚುಗೆ ಕೆಲಸವನ್ನು ಮಾಡುವುದರಲ್ಲಿ ಸಹಾಯವನ್ನು ಮಾಡುತ್ತಿರಲಿಲ್ಲ. ಆದುಕಾರಣ ಪ್ರಫುಲ್ಲೆಯೇ ಎಲ್ಲಾ ಕೆಲಸಗಳನ್ನೂ ಮಾಡಬೇಕಾಗಿರುವುದು. ಕೆಲಸವನ್ನು ಮಾಡುವುದರಲ್ಲಿ ಪ್ರಫುಲ್ಲೆಗೆ ಪಾಲುಮಾರಿಕೆಯಿಲ್ಲ. ಕಷ್ಟವೂ ತೋರದು. ತಾಯಿಯ ಮನೆಯಲ್ಲಿದ್ದಾಗ ಎಲ್ಲಾ ಕೆಲಸಗಳನ್ನೂ ಮಾಡುತಿದ್ದಳು ಮೊದಲನೆಯ ವರ್ಷದಲ್ಲಿ ಭವಾನಿಠಾಕೂರನು ಅವಳ ಆಹಾರ ವಿಷಯದಲ್ಲಿ ದಪ್ಪಕ್ಕಿ, ಉಪ್ಪು, ಹಸೀಕಡ್ಲೆ ಇಷ್ಟನ್ನು ಮಾತ್ರ ಏರ್ಪಾಡು ಮಾಡಿದ್ದನು. ಮತ್ತೇನೂ ಇಲ್ಲ. ನಿಶಿಗೂ ಅದೇ ಊಟ. ಪ್ರಫುಲ್ಲೆಗೆ ಅದರಿಂದೇನೂ ಕಷ್ಟತೋರಲಿಲ್ಲ. ತಾಯಿಯ ಮನೆಯಲ್ಲಿ ಒಂದೊಂದು ದಿನ ಅಷ್ಟೂ ಸಿಗುತಿರಲಿಲ್ಲ. ಆದರೆ ಪ್ರಫುಲ್ಲೆಯು ಒಂದು ವಿಷಯದಲ್ಲಿ ಮಾತ್ರ ಭವಾನಿಠಾಕೂರನ ಮಾತನ್ನು ಕೇಳುತ್ತಿರಲಿಲ್ಲ. ಏಕಾದಶಿ

ದಿನ ಉಪವಾಸಮಾಡದೆ ಅವಲಕ್ಕಿಯನ್ನು ತೆಗೆದುಕೊಳ್ಳುವಳು.

ಎರಡನೆಯ ವರ್ಷ ನಿಶಿಗೆ ಮೊದಲಿನಂತೆ ಊಟ. ಆದರೆ ಪ್ರಫುಲ್ಲೆಗೆ ಕೇವಲ ಉಪ್ಪು, ಮೆಣಸು, ಅನ್ನ. ಏಕಾದಶೀ ದಿನ ಅವಲಕ್ಕಿ, ಇಷ್ಟೆ—ಪ್ರಫುಲ್ಲೆಯು ಅದಕ್ಕೂ ಆಕ್ಷೇಪಣೆ ಮಾಡಲಿಲ್ಲ.

ಮೂರನೆಯ ವರ್ಷದಲ್ಲಿ ನಿಶಿಗೆ ಲಾಡು, ಚಿರೋಟಿ, ತುಪ್ಪ, ಮೊಸರು, ಹಾಲು, ಬೆಣ್ಣೆ, ಫಲ, ತರಕಾರಿ, ಅನ್ನ, ವ್ಯಂಜನ ಮುಂತಾದ ಉತ್ತಮ ಆಹಾರ ಗಳ ಏರ್ಪಾಡಾದವು. ಪ್ರಫುಲ್ಲೆಗೆ ಅನ್ನ, ಉಪ್ಪು, ಮೆಣಸು—ಇಬ್ಬರೂ ಒಂದೇ ಸ್ಥಳ ದಲ್ಲಿ ಕುಳಿತು ಊಟವನ್ನು ಮಾಡುವರು. ನಿಶಿಯು ಒಳ್ಳೊಳ್ಳೆ ಪದಾರ್ಥಗಳನ್ನು ಹೆಚ್ಚು ತೆಗೆದುಕೊಳ್ಳುತ್ತಿರಲಿಲ್ಲ. ಸಗಣಕ್ಕನಿಗೆ ಕೊಟ್ಟುಬಿಡುವಳು. ಆ ಪರೀಕ್ಷೆ ಯಲ್ಲಿಯೂ ಪ್ರಫುಲ್ಲೆಯು ತೇರ್ಗಡೆಯಾದಳು.

ನಾಲ್ಕನೆಯ ವರ್ಷದಲ್ಲಿ ಪ್ರಫುಲ್ಲೆಯು ಸಾಮಾನ್ಯವಾದುದನ್ನು ತಿನ್ನಬಹು ದೆಂದು ಅಪ್ಪಣೆಯಾಯಿತು. ಅವಳು ಹಾಗೂ ಊಟಮಾಡಿದಳು.

ಐದನೆಯ ವರ್ಷದಲ್ಲಿ ಅವಳು ಯಥೇಚ್ಛವಾಗಿ ಬೇಕಾದುದನ್ನೆಲ್ಲಾ ತಿನ್ನ ಬಹುದೆಂದಾಯಿತು. ಪ್ರಫುಲ್ಲೆಯು ಮೊದಲ ವರ್ಷದಲ್ಲಿ ಊಟಮಾಡಿದಂತೆ ಊಟ ಮಾಡುವಳು.

ಶಯನ, ವಸನ, ನಿದ್ರೆ ವಿಚಾರಗಳಲ್ಲಿಯೂ ತದನುಸಾರವಾಗಿ ಭವಾನಿ ಠಾಕೂರನು ಶಿಷ್ಯಳಿಗೆ ಅಭ್ಯಾಸಮಾಡಿಸಿದನು. ಉಡುವುದಕ್ಕೆ ಮೊದಲನೆಯ ವರ್ಷ ನಾಲ್ಕು ಬಟ್ಟೆ, ಎರಡನೆಯವರ್ಷ ಎರಡು ಬಟ್ಟೆ. ಮೂರನೆಯ ವರ್ಷ ಬಿಸಿಲುಕಾಲದಲ್ಲಿ ದಪ್ಪವಾದೊಂದು ಬಟ್ಟೆ, ಅದನ್ನು ಮೈಮೇಲೆಯೇ ಒಣಗಿಸಿ ಕೊಳ್ಳಬೇಕು. ಶೀತಕಾಲದಲ್ಲೊಂದು ನವರುಬಟ್ಟೆ, ಅದನ್ನೂ ಮೈಮೇಲೆಯೇ ಒಣಗಿಸಿಕೊಳ್ಳಬೇಕು. ನಾಲ್ಕನೆಯವರ್ಷ ಒಳ್ಳೊಳ್ಳೇ ಸೀರೆಗಳು. ಅವುಗಳನ್ನು ಪ್ರಫುಲ್ಲೆಯು ತುಂಡು ತುಂಡಾಗಿ ಮಾಡಿ ಉಡುವಳು. ಐದನೆಯ ವರ್ಷ ಬೇಕಾದ ಬಟ್ಟೆಗಳನ್ನುಟ್ಟುಕೊಳ್ಳಬಹುದೆಂದು ಅಪ್ಪಣೆಮಾಡಿದನು. ಆದರೆ ಪ್ರಫು ಲ್ಲೆಯು ದಪ್ಪವಾಗಿ ಒರಟಾದ ಸೀರೆಯನ್ನೇ ಆವಾಗಲೂ ಉಡುವಳು.

ಕೇಶವಿನ್ಯಾಸದಲ್ಲಿಯೂ ಅದೇ ರೀತಿಯಾದ ಏರ್ಪಾಡು. ಮೊದಲ ವರ್ಷ ಎಣ್ಣೆಯಿಲ್ಲದೆ ತಲೆಯ ಕೂದಲು ಗಂಟುಹಾಕಿಕೊಳ್ಳಬೇಕು. ಮೂರನೆಯ ವರ್ಷ ಜಾತಿ ಪದ್ಧತಿಯ ಪ್ರಕಾರ ಮುಡಿಕಟ್ಟುವಳು. ನಾಲ್ಕನೆಯವರ್ಷ ಹೊಸ ಕೂದಲು, ಅದಕ್ಕೆ ಸುಗಂಧವಾದ ತೈಲಗಳನ್ನು ಹಚ್ಚಿಸಿ ಸೊಗಸಾಗಿ ಬಾಚಿ ಕಟ್ಟಿಕೊಂಡಿರ ಬೇಕು. ಐದನೆಯ ವರ್ಷ ಅವಳಿಗೆ ಇಷ್ಟಬಂದಂತಿರಬಹುದು. ಆದರೆ ಪ್ರಫುಲ್ಲೆಯು ತಲೆಗೆ ಬಾಚಣಿಗೆಯನ್ನು ಹಾಕುತ್ತಿರಲಿಲ್ಲ.

ಮೊದಲವರ್ಷ ಸಾಮಾನ್ಯವಾದ ಹಾಸಿಗೆ. ಎರಡನೆಯ ವರ್ಷ ಹುಲ್ಲಿನ ಹಾಸಿಗೆ. ಮೂರನೆಯ ವರ್ಷ ಭೂಶಯ್ಯೆ. ನಾಲ್ಕನೆಯ ವರ್ಷ ಸೊಗಸಾದ

ಸುಪ್ಪತ್ತಿಗೆ. ಐದನೆಯ ವರ್ಷ ಬೇಕಾದ ಹಾಸಿಗೆಯಮೇಲೆ ಮಲಗಬಹುದು. ಆದರೆ ಪ್ರಫುಲ್ಲೆಯು ನಿದ್ರೆಬಂದೆಡೆ ಮಲಗುವಳು.

ಮೊದಲನೆಯ ವರ್ಷ ಮೂರುಯಾಮ ನಿದ್ರೆ. ಎರಡನೆಯ ವರ್ಷ ಎರಡು ಯಾಮ. ಮೂರನೆಯ ವರ್ಷ ಎರಡುದಿನಕ್ಕೊಮ್ಮೆ ಜಾಗರಣೆ. ನಾಲ್ಕನೆಯ ವರ್ಷ ಜಂಪುಬರುತ್ತಲೇ ಮಲಗಬೇಕು. ಐದನೆಯ ವರ್ಷ ಇಷ್ಟಬಂದಾಗ ಮಲಗಬಹುದು. ಆದರೆ ಪ್ರಫುಲ್ಲೆಯು ರಾತ್ರಿಯೆಲ್ಲಾ ನಿದ್ರೆಯಿಲ್ಲದೆ ಜಾಗರಣೆ ಮಾಡುತ್ತ ಪುಸ್ತಕಗಳನ್ನು ಬರೆಯುವಳು.

ಪ್ರಫುಲ್ಲೆಯು ಗಾಳಿ ನೀರು ಬಿಸಿಲು ಬೆಂಕಿ ಚಳಿ ಶೆಕೆ ಸಂಬಂಧವಾಗಿಯೂ ಶರೀರವನ್ನು ಸಹಿಷ್ಣುವಾಗಿ (Enduring) ಮಾಡಲಾರಂಭಿಸಿದಳು. ಭವಾನಿ ಠಾಕೂರನು ಪ್ರಫುಲ್ಲೆಗೆ ಮತ್ತೊಂದು ವಿದ್ಯೆಯನ್ನು ಕಲಿಯಬೇಕೆಂದು ಹೇಳಿದನು. ಅದನ್ನು ಹೇಳುವುದಕ್ಕೆ ನಮಗೆ ನಾಚಿಕೆಯಾಗುತ್ತದೆ. ಆದರೆ ಹೇಳದಿದ್ದರೆ ಕಥೆಯು ಪೂರೈಸುವುದಿಲ್ಲ. ಭವಾನಿಠಾಕೂರನು ಎರಡನೆಯ ವರ್ಷ ಸಾಮು ಕಾಳಗ ಮುಂತಾದ ದೇಹಕ್ಕೆ ಶಕ್ತಿಬರುವ ವ್ಯಾಯಾಮಗಳನ್ನು (Bodily exercises) ಮಾಡಬೇಕೆಂದು ಹೇಳಿದನು, ಪ್ರಫುಲ್ಲೆಯು ಲಜ್ಜಿತೆಯಾಗಿ ಮುಖತಗ್ಗಿಸಿಕೊಂಡ 'ಅದನ್ನು ಬಿಟ್ಟು ಮತ್ತಾವದನ್ನಾದರೂ ಮಾಡುವೆನು' ಎಂದಳು.

ಭ—ಇದಾಗದಿದ್ದರೆ ವಿದ್ಯೆಯು ಸಾಂಗವಾಗುವುದಿಲ್ಲ.

ಪ್ರ—ಅದೇನು ಠಾಕೂರ! ಹೆಂಗಸರು ಕಾಳಗ ಸಾಮು ಕಲಿತೇನನ್ನು ಮಾಡಬೇಕು?

ಭ—ಇಂದ್ರಿಯಗಳನ್ನು ಜಯಿಸುವುದಕ್ಕಾದು ಬೇಕು. ಶರೀರವು ದುರ್ಬಲವಾಗಿದ್ದರೆ ಇಂದ್ರಿಯಗಳನ್ನು ಜಯಿಸುವುದಕ್ಕಾಗುವುದಿಲ್ಲ. ವ್ಯಾಯಾಮ ಹೊರ್ತು ಜನರು ಜಿತೇಂದ್ರಿಯರಾಗುವುದಿಲ್ಲ.

ಪ್ರ—ನನಗಾ ಸಾಮು ಮುಂತಾದುವುಗಳನ್ನು ಕಲಿಸುವವರಾರು ? ಗಂಡಸರಲ್ಲದನ್ನು ಕಲಿಯಲಾರೆನು.

ಭ—ನಿಶಿಯು ಕಲಿಸುವಳು. ನಿಶಿಯು ಚಿಕ್ಕವಯಸ್ಸಿನಲ್ಲಿ ಕಳವಾದವಳು. ನಾನವಳನ್ನು ಬಲಿಷ್ಠರಾದ ಹುಡುಗರ ಹುಡುಗಿಯರ ಜತೆಯನ್ನು ಬಿಟ್ಟು ಬೇರೆ ಇಟ್ಟಿರಲಿಲ್ಲ.* ಅವರೊಂದಿಗೆ ಇದ್ದು ಅವಳು ಬಾಲ್ಯಕಾಲದಲ್ಲಿಯೇ ವ್ಯಾಯಾಮಗಳನ್ನೆಲ್ಲಾ ಕಲಿತಿದ್ದಾಳೆ. ನಾನದನ್ನೆಲ್ಲಾ ಯೋಚಿಸಿ ನಿಶಿಯನ್ನು ನಿನಗೆ ಸಂಗಾತಿಯಾಗಿರಲು ಕಳುಹಿದೆನು.

ಪ್ರಫುಲ್ಲೆಯು ನಾಲ್ಕುವರ್ಷಗಳ ಸಾಮು ಮುಂತಾದ ವ್ಯಾಯಾಮಗಳನ್ನು ಅಭ್ಯಾಸ ಮಾಡಿದಳು.

---

* ಗವರ್ನರ್ ಜನರಲಾಗಿದ್ದ ವಾರನ್ ಹೇಸ್ಟಿಂಗ್ಸ್ ಅದನ್ನು ಕುರಿತು ಸ್ವಂತವಾಗಿ ಬರೆದಿದ್ದಾನೆ.

ಮೊದಲ ವರ್ಷ ಭವಾನಿಠಾಕೂರನು ಪ್ರಫುಲ್ಲೆಯ ಮನೆಗೆ ಪುರುಷರಾರೂ ಹೋಗಕೂಡದೆಂತಲೂ, ಅವಳೂ ಮನೆಯನ್ನು ಬಿಟ್ಟು ಹೊರಗೆ ಬರಕೂಡ ದೆಂತಲೂ ಅಪ್ಪಣೆಯನ್ನು ಮಾಡಿದನು. ಎರಡನೆಯ ವರ್ಷ ಅವಳು ಗಂಡಸರ ಸಂಗಡ ಮಾತಾಡುವುದಕ್ಕೆ ಅಡ್ಡಿಯಿರಲಿಲ್ಲ. ಆದರೆ ಅವಳ ಮನೆಯೊಳಗೆ ಗಂಡ ಸರು ಹೋಗಕೂಡದು. ಮೂರನೆಯ ವರ್ಷದಲ್ಲಿ ಪ್ರಫುಲ್ಲೆಯು ತಲೆಯ ಮುಡಿ ಯನ್ನು ಕೊಟ್ಟದ್ದಾಗ ಭವಾನಿಠಾಕೂರನು ಯೌವನಸ್ಥರಾದ ಯುವಕರನ್ನು ಸಂಗಡ ಕರೆದುಕೊಂಡು ಬರುವನು. ಪ್ರಫುಲ್ಲೆಯು ತಲೆಯನ್ನು ಬೊಗ್ಗಿಸಿಕೊಂಡು ಕೂತು ಆ ಯುವಕರ ಸಂಗಡ ಶಾಸ್ತ್ರಸಂಬಂಧವಾದ ತರ್ಕವನ್ನು ಮಾಡುವಳು. ನಾಲ್ಕನೆಯ ವರ್ಷ ಬಲಿಷ್ಠರಾದ ಜಟ್ಟಿಗಳೊಂದಿಗೆ ಪಂಥ್ಯವನ್ನು ಕಟ್ಟಿ ಸಾಮು ಮುಂತಾದ ವ್ಯಾಯಾಮಗಳನ್ನು ಪ್ರದರ್ಶನ ಮಾಡುವಳು. ಐದನೆಯ ವರ್ಷ ಅವಳಿಗಾವ ನಿರ್ಬಂಧವೂ ಇರಲಿಲ್ಲ. ಅವಶ್ಯಕವಿದ್ದರೆ ಪುರುಷನ ಸಂಗಡ ಮಾತಾಡುವಳು. ನಿಷ್ಪ್ರಯೋಜನವಾಗಿ ಗಂಡಸಿನ ಸಂಗಡ ಮಾತಾಡುತ್ತಿರ ಲಿಲ್ಲ. ಪುರುಷನ ಸಂಗಡ ಮಾತಾಡುವಾಗ ಅವನಲ್ಲಿ ತನ್ನ ಪುತ್ರಭಾವವನ್ನಿಟ್ಟು ಮಾತಾಡುವಳು.

ಈ ಪ್ರಕಾರ ಭವಾನಿಠಾಕೂರನು ನಾನಾವಿಧವಾದ ಪರೀಕ್ಷೆಗಳಿಂದಲೂ ಅಭ್ಯಾಸಗಳಿಂದಲೂ ಅತುಲೈಶ್ವರ್ಯಕ್ಕೆ ಅಧಿಕಾರಿಣಿಯಾದಾ ಪ್ರಫುಲ್ಲೆಯನ್ನು ಐಶ್ವರ್ಯವನ್ನನುಭೋಗಿಸಲು ಯೋಗ್ಯ ಪಾತ್ರಿಯನ್ನಾಗಿ ಮಾಡಿದನು. ಐದು ವರ್ಷಕ್ಕೆ ವಿದ್ಯಾಭ್ಯಾಸಗಳೆಲ್ಲಾ ಸಾಂಗವಾಗಿ ಪೂರೈಸಿದುವು.

ಪ್ರಫುಲ್ಲೆಯು ಏಕಾದಶಿ† ದಿನ ಅವಲಕ್ಕಿಯನ್ನು ತಿನ್ನುವ ವಿಷಯದಲ್ಲಿ ಹೊರ್ತು ಮಿಕ್ಕ ಎಲ್ಲಾ ವಿಷಯಗಳಲ್ಲಿಯೂ ಭವಾನಿಠಾಕೂರನಿಗೆ ವಿಧೇಯಳಾ ಗಿದ್ದಳು. ಆದರೆ ಸ್ವಂತ ಪರಿಚಯವನ್ನು ಅವನಿಗೆ ಹೇಳಲಿಲ್ಲ. ಅವನು ಕೇಳಿದರೂ ಆದರಿಂದವನಿಗೇನೂ ಗೊತ್ತಾಗಲಿಲ್ಲ.

---

## ಹದಿನಾರನೆಯ ಪರಿಚ್ಛೇದ.

ಐದು ವರ್ಷದಲ್ಲಿ ಅಧ್ಯಾಪನವನ್ನು ಪೂರೈಸಿ ಭವಾನಿಠಾಕೂರನು ಪ್ರಫುಲ್ಲೆ ಯನ್ನು ಕುರಿತು: 'ನಿನ್ನ ವಿದ್ಯಾಭ್ಯಾಸವು ಪ್ರಾರಂಭಿಸಿ ಐದು ವರ್ಷ ವಾಯಿತು. ನಿನ್ನ ವಶವಾಗಿರುವ ಧನವನ್ನು ನಿನ್ನಿಷ್ಟಬಂದಂತೆ ವಿನಿಯೋಗಿಸ ಬಹುದು. ನಾನದಕ್ಕೆ ನಿಷೇಧಿಸುವುದಿಲ್ಲ. ಕೇಳಿದರೆ ಬುದ್ಧಿವಾದವನ್ನು ಕೊಡು ವೆನು; ನಿನಗಿಷ್ಟವಿದ್ದರೆ ಅದನ್ನು ಕೇಳಬಹುದು, ಇಲ್ಲವಾದರೆ ಬಿಡಬಹುದು.

† ಸುಮಂಗಲಿಯರಾದ ಪತಿವ್ರತೆಗಳು ಏಕಾದಶಿಯದಿನ ಗಂಡನ ಅಪ್ಪಣೆಯಿಲ್ಲದೆ ಉಪವಾಸವನ್ನು ಮಾಡುವುದು ಶಾಸ್ತ್ರನಿಷಿದ್ಧ.

ನಾನಿನ್ನು ಮುಂದಕ್ಕೆ ನಿನಗೆ ಅನ್ನ ಬಟ್ಟೆಯನ್ನೊದಗಿಸೆನು ; ನೀನದನ್ನು ನೋಡಿ ಕೊಳ್ಳಬೇಕು. ಕೆಲವು ಬುದ್ಧಿವಾದಗಳನ್ನು ಹೇಳುವೆನು. ಅದನ್ನು ಹಿಂದೆ ಅನೇಕ ತಡವೆ ಹೇಳಿದ್ದೆನು. ಮತ್ತೊಮ್ಮೆ ಹೇಳುವೆನು. ನೀನೀಗಾವ ಮಾರ್ಗ ವನ್ನವಲಂಬಿಸುವೆ ?' ಎಂದನು.

ಪ್ರಫುಲ್ಲ—ಕರ್ಮವನ್ನು (ಕಾರ್ಯವನ್ನು) ಮಾಡುವೆನು, ಜ್ಞಾನವು ನನ್ನಂತಹ ಅಸಿದ್ಧಿಗೆ, ಎಂದರೆ ಜ್ಞಾನದಿಂದ ಸಿದ್ಧಿಯನ್ನು ಹೊಂದದವಳಿಗೆ ಉಂಟಾಗ ತಕ್ಕುದಲ್ಲ.

ಭವಾನಿ—ಬಹಳ ಚೆನ್ನಾಗಿ ಹೇಳಿದೆ, ಕೇಳಿ ಸುಖಿಯಾದೆನು. ಆದರೆ ಕರ್ಮವನ್ನು ಅಸಕ್ತೆಯಾಗಿ, ಎಂದರೆ, ಕರ್ಮದ ಫಲದಲ್ಲಾಶೆಯಿಲ್ಲದೆ ಮಾಡ ಬೇಕು. ಭಗವಂತನಾದ ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ ವಚನವು ಜ್ಞಾಪಕ ವಿದೆಯಷ್ಟೆ :

ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ |
ಅಸಕ್ತೋಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ||*

ಈಗಾ ಅನಾಸಕ್ತಿ, ಎಂದರೆ, ಏನೆಂಬುದು ಗೊತ್ತಿದೆಯಷ್ಟೆ. ಅನಾಸಕ್ತಿಗೆ ಲಕ್ಷಣಗಳಾವುವೆಂದರೆ :—ಮೊದಲನೆಯ ಲಕ್ಷಣ, ಇಂದ್ರಿಯ ಸಂಯಮ, ಎಂದರೆ ಇಂದ್ರಿಯುವನ್ನು ವಶದಲ್ಲಿಟ್ಟುಕೊಳ್ಳುವುದು. ಐದುವರ್ಷಗಳಿಂದದನ್ನು ಅಭ್ಯಾಸ ಮಾಡಿಸಿರುವುದರಿಂದ ಅದನ್ನು ಕುರಿತು ಪುನಃ ಹೇಳಬೇಕಾದುದಿಲ್ಲ. ಎರಡನೆಯ ಲಕ್ಷಣ, ನಿರಹಂಕಾರ. ನಿರಹಂಕಾರ ಹೊರ್ತು ಧರ್ಮಾಚರಣೆಯು ನಡಿಯುವು

---

* ಶ್ರೀಮದ್ಭಗವದ್ಗೀತಾ, ೩ ನೇ ಅಧ್ಯಾಯ, ೧೯ನೆಯ ಶ್ಲೋಕ :—ಅದಕ್ಕೆ ಶ್ರೀಶಂಕರಾಚಾರ್ಯರು ರಾಮಾನುಜಾಚಾರ್ಯರು, ಶ್ರೀಧರ, ಬಲದೇವ, ಹನುಮಾನ್, ವಿಶ್ವನಾಥ, ನೀಲಕಂಠ ಮುಂತಾದವರು ಮಾಡಿರುವ ವ್ಯಾಖ್ಯಾನದ ತಾತ್ಪರ್ಯವೇನೆಂದರೆ :—

ಆರು ಹಿಂದಿನ ಶ್ಲೋಕಗಳಲ್ಲಿ ಉಕ್ತವಾರುವಂತೆ ಜ್ಞಾನಿಗಳಾಗಿದ್ದಾರೋ, ಅಂತಹವರಿಗೆ ಕರ್ಮದ ಆವಶ್ಯಕತೆಯಿಲ್ಲ. ನೀನು ಅಂತಹ ಜ್ಞಾನಿಯಲ್ಲ, ನೀನು ಕರ್ಮಾಧಿಕಾರಿಯಾದ ಮುಮುಕ್ಷುವಾಗಿ ಮಾತ್ರ ಇರುತ್ತಿ. ಆದಕಾರಣ ಫಲದಲ್ಲಿ ಆಶಾಶೂನ್ಯನಾಗಿ ಕರ್ಮವನ್ನು ಅನುಷ್ಠಾನಮಾಡುವುದು ನಿನಗೆ ಕೇವಲ ಆವಶ್ಯಕ. ಕರ್ಮವನ್ನು ಆವಶ್ಯಕವಾಗಿ ಮಾಡತಕ್ಕುದುದೆಂದು ತಿಳಿದು ಸರ್ವದಾ ಅದನ್ನು ಮಾಡುತ್ತಿರಬೇಕು. ಇಷ್ಟಬಂದಾಗ ಮಾಡುವುದೂ ಬಿಡುವುದೂ ಆದರೆ ನಡೆಯುವುದಿಲ್ಲ. "ತಮೇತಂ ವೇದಾನುವಚನೇನ" ಎಂಬ ಮುಂತಾದ ಶ್ರುತಿವಚನಗಳ ಮರ್ಮಾನುಸಾರವಾಗಿ ಜ್ಞಾನಕ್ಕೆ ಸಾಧನಭೂತವಾದ ನಿತ್ಯನೈಮಿತ್ತಿಕ ಕರ್ಮವನ್ನು ಶಾಸ್ತ್ರದಲ್ಲಿ ವಿಹಿತವಾದ ಪದ್ಧತಿಯ ಕ್ರಮಾನುಸಾರವಾಗಿ ಅನುಷ್ಠಾನಮಾಡತಕ್ಕುದು. ಫಲದಲ್ಲಿ ಆಶೆಯಿಲ್ಲದ ಭಾವದಿಂದ ಕೇವಲ ಭಗವದುದ್ದೇಶವಾಗಿ ಕರ್ಮಾನುಷ್ಠಾನ ಮಾಡುತ್ತಿದ್ದರೆ ಕ್ರಮವಾಗಿ ಚಿತ್ತಶುದ್ಧಿಯಾಗಿ ಅದರಿಂದುಂಟಾಗ ತಕ್ಕ ಜ್ಞಾನಲಾಭವುಂಟಾದರೆ ಪುರುಷನು ಮೋಕ್ಷವನ್ನು ಹೊಂದುತ್ತಾನೆ. ಹೀಗೆ ಕರ್ಮ ಪರಾಯಣನಾದ ಪುರುಷನೇ ಸಾಧು ಪುರುಷ.

ದಿಲ್ಲ. ಭಗವಂತನು ಹೇಳಿದ್ದಾನೇನಂದರೆ :—

ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।
ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿಮನ್ಯತೇ ॥*

ಇಂದ್ರಿಯಾದಿಗಳ ದ್ವಾರಾ ಮಾಡಲ್ಪಡುವ ಕರ್ಮಗಳನ್ನೆಲ್ಲಾ ನಾನು ಮಾಡಿದೆನೆಂಬ ಜ್ಞಾನಕ್ಕೆ ಅಹಂಕಾರವೆಂದು ಹೆಸರು. ಆವ ಕೆಲಸವನ್ನು ಮಾಡಿದರೂ ಅದು ನಿನ್ನ ಗುಣದಿಂದಾದುದೆಂದು ತಿಳಿಯಬೇಡ. ಹಾಗೆ ತಿಳಿದರೆ ಪುಣ್ಯಕರ್ಮವು ಆಕರ್ಮತ್ವವನ್ನು ಹೊಂದುತ್ತದೆ. ಮೂರನೆಯ ಲಕ್ಷಣವೇನೆಂದರೆ; ಎಲ್ಲಾ ಕರ್ಮದ ಫಲವನ್ನೂ ಶ್ರೀ ಕೃಷ್ಣನಲ್ಲಿ ಅರ್ಪಣೆ ಮಾಡಬೇಕು. ಭಗವಾನ್ ಶ್ರೀ ಕೃಷ್ಣನು ಹೇಳಿದ್ದಾನೇನೆಂದರೆ :—

ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವಮದರ್ಪಣಂ ॥

---

* ಶ್ರೀಮದ್ಭಗವದ್ಗೀತಾ, ೩ನೇ ಅಧ್ಯಾಯ, ೨೭ ನೇ ಶ್ಲೋಕ, ಅನ್ವಯ—ಪ್ರಕೃತೇಃ (ಸತ್ವರಜಸ್ತಮೋಗುಣಾತ್ಮಿಕಾಯಾಃ ಮಾಯಾಯಾಃ) ಗುಣೈಃ (ಕಾರ್ಯಕಾರಣರೂಪೈಃ ಇಂದ್ರಿಯೈಃ) ಕ್ರಿಯಮಾಣಾನಿ (ಸೇವ್ಯಮಾನಾನಿ) ಕರ್ಮಾಣಿ (ಲೌಕಿಕಾನಿ ವೈದಿಕಾನಿ) ಸರ್ವಶಃ (ಸರ್ವಪ್ರಕಾರೇಣ) ಅಹಂಕಾರ ವಿಮೂಢಾತ್ಮಾ (ಆತ್ಮಾಭಿಮಾನಿ) ಅಹಂಕರ್ತಾ (ಅಹಮೇವ ಕರೋಮಿ) ಇತಿ ಮನ್ಯತೆ—ಇದಕ್ಕೆ ಶ್ರೀ ಶಂಕರಾಚಾರ್ಯರು, ರಾಮಾನುಜಾಚಾರ್ಯರು, ಹನುಮಾನ್, ಆನಂದಗಿರಿ, ಶ್ರೀಧರ, ಬಲದೇವ, ಮಧುಸೂಧನ ಮುಂತಾದವರು ಭಾಷ್ಯ ಮಾಡಿರುವುದರ ತಾತ್ಪರ್ಯವೇನೆಂದರೆ :—ಅಜ್ಞರಾದವರು ಕರ್ಮದಲ್ಲಿ ಅತಿಶಯವಾಗಿ ಆಸಕ್ತರಾಗುವದೇಕೆ? ಅದಕ್ಕೆ ಉತ್ತರ ಸ್ವರೂಪವಾಗಿ ಶ್ರೀಕೃಷ್ಣನು ಹೇಳುತ್ತಾನೆ :— ಹೇ ಅರ್ಜುನ! ಅಜ್ಞರಾದವರೂ ವಿದ್ವಾಂಸರೂ ಮಾಡುವ ಕರ್ಮಾನುಷ್ಠಾನಗಳು ಸಮಾನವಾದುದಾಗಿ ಕಂಡುಬಂದರೂ ಅದಕ್ಕೆ ಪರಸ್ಪರ ಭೇದವುಂಟು; ಹೇಳುತ್ತೇನೆ ಕೇಳು; ಸತ್ವರಜಸ್ತಮೋಗುಣಗಳ ಸಾಮ್ಯಾವಸ್ಥೆಯ ಹೆಸರು, ಪ್ರಕೃತಿ (ಭಗವದ್ಗೀತಾ ತಾತ್ಪರ್ಯಸಂಗ್ರಹವೆಂಬ ಗ್ರಂಥದಲ್ಲಿ ೨ನೇ ಅಧ್ಯಾಯ, ೧೧ನೇ ಶ್ಲೋಕದ ಪ್ರಕರಣದಲ್ಲಿ ಇದು ವಿವರವಾಗಿ ಹೇಳಲ್ಪಟ್ಟದೆ.) ಆ ಗುಣಮಯಿ ಯಾದ ಪರಮೇಶ್ವರಿಯಾದ ಶಕ್ತಿರೂಪವಾದ ಪ್ರಕೃತಿಯ ಗುಣಗಳ ದ್ವಾರಾ (ಎಂದರೆ, ಇಂದ್ರಿಯ ದ್ವಾರಾ) ಲೌಕಿಕ ವೈದಿಕ ಕ್ರಿಯೆಗಳೆಲ್ಲಾ ಹುಟ್ಟುತ್ತವೆ; ಅಜ್ಞಾನಿಯಾದವನು, ಅಹಂಕಾರದಿಂದ ವಿಮೂಢನಾಗಿ, ಎಂದರೆ, ಪ್ರಕೃತಿಯ ಗುಣದಿಂದ ಹುಟ್ಟಿದ ಕ್ರಿಯಾಕಲಾಪಗಳಲ್ಲಿ ಆತ್ಮಕರ್ತೃತ್ವವನ್ನು ಆರೋಪಿಸಿ ತನ್ನ ಶುದ್ಧವಾದ ಬುದ್ಧಿಯಿಂದ ಮುಕ್ತನಾಗಬೇಕಾದ ಸ್ವಭಾವ ವಿಷಯವನ್ನು ಮರೆತು ಉಕ್ತವಾದ ಪ್ರಾಕೃತಿಕವಾದ ಗುಣಗಳಿಂದುಂಟಾದ ಕರ್ಮಗಳಿಗೆ ತಾನೇ ಕರ್ತನೆಂದುಕೊಳ್ಳುತ್ತಾನೆ. ಆದುಕಾರಣ ಅಹಂಕಾರದಿಂದ ಅಭಿಭೂತನಾಗಿ ಆತ್ಮವಿಸ್ಮೃತನಾದ ಅಜ್ಞಪುರುಷನು ವೈದಿಕಲೌಕಿಕ ಕರ್ಮಗಳಲ್ಲಿ ಆಸಕ್ತಿಯುಳ್ಳವನಾಗುತ್ತಾನೆ. ಅನುಷ್ಠಿತವಾದ ಕರ್ಮದಲ್ಲಿ ಅಂಗಹೀನನಾದರೆ ಅವನಿಗೆ ಹೃದಯ ದೌರ್ಬಲ್ಯವೂ ನಾನಾವಿಧವಾದ ಆಶಂಕೆಯೂ ಹುಟ್ಟಿ ಕರ್ಮವನ್ನು ಸಾಂಗವಾಗಿ ಪೂರ್ಣ ಮಾಡಲು ಪ್ರಯತ್ನಿಸುವನು.

(ಅರ್ಥ—ಹೇ ಅರ್ಜುನ! ಆವ ಕರ್ಮಾನುಷ್ಠಾನವನ್ನು ಮಾಡುತ್ತೀಯೋ, ಆವುದನ್ನು ಭೋಜನಮಾಡುತ್ತೀಯೋ, ಆವುದನ್ನು ಹೋಮ ಮಾಡುತ್ತೀಯೋ ಅವುಗಳನ್ನೆಲ್ಲಾ ನನಗೆ ಸಮರ್ಪಣೆಮಾಡು. * (೯ ನೇ ಅ. ೨೭.)

ಈಗ ಹೇಳು, ನೋಡೋಣ, ನೀನಾ ಧನರಾಶಿಯನ್ನಿಟ್ಟುಕೊಂಡರೆ ಏನನ್ನು ಮಾಡುವೆ?

ಪ್ರಫುಲ್ಲ—ಆವಾಗ ಕರ್ಮಗಳನ್ನೆಲ್ಲಾ ಶ್ರೀಕೃಷ್ಣನಲ್ಲಿ ಅರ್ಪಣೆ ಮಾಡಿದೆನೋ ಆಗಲೇ ಆ ಧನವನ್ನೆಲ್ಲಾ ಶ್ರೀ ಕೃಷ್ಣನಿಗೇವೇ ಅರ್ಪಣೆ ಮಾಡಿಬಿಟ್ಟೆನು.

ಭ—ಎಲ್ಲಾ ಧನವನ್ನೂ?

ಪ್ರ—ಎಲ್ಲವನ್ನು.

ಭ—ಕೇವಲ ಹಾಗೆ ಮಾಡಿದರೆ ಕರ್ಮವು ಅನಾಸಕ್ತವಾಗುವುದಿಲ್ಲ. ನಿನ್ನ ಜೀವನ ನಿರ್ವಾಹಕ್ಕೆ ಸಲವಾಗಿ ಬೇರೆ ಪ್ರಯತ್ನದಿಂದ ಶ್ರಮಿಸಿ ಸಂಪಾದಿಸಿಕೊಳ್ಳಬೇಕಾದರೆ ಆಸಕ್ತಿಯು ಹುಟ್ಟುವುದು. ಅದುಕಾರಣ ಭಿಕ್ಷೆಯನ್ನಾದರೂ ಮಾಡಬೇಕಾಗುವುದು; ಹಾಗಿಲ್ಲದಿದ್ದರಾ ಧನದಿಂದಲೇ ದೇಹರಕ್ಷಣೆಯನ್ನು ಮಾಡಿಕೊಳ್ಳಬೇಕಾಗುವುದು. ಭಿಕ್ಷಾವೃತ್ತಿಯಲ್ಲಿಯೂ ಆಸಕ್ತಿಯುಂಟು. ಅದುಕಾರಣ ಆ ಧನದಿಂದಲೇ ದೇಹಧಾರಣೆ ಮಾಡಿಕೊಂಡು ಮಿಕ್ಕುದುದನೆಲ್ಲ ಶ್ರೀ ಕೃಷ್ಣನಿಗೆ ಅರ್ಪಣೆಮಾಡು. ಆದರೆ ಶ್ರೀ ಕಷ್ಣನಿಗಾ ಧನವನ್ನೆಲ್ಲಾ ತಲ್ಪಿಸುವ ಬಗೆ ಹೇಗೆ?

ಪ್ರ—ಅವನು ಸರ್ವಭೂತಗಳಲ್ಲಿಯೂ ಇದ್ದಾನೆಂದು ಓದಿ ತಿಳಿದುಕೊಂಡಿದ್ದೇನೆ. ಆದುದರಿಂದ ಸರ್ವರಿಗೂ ಆ ಧನವನ್ನು ಕೊಡಬೇಕು.

ಭ—ಸರಿ, ಸರಿ—ಒಳ್ಳೇಮಾತನ್ನು ಹೇಳಿದೆ. ಭಗವಾನ್ ಶ್ರೀ ಕೃಷ್ಣನೇ ಹೇಳಿದ್ದಾನೆ; ಏನೆಂದರೆ:—

ಯೋಮಾಂ ಪಶ್ಯತಿ ಸರ್ವತ್ರ ಸರ್ವಂಚ ಮಯಿಪಶ್ಯತಿ |
ತಸ್ಯಾಹಂ ನಪ್ರಣಶ್ಯಾಮಿ ಸಚಮೇನ ಪ್ರಣಶ್ಯತಿ ||
ಸರ್ವಭೂತಸ್ಥಿತಂ ಯೋಮಾಂ ಭಜತ್ಯೇಕತ್ವಮಾಸ್ಥಿತಃ ||
ಸರ್ವಥಾ ವರ್ತಮಾನೋಪಿ ಸಯೋಗೀ ಮಯಿವರ್ತತೇ ||
ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿಯೋರ್ಜುನ |
ಸುಖಂವಾ ಯದಿವಾ ದುಃಖಂ ಸಂಯೋಗೀ ಪರಮೋಮತಃ ||

(ಅರ್ಥ—ಆವ ಯೋಗಿಯು ಸರ್ವಭೂತಗಳಲ್ಲಿಯೂ ವಾಸುದೇವರೂಪಿಯಾದ ನನ್ನನ್ನು ನೋಡುವನೋ, ನನ್ನಲ್ಲಿಯೇ ಬ್ರಹ್ಮಾದಿಸ್ತಂಬಪರ್ಯಂತ ಎಲ್ಲಾ ಪ್ರಪಂಚಗಳನ್ನೂ ನೋಡುವನೋ, ಅಂತಹ ವಿವೇಕದೃಷ್ಟಿಸಂಪನ್ನನಾದ

* ಈ ಶ್ಲೋಕಕ್ಕೆ ಭಾಷ್ಯಕಾರರು ಮಾಡಿರುವ ವ್ಯಾಖ್ಯಾನಗಳ ವಿಶದವಾದ ತಾತ್ಪರ್ಯವನ್ನು ಇಲ್ಲಿ ತಿಳಿಸಲು ಅವಕಾಶವಿಲ್ಲ.

ಪುರುಷನಿಗೆ ನಾನಾವಾಗಲೂ ಅದೃಶ್ಯನಾಗುವುದಿಲ್ಲ; ಮತ್ತು ಅವನೂ ನನ್ನಿಂದ ಅದೃಶ್ಯನಾಗುವುದಿಲ್ಲ.

ಆವ ಯೋಗಿಯು ಸಕಲ ಭೂತಗಳಲ್ಲಿಯೂ ನಾನು ಅಧಿಷ್ಠಿತನಾಗಿದ್ದೇನೆಂದುತಿಳಿದು ಸರ್ವ ಭೂತಗಳಲ್ಲಿಯೂ ಅಭೇದಭಾವದಿಂದ ನನ್ನನ್ನು ಭಜನೆ ಮಾಡುತ್ತಾನೋ, ವಿವಿಧವಾದ, ವಿಷಯ ಸಂಬಂಧವಾದ ವ್ಯಾಪಾರಗಳಲ್ಲಿ ನಿಯುಕ್ತನಾಗಿದ್ದರೂ ಅಂತಹವನಾವಾಗಲೂ ನನ್ನಲ್ಲಿಯೇ ಇರುವನಾಗುವನು.

ಹೇ ಅರ್ಜುನ, ಅವನು ಸರ್ವಭೂತವನ್ನೂ ತನ್ನ ಹಾಗೆ ಮತ್ತು ಸರ್ವಭೂತಗಳ ಸುಖದುಃಖಗಳೂ ತನ್ನ ಸ್ವಂತ ಸುಖದುಃಖಗಳ ಹಾಗೆ ಸಮಾನವಾದುವು ವೆಂದು ಅನುಭವಮಾಡುವನೋ ಅಂತಹ ಯೋಗಿಯೇ ಸರ್ವೋತ್ಕೃಷ್ಟನು, ಇದೆನ್ನ ಅಭಿಮತ *)

ಆದರಾ ಸರ್ವಭೂತಗಳಿಗೂ ದಾನಮಾಡುವುದು ಬಹಳ ಕಷ್ಟ. ಅವಕ್ಕೆ ಬಹಳ ಶ್ರಮವು ಆವಶ್ಯಕ. ನಿನ್ನಿಂದದು ಸಾಧ್ಯವೆ?

ಪ್ರಫುಲ್ಲ—ಇಷ್ಟುದಿನ ನಾನು ಕಲಿತುದುದೇನು?

ಭವಾನಿ—ಆ ಕಷ್ಟದ ಮಾತನ್ನು ಹೇಳುವುದಿಲ್ಲ. ಕಷ್ಟವನ್ನೇನೋ ನೀನು ಸಹಿಸಬಲ್ಲೆ. ಆದರೆ ಒಂದೊಂದು ತಡವೆ ಅಂಗಡಿಯನ್ನು ಹರಡಬೇಕಾಗುವುದು. ಅದಕ್ಕೆ ವೇಷವಿನ್ಯಾಸಗಳು ಬೇಕು. ಸ್ವಲ್ಪ ಭೋಗ ವಿಲಾಸಗಳೂ ಬೇಕು, ಒಂದೊಂದು ತಡವೆ ಅತಿ ಜಂಭವೂ ಬೇಕು. ಅದೆಲ್ಲಾ ಬಹಳ ಕಷ್ಟ. ನಿನ್ನಿಂದ ದಾದೀತೆ?

ಪ್ರ—ಅದೆಲ್ಲಾ ಎಂತಹದು?

ಭ—ಕೇಳು, ಹೇಳ್ತುತ್ತೇನೆ. ನಾನೇನೋ ದರೋಡೆ ಡಕಾಯಿತಿಗಳನ್ನು ಮಾಡುತ್ತೇನೆ. ಮೊದಲೇ ಹೇಳಿದ್ದೆನಷ್ಟೆ?

ಪ್ರ—ನನ್ನಲ್ಲಿ ಶ್ರೀಕೃಷ್ಣನ ಧನವಿದೆಯಷ್ಟೆ. ಅದರಲ್ಲಿ ಕೆಲವು ಅಂಶವು ನಿಮ್ಮಲಿರಲಿ. ಆ ಧನವನ್ನಿಟ್ಟುಕೊಂಡು ಧರ್ಮಾಚರಣೆಯನ್ನು ಮಾಡಿ. ದುಷ್ಕರ್ಮಗಳನ್ನು ಬಿಟ್ಟುಬಿಡಿ.

ಭ—ದನದಿಂದ ನನಗೇನೂ ಪ್ರಯೋಜನವಿಲ್ಲ. ನನಗೆ ಯಥೇಷ್ಟ ಧನವುಂಟು. ನಾನು ಹಣಕ್ಕೆ ಸಲವಾಗಿ ಡಕಾಯಿತಿಗಳನ್ನು ಮಾಡುವುದಿಲ್ಲ.

ಪ್ರ—ಹಾಗಾದರೆ ಆವುದಕ್ಕೆ ಸಲವಾಗಿ?

ಭ—ನಾನು ರಾಜತ್ವವನ್ನು ಮಾಡುತ್ತೇನೆ.

ಪ್ರ—ದರೋಡೆ ಮಾಡುವುದು ಎಂತಹ ರಾಜತ್ವ?

ಭ—ಆರಕ್ಕೈಯಲ್ಲಿ ರಾಜದಂಡನೆ ಮಾಡುವ ಶಕ್ತಿಯುಂಟೋ ಅವನೇ

---

*ಶ್ರೀಮದ್ಭಗವದ್ಗೀತಾ, ೬ನೇ ಅಧ್ಯಾಯ, ೩೦, ೩೧, ೩೨, ನೇ ಶ್ಲೋಕಗಳು— ಇವುಗಳಿಗೆ ಒಬ್ಬೊಬ್ಬ ಭಾಷ್ಯಕಾರರೂ ಬೇರೆ ಬೇರೆ ಭಾಷ್ಯವನ್ನು ಮಾಡಿರುತ್ತಾರೆ.

ರಾಜ.

ಪ್ರ—ರಾಜನು ರಾಜದಂಡನೆಯನ್ನು ಮಾಡುತ್ತಾನೆ.

ಭ—ದೇಶಗಳಲ್ಲೀಗ ರಾಜನು ಇಲ್ಲ. ಮುಸಲ್ಮಾನರ ರಾಜತ್ವವು ಲೋಪವಾಗಿ ಹೋಯಿತು. ಇಂಗ್ಲೀಷರು ಈಗ ತಲೆಹಾಕುತಿದ್ದಾರೆ. ಅವರು ರಾಜ್ಯಶಾಸನದಲ್ಲಿ ಸಮರ್ಥರಾದರೂ ಶಾಸನ ಮಾಡುವುದಕ್ಕೆ ತೊಡಗಿಲ್ಲ. ನಾನು ದುಷ್ಟರ ದಮನಮಾಡಿ ಶಿಷ್ಟರ ಪಾಲನೆಯನ್ನು ಮಾಡುತ್ತೇನೆ.

ಪ್ರ—ದರೋಡೆಗಳನ್ನು ಮಾಡಿಯೆ ?

ಭ—ಕೇಳು, ತಿಳಿಯಹೇಳುತ್ತೇನೆ.

ಹೀಗೆಂದು ಹೇಳಿ ಭವಾನಿಠಾಕೂರನು ಹೇಳತೊಡಗಿದನು ; ಪ್ರಫುಲ್ಲೆಯು ಕೇಳಕೂತಳು.

ಭವಾನಿಠಾಕೂರನು ಕೇವಲ ಸಾರಯುಕ್ತವಾದ ವಾಕ್ಯಪರಂಪರೆಯ ವೈಖರಿಯಿಂದ ದೇಶದ ದುರವಸ್ಥೆಯನ್ನು ವರ್ಣಿಸಿ, ಜಮೀನುದಾರರ ಸಹಿಸಲಸದಳವಾದ ದೌರಾತ್ಮ್ಯವನ್ನು ವರ್ಣನೆಮಾಡಿ ಅವರ ಕಚ್ಚೇರಿಯ ಜನರು ಬಾಕಿದಾರರ ಮನೆಗಳನ್ನು ಲೂಟಮಾಡಿ ಹಣವನ್ನು ಮುಚ್ಚಿಟ್ಟದ್ದಾರೆಂದು ಮನೆಗಳನ್ನು ಮುರಿದು ನೆಲವನ್ನು ಅಗೆದು ಸಿಕ್ಕರೆ ಒಂದಕ್ಕೆ ನೂರರಷ್ಟು ತೆಗೆದುಕೊಂಡು ಹೋಗುವುದು, ಸಿಕ್ಕದಿದ್ದರೆ ಮನೆಯ ಜನರನ್ನು ಹೊಡಿದು ಘಾಸಿಮಾಡಿ ವಧೆಮಾಡುವುದು. ಮನೆಗೆಳನ್ನು ಸುಡುವುದು, ಸಾಲಿಗ್ರಾಮಗಳನ್ನು ಮಂದಾಸನಗಳಿಂದ ತೆಗೆದು ಬಿಸುಡುವುದು, ಮಕ್ಕಳನ್ನು ಕಾಲುಹಿಡಿದು ನೆಲಕ್ಕೆ ಹೊಡಿಯುವುದು, ಯುವಕರನ್ನು ತೊಲೆಗಳ ಕೆಳಗೆ ಮಲಗಿಸಿ ತುಳಿಸುವುದು, ಮುದುಕರ ಕಣ್ಣುಗಳನ್ನು ಕೀಳಿಸುವುದು, ಕುಂಬಾರ ಹುಳವನ್ನು ಚಿಪ್ಪುಗಳಲ್ಲಿ ಹಾಕಿ ಹೊಟ್ಟೆಗೆ ಕಟ್ಟುವುದು. ಯುವತಿಯರನ್ನು ಹಿಡಿದುಕೊಂಡೊಯ್ದು ಎಲ್ಲರ ಸಮಕ್ಷಮ ನಿರ್ವಾಣವಾಗಿ ನಿಲ್ಲಿಸಿ ಹೊಡೆದು, ಕಿವಿ, ಮೂಗು, ಮುಂತಾದುವುಗಳನ್ನು ಕುಯ್ಯುವುದು, ಇತರ ದುಸ್ಸಹವಾದ ಅವಮಾನಪಡಿಸುವುದು, ಹೀಗೆಲ್ಲಾ ಅತ್ಯಾಚಾರ, ದುರಾಚಾರ ನಡಿಯುತ್ತ ದೇಶವು ಅತ್ಯಂತವಾದ ದುರವಸ್ಥೆಗೆ ಬಂದು ಅರಾಜಿಕವಾಗಿ ಹೋಗಿದೆಯೆಂದು ಪ್ರಾಚೀನ ಕವಿಗಳು ವರ್ಣಿಸುವಂತೆ ಅತ್ಯುತ್ಪ್ರೇಕ್ಷೆಯಾಗಿ ವಾಗ್ವೈಖರೀ ವಿನ್ಯಾಸಗಳಿಂದ ವರ್ಣಿಸಿ, ಕಡೆಗೆ, 'ಅಂತಹ ದುರಾತ್ಮರಿಗೆ ನಾನು ದಂಡವಿಧಾನವನ್ನು ಮಾಡುತ್ತೇನೆ, ಅನಾಥರಾದ ದುರ್ಬಲರನ್ನು ರಕ್ಷಿಸುತ್ತೇನೆ; ಅದನ್ನು ಹೇಗೆ ಮಾಡುತ್ತೇನೋ ನೀನದನ್ನು ಸಂಗಡ ಇದ್ದು ಪ್ರತ್ಯಕ್ಷವಾಗಿ ನೋಡುವಿಯಾ ?' ಎಂದು ಕೇಳಿದನು.

ಪ್ರಜೆಗಳಾ ವಿಧವಾದ ದುಃಖ ಪರಂಪರೆಯನ್ನು ಕೇಳಿ ಪ್ರಫುಲ್ಲೆಯ ಹೃದಯವು ಕರಗಹೋಯಿತು. ಅವಳು ಭವಾನಿಠಾಕೂರನಿಗೆ ಸಹಸ್ರ ಸಹಸ್ರ ಧನವಾದಗಳನ್ನು ಮಾಡಿ, ಬಳಿಕ, 'ನಾನೂ ಸಂಗಡ ಬರುವೆನು, ಧನವನ್ನು ತೆಗೆದು

ಕೊಂಡು ಬಂದು ದುಃಖಿತರಾದವರಿಗೆ ಅದನ್ನೆಲ್ಲಾ ಕೊಟ್ಟು ಬರುವೆನು' ಎಂದು ಹೇಳಿದಳು.

ಭವಾನಿಠಾಕೂರ—ಆ ಕೆಲಸಗಳಿಗೆಲ್ಲಾ ಅಂಗಡಿಯನ್ನು ಹರಡಿ ವರ್ತಕ ತನದ ಚಾಕಚಕ್ಯಗಳು ಬೇಕೆಂದು ಹೇಳುತಿದ್ದೆನಷ್ಟೆ? ನನ್ನ ಸಂಗಡ ಬರಬೇಕಾದರೆ ನಿನ್ನೀ ಸನ್ಯಾಸಿಯ ವೇಷವು ಒದಗದು. ಸ್ವಲ್ಪ ಅಟ್ಟಹಾಸ ಜಂಭ ಮುಂತಾದವು ಬೇಕಾಗುವುದು.

ಪ್ರಫುಲ್ಲ— ಕರ್ಮವನ್ನು ಶ್ರೀ ಕೃಷ್ಣನಲ್ಲಿ ಅರ್ಪಣೆಮಾಡಿರುವೆನಾಗಿ ಅದೆಲ್ಲಾ ಅವನಿಗೆ ಸೇರಿದುದು. ನನ್ನದಲ್ಲ. ಆ ಕಾರ್ಯೋದ್ಧಾರಕ್ಕೆ ಸಲವಾಗಿ ಆವ ಸುಖ ದುಃಖಗಳನ್ನನುಭವಿಸಬೇಕಾದರೂ ಅನುಭವಿಸುವೆನು.

ಭವಾನಿಠಾಕೂರನ ಇಷ್ಟಾರ್ಥವು ಸಿದ್ಧಿಯಾಯಿತು. ಅವನು ದರೋಡೆ ಗಳನ್ನು ಮಾಡಲು ದಳಬದ್ಧನಾಗಿ ಹೊರಟ ವೇಳೆಗಳಲ್ಲೆಲ್ಲಾ ಪ್ರಫುಲ್ಲೆಯು ಕೊಡ ಕೊಡಗಳಲ್ಲಿ ಹಣವನ್ನು ಸಂಗಡ ಕೊಂಡೊಯ್ವಳು. ನಿಶಿಯೂ ಸಂಗಡ ಹೋಗು ವಳು.

ಭವಾನಿಠಾಕೂರನ ಅಭಿಸಂಧಿಯು ಹೇಗಾದರೂ ಇರಲಿ; ಅವನಿಗೊಂದು ಹರತವಾದ ಅಸ್ತ್ರವು ಆವಶ್ಯಕವಾಗಿದ್ದಿತು. ಅದುಕಾರಣ ಅವನು ಪ್ರಫುಲ್ಲೆ ಯನ್ನು ಐದು ವರ್ಷಕಾಲ ಸಾಣೆಗೆ ಹಾಕಿ ಹರತವಾದ ಅಸ್ತ್ರವನ್ನಾಗಿ ಮಾಡಿ ದನು. ಪುರುಷನಾಗಿದ್ದರೆ ಚೆನ್ನಾಗಿದ್ದಿತು. ಆದರೆ ಪ್ರಫುಲ್ಲೆಯ ಹಾಗೆ ನಾನಾ ಗುಣಗಳುಳ್ಳ ಪುರುಷನಾವನೂ ಇಲ್ಲ. ಧನದಾಶೆಯು ಬಹಳ ಕೆಟ್ಟುದು. ಆದರೆ ಭವಾನಿಠಾಕೂರನು ಒಂದು ತಪ್ಪು ಕೆಲಸವನ್ನು ಮಾಡಿದನು. ಪ್ರಫುಲ್ಲೆಯು ಏಕಾದಶಿ ದಿನ ಉಪವಾಸವನ್ನು ಮಾಡದೆ ಎಷ್ಟೊಂದು ಹೇಳಿದರೂ ಆರ ಮಾತನ್ನೂ ಕೇಳದೆ ಅವಲಕ್ಕಿಯನ್ನು ತಿಂದುಬಿಡುವಳು. ಅದರ ಒಳಮರ್ಮ ವನ್ನು ತಿಳಿದುಕೊಂಡಿದ್ದರೆ ಚೆನ್ನಾಗಿದ್ದಿತು. ಅದು ಹೇಗಾದರೂ ಆಗಲಿ. ಈಗ ನಾವು ಪ್ರಫುಲ್ಲೆಯನ್ನು ಮತ್ತೂ ಐದು ವರ್ಷಕಾಲ ಜೀವನತರಂಗದಲ್ಲಿ ತೇಲಿಬಿಟ್ಟು ಶ್ರಮಹಾರಿಯಾದ ನಿದ್ರೆಯಂಗೈಯುವೆವು. ಪ್ರಫುಲ್ಲೆಗೆ ಬೇರೆ ವಿದ್ಯಾಭ್ಯಾಸ ವಾಗುತ್ತದೆ. ಕರ್ಮಶಿಕ್ಷೆಯಾಗಿಲ್ಲ. ಐದು ವರ್ಷಕಾಲ ಅವಳಿಗೆ ಕರ್ಮಶಿಕ್ಷೆ ಯಾಗುತ್ತಿರಲಿ.

---

## ಎರಡನೆಯ ಭಾಗ

—— ೦ ——

# ಮೊದಲನೆಯ ಪರಿಚ್ಛೇದ

ಇದೂ ಐದು ಹತ್ತುವರ್ಷಕಾಲವು ಕಳೆದು ಹೋಯಿತು. ಆವದಿನ ಪ್ರಫುಲ್ಲೆಯನ್ನು ಬಹಿಷ್ಕೃತಿಯೆಂದು ಹರವಲ್ಲಭನು ಮನೆಯಿಂದ ಹೊರಡಿಸಿದನೋ ಆ ದಿನದ ಮೊದಲ್ಗೊಂಡು ಹತ್ತು ವರ್ಷವಾಗಿ ಹೋಯಿತು. ಆ ಹತ್ತು ವರ್ಷಗಳಲ್ಲಿ ಹರವಲ್ಲಭನ ಸಂಸಾರವು ಬದಲಾಯಿಸಿ ಬಹಳ ಹೀನಸ್ಥಿತಿಗೆ ಬಂದಿದ್ದಿತು. ದೇಶದ ದುರವಸ್ಥೆಯನ್ನು ಕುರಿತು ಮೊದಲು ಹೇಳಿದ್ದೇವೆ. ಸರಕಾರದ ಹುಟ್ಟುವಳಿಯ ಇಜಾರದಾರನಾದ ದೇವೀಸಿಂಹನ ಅತ್ಯಾಚಾರ; ಅದರ ಮೇಲೆ ಕಳ್ಳರ ಹಾವಳಿ. ಒತ್ತಡವೆ ಹರವಲ್ಲಭನ ತಾಲ್ಲೋಕಿನಿಂದ ಇರಸಾಲಿನ ಹಣವು ಬರುತ್ತಿದ್ದಿತು. ಕಳ್ಳರದನ್ನು ಲೂಟಮಾಡಿಕೊಂಡು ಹೋದರು. ಆ ವರ್ಷ ಕಂದಾಯದ ಹಣವು ಸಂದಾಯವಾಗಲಿಲ್ಲ. ದೇವೀಸಿಂಹನು ಅದಕ್ಕಾಗಿ ಹರವಲ್ಲಭನ ಒಂದು ತಾಲ್ಲೋಕನ್ನು ಹರಾಜು ಮಾಡಿಸಿ ಹಣವನ್ನು ತೆಗೆದುಕೊಂಡನು. ಗ್ರಾಮಗಳನ್ನು ಹರಾಜು ಮಾಡಿಸುವ ಪದ್ಧತಿಯು ದೇವೀಸಿಂಹನ ಇಜಾರೆಯಲ್ಲಿ ಅತಿಯಾಗಿದ್ದಿತು. ಹೇಸ್ಟಿಂಗ್ಸ್ ಹಾಗೂ ಗಂಗಾಗೋವಿಂದನ ಅನುಗ್ರಹದಿಂದ ಸರಕಾರದ ನೌಕರರೆಲ್ಲರೂ ದೇವೀಸಿಂಹನ ಆಜ್ಞಾಧಾರಕರಾಗಿದ್ದರು. ಅವನಿಗೆ ಇಷ್ಟಬಂದಂತೆ ಜಮೀನುದಾರಿಯನ್ನು ಹರಾಜುಹಾಕಿ ತೆಗೆದುಕೊಳ್ಳುವುದು ಹೆಚ್ಚಾಗಿದ್ದಿತು. ಹರವಲ್ಲಭನ ಹತ್ತುಸಾವಿರ ರೂಪಾಯಿನ ಬೆಲೆಬಾಳುವ ಒಂದು ಗ್ರಾಮವು ಇನ್ನೂರೈವತ್ತು ರೂಪಾಯಿಗೆ ಹರಾಜಾಗಿ ಹೋಯಿತು! ಗ್ರಾಮವನ್ನು ದೇವೀಸಿಂಹನೇ ಸ್ವಂತಕ್ಕೆ ತೆಗೆದುಕೊಂಡನು. ಅದರಿಂದ ಪೂರಾ ಹಣವು ಸಂದಾಯುವಾಗದೆ ಬಾಕಿಯಲ್ಲಿ ನಿಂತಿತು. ದೇವೀಸಿಂಹನ ತಗಾದೆ; ಕೊಡದಿದ್ದರೆ ಸೆರೆಮನೆಗೆ ಕಳುಹುವನೆಂಬ ಭಯ. ಅವುಗಳಿಗೆ ಹೆದರಿ ಹರವಲ್ಲಭನು ಮತ್ತೊಂದು ಗ್ರಾಮವನ್ನು ಭೋಗ್ಯ ಮಾಡಿದನು. ಈ ಕಾರಣಗಳಿಂದ ಅವನ ಆದಾಯವು ಬಹಳ ಕಡಿಮೆಯಾಗಿ ಹೋಯಿತು. ಆದರೆ ವೆಚ್ಚವಾವದೂ ಕಡಿಮೆಯಾಗಲಿಲ್ಲ. ಮೊದಲಿನಿಂದ ಬಂದ ಧಾಳಿಧೂಳಿಯಿಂದ ಅಪವ್ಯಯು ಮಾಡುವ ಹಳೇ ಚಾಳಿಯ ಬಿಟ್ಟುಹೋಗಲಿಲ್ಲ. ಅಂಗೆ ಆಗಲಿಲ್ಲ ಒಂದು ದಿನ, ಲಕ್ಷ್ಮಿಯು ಬಂದು, 'ನಿನ್ನ ಹಳೇ ಚಾಳಿಯನ್ನು ಬಿಡು; ಇಲ್ಲವಾದರೆ ನನ್ನನ್ನು ಬಿಟ್ಟುಬಿಡು' ಎಂದು ಹೇಳುವ ಸಂಭವವು ಬಾರದಿರದು, ಅನೇಕರು ಅದಕ್ಕೆ ಉತ್ತರವಾಗಿ, 'ಹೇ, ತಾಯಿ, ಲಕ್ಷ್ಮೀ! ನಿನ್ನನ್ನಾದರೂ ಬಿಡು

ವೆನೇ ಹೊರತು ನನ್ನ ದುಶ್ಚಾಳಿಯನ್ನು ಬಿಡುವುದಿಲ್ಲ' ವೆಂದು ಹೇಳುವರು. ಹರವಲ್ಲಭನಾ ಉತ್ತರವನ್ನು ಹೇಳುವವರ ಗುಂಪಿಗೆ ಸೇರಿದವನು. ದುರ್ಗೋತ್ಸವ, ಪೂಜೆ, ಪುರಸ್ಕಾರ, ದಾನ, ಧರ್ಮ ಮುಂತಾದುವೆಲ್ಲಾ ಮೊದಲಿನ ಹಾಗೇವೇ ನಡೆಯುತಿದ್ದುವು. ವೆಚ್ಚಕ್ಕೆ ಸಾಲದಿದ್ದರೆ ಕಂಡವರ ಮನೆ ದೋಚುವುದು, ಹೀಗೆ ದುರ್ವೃತ್ತಿ ಹೆಚ್ಚುತ್ತ ಬಂತು. ವೆಚ್ಚವು ಕಡಿಮೆಯಾಗಲಿಲ್ಲ. ಬಂದುದೆಲ್ಲಾ ಖರ್ಚಿಗೆ ಸಾಲದು. ಸರಕಾರಕ್ಕೆ ಕೊಡತಕ್ಕ ಕಂದಾಯದ ಹಣವು ಬಾಕಿ ನಿಂತು ಹೋಯಿತು. ಆಸ್ತಿಯಿದ್ದದು ಅಡವು ಭೋಗ್ಯವಾಗಿ ಹೋದುವು. ಸಾಲದ ಮೇಲೆ ಸಾಲವು ಹೆಚ್ಚಿತು. ಬಡ್ಡಿಯು ಏರಿತು. ಸಾಲವನ್ನು ಕೊಡುವವರು ಕೊಡದೆ ಹೋದರು.

ಇತ್ತಕಡೆ ದೇವೀಸಿಂಹನಿಗೆ ಕೊಡಬೇಕಾಗಿದ್ದ ಕಂದಾಯದ ಬಾಕಿ ಐವತ್ತು ಸಾವಿರ ರೂಪಾಯಿಗಳಿಗೇರಿತು. ಹರವಲ್ಲಭನಿಗೆ ದುಡ್ಡು ಹುಟ್ಟದು. ಕಡೆಗೆ ಹರವಲ್ಲಭನಿಗೆ ಸೆರೆಮನೆಗೆ ಹೋಗುವ ಸಂಭವವು ಬಂದಿತು. ಆಗಿನ ಕಾಲದಲ್ಲಿ ಜೈಲಿಗೆ ವಾರಂಟನ್ನು ಹುಟ್ಟಿಸುವುದು ಕಷ್ಟವಿರಲಿಲ್ಲ. ಆಗ ಇಂಗ್ಲೀಷರ ಕಾಯಿದೆ ಕಾನೂನುಗಳಿರಲಿಲ್ಲ. ಕಾಯಿದೆ ಕಾನೂನು ಇಲ್ಲದ ದಿನವಾಗಿದ್ದ ಕಾರಣ ಬೇಕಾದುದನ್ನು ಮಾಡಬಹುವಾಗಿದ್ದಿತು.

---

## ಎರಡನೆಯ ಪರಿಚ್ಛೇದ.

ಬಹಳ ಗದ್ದಲವಾಯಿತು. ವ್ರಜೇಶ್ವರನು ಮಾವನ ಮನೆಗೆ ಬಂದಿದ್ದಾನೆ. ಆವ ಹೆಂಡತಿಯ ಮನೆಗೆ ಬಂದಿದ್ದನೆಂಬುದು ಹೇಳಬೇಕಾದ ಆವಶ್ಯಕವಿಲ್ಲ. ಸಾಗರೆಯ ತಂದೆಯ ಮನೆ. ಆಗಿನ ಕಾಲದಲ್ಲಿ ಅಳಿಯನು ಮನೆಗೆ ಬರುವುದೆಂದರೆ ಸಾಮಾನ್ಯವಲ್ಲ. ಅದರಲ್ಲಿಯೂ ವ್ರಜೇಶ್ವರನು ಅತ್ತೆಯ ಮನೆಗೆ ಬಂದವನಲ್ಲ. ಸಾಧಾರಣವಾಗಿ ಬರತಕ್ಕವನಲ್ಲ. ಊರಲ್ಲೆಲ್ಲಾ ಗದ್ದಲವು ಹತ್ತಿತು. ಮನೆಮನೆಯಲ್ಲಿದ್ದ ಬಾವಿಯ ನೀರನ್ನೆಲ್ಲಾ ಬಲವಂತಮಾಡಿ ಬಂಡಿಗಳ ಮೇಲೆ ತಂದು ಕಡಾಯಿಗಳಲ್ಲಿ ತುಂಬಿದರು. ಗದ್ದಲವನ್ನು ನೋಡುವುದಕ್ಕೆ ಹುಡುಗರೆಲ್ಲರೂ ಪಾಠಶಾಲೆಯಿಂದ ತಪ್ಪಿಸಿಕೊಂಡು ಓಡಿಬಂದರು. ಹಾಲು ಮೊಸರು, ಬೆಣ್ಣೆಯ ಗದ್ದಲ ಹತ್ತಿರುವುದು. ಒಂದೊಂದು ಸೇರು ಹಾಲು ಮೊಸರಿಗೆ ಮೂರು ಮೂರು ಸೇರು ನೀರನ್ನು ಸೇರಿಸಿ ಗೌಳಿಗಿತ್ತಿಯರು ಗೂಡೆಗಳನ್ನು ತಲೆಯ ಮೇಲೆ ಹೊತ್ತುಕೊಂಡು ಬಂದರು. ಜವಳಿಯ ವರ್ತಕರು ಜವಳಿಯ ಗಂಟನ್ನು ಹೊತ್ತುಕೊಂಡು ಬಂದರು. ಜವಳೀ ವರ್ತಕರಿಗೆ ಜವಳಿಯ ಗಂಟನ್ನು ಹೊತ್ತು ಓಡಾಡುವುದರಲ್ಲಿ ಕಾಲು ಬಿದ್ದುಹೋಯಿತು. ಆವ ಜವಳಿಯೂ ಒಪ್ಪಿತವಾಗಲಿಲ್ಲ. ಆವ ಧೊತ್ರ, ಶಲ್ಯೆಗಳನ್ನು ಅಳಿಯನಿಗೆ ಉಡುಗೆರೆ ಕೊಡು

ವರೋ ಅದು ಗೊತ್ತಾಗಲಿಲ್ಲ. ನೆರೆಮನೆಗಳ ಹೆಂಗಸರಿಗೆಲ್ಲಾ ಕೆಲಸವು ಹೆಚ್ಚಾ ಯಿತು. ಹಳೇ ಒಡವೆಗಳಿಗೆಲ್ಲಾ ಒಪ್ಪ ಹಾಕಿಸಬೇಕಾಯಿತು. ಒಡವೆಗಳಿಲ್ಲ ದವರು ಎರವು ತರಬೇಕಾಯಿತು. ಒಡವೆಗಳನ್ನು ಹಾಕಿಕೊಂಡು ಹೋಗ ದಿದ್ದರೆ ದೊಡ್ಡವರ ಮನೆಯ ಅಳಿಯನನ್ನು ನೋಡುವುದಕ್ಕಿಲ್ಲ. ರಸಿಕತೆಯಲ್ಲಿ ಪ್ರವೇಶವಿದ್ದವರು ಹಳೇ ಹಾಡುಗಳನ್ನು ಗಟ್ಟಿಮಾಡಿಕೊಂಡರು. ಹಾಡಿನ ರಸಿಕತೆಗಿಂತಲೂ ಊಟದಲ್ಲಿ ರಸಿಕತೆ ಹೆಚ್ಚು. ಅದಕ್ಕೆ ಸಲವಾಗಿ ಮನೆ ಮನೆ ಯಲ್ಲಿ ಕಮ್ಮಿಟಿಯು ಸೇರಿತು. ಬಹು ವಿಧವಾದ ಕೃತ್ರಿಮದ ಮಿಠಾಯಿ ಮುಂತಾದವುಗಳು ಸಿದ್ಧವಾದುವು. ಮಧುರವಾದ ಅಧರಗಳಲ್ಲಿ ನಗುವು ಕೇಳಿ ಯನ್ನು ಮಾಡುತ್ತಿದ್ದ ಹಾಗೆ ರಮಣಿಗಳು ವಿಧ ವಿಧವಾದ ಪಣ್ಯಾರಗಳನ್ನು ಮಾಡಿದರು.

ಆದರೆ ಆರಿಗೆ ಸಲವಾಗಿ ಇಷ್ಟೊಂದು ಪ್ರಯತ್ನವು ನಡೆಯುತ್ತಿದ್ದಿತೋ ಆತನಿಗೆ ಮನಸ್ಸಿನಲ್ಲಿ ಸುಖಸಂತೋಷವೇನೂ ಇರಲಿಲ್ಲ. ವ್ರಜೇಶ್ವರನು ಆಮೋದಾಹ್ಲಾದಗಳಿಗೆ ಸಲವಾಗಿ ಅತ್ತೆಯ ಮನೆಗೆ ಬಂದಿರಲಿಲ್ಲ. ಅವನ ತಂದೆ ಯನ್ನು ಜೈಲಿಗೊಯ್ಯಲು ವಾರಂಟು ಹುಟ್ಟಿದ್ದಿತು. ತಪ್ಪಿಸಿಕೊಳ್ಳಲುಪಾಯ ವಿರಲಿಲ್ಲ. ಆರೂ ಹಣವನ್ನು ಕೊಡರು. ಮಾವನಲ್ಲಿ ದುಡ್ಡಿದೆ. ಅವನು ಸಾಲ ವನ್ನು ಕೊಟ್ಟರೆ ಕೊಡಬಹುದು. ಸಾಲವನ್ನು ಕೇಳುವುದಕ್ಕೋಸ್ಕರ ವ್ರಜೇ ಶ್ವರನು ಮಾವನ ಬಳಿಗೆ ಬಂದಿದ್ದನು.

ಮಾವ—ಅಯ್ಯ! ನನ್ನಲ್ಲಿರುವ ಹಣವು ನಿನಗೋಸ್ಕರವೇ ಇರುವುದು—ನನಗೆ ಮತ್ತಾರಿದ್ದಾರೆ? ಆದರೆ ಹಣವು ನನ್ನಲ್ಲಿರುವವರೆಗೂ ಇದ್ದ ಹಾಗೆ—ನಿಮ್ಮ ತಂದೆಗೆ ಕೊಟ್ಟರೆ ಅದುಳಿಯುವುದೆ? ಸಾಲಗಾರರು ಬಂದು ಕಿತ್ತು ತಿಂದು ಬಿಡುವರು. ಆದುದರಿಂದ ನಿನ್ನ ಹಣವನ್ನು ನೀನೇ ಹಾಳುಮಾಡಿಕೊಳ್ಳಲೇಕೆ?

ವ್ರಜೇಶ್ವರ—ಹಾಗೇಯೇ ಆಗಲಿ—ನನಗೆ ಹಣದಾಶೆಯಿಲ್ಲ. ನಮ್ಮ ತಂದೆ ಯನ್ನುಳಿಸಿಕೊಳ್ಳುವುದು ನನಗೆ ಮುಖ್ಯವಾದ ಕೆಲಸವಾಗಿದೆ.

ಮಾವ—ಸ್ವಲ್ಪ ಕೋಪಗೊಂಡು—ನಿಮ್ಮ ತಂದೆಯುಳಿದುಕೊಂಡರೆ ನಮ್ಮ ಹುಡುಗಿಗೆ ಬಂದುದೇನು? ದುಡ್ಡು ಇದ್ದರೆ ನಮ್ಮ ಹುಡುಗಿಯ ದುಃಖ ನಿವಾರಣೆಯಾಗುವುದು. ಮಾವನಿದ್ದರೇನಾಗುವುದು?

ಆ ನಿಷ್ಠುರೋಕ್ತಿಗಳನ್ನು ಕೇಳಿ ವ್ರಜೇಶ್ವರನಿಗೆ ಕೋಪವು ಬಂದು, ಅವನು, 'ಹಾಗಾದರೆ, ತಮ್ಮ ಹುಡಿಗಿಯು ಹಣವನ್ನಿಟ್ಟುಕೊಂಡಿರಲಿ. ಅಳಿಯನಿಂದ ಪ್ರಯೋಜನವಿಲ್ಲವೆಂದು ಕಾಣುತ್ತದೆ. ಇದೇ ತಮ್ಮ ಕಡೆಯ ಸಂದರ್ಶನ. ಅಪ್ಪಣೆಯಾದರೆ ಹೊರಟುಹೋಗುವೆನು' ಎಂದು ಹೇಳಿದನು.

ಆಗ ಸಾಗರೆಯ ತಂದೆಯು ಎರಡು ಕಣ್ಣುಗಳಿಂದಲೂ ಕಿಡಿಗಳನ್ನು ಸುರಿ ಸುತ್ತ ವ್ರಜೇಶ್ವರನನ್ನು ವಿಸ್ತಾರವಾಗಿ ತಿರಸ್ಕಾರಮಾಡಿದನು. ವ್ರಜೇಶ್ವರನು

ತೀಕ್ಷ್ಣವಾದ ಉತ್ತರವನ್ನು ಗೊಟ್ಟನು. ಕಡೆಕೆ ವ್ರಜೇಶ್ವರನು ಕೆಟ್ಟ ಆಣೆಗಳನ್ನಿಟ್ಟುಕೊಂಡನು. ಕೇಲಿ ಸಾಗರೆಯ ತಲೆಯಮೇಲೆ ಸಿಡಿಲುಬಿದ್ದಂತಾಯಿತು.

ಸಾಗರೆಯು ತಾಯಿಯು ಅಳಿಯನನ್ನು ಕರೆಯಿಸಿಕೊಂಡು. ಅನೇಕ ವಿಧವಾಗಿ ಸಮಾಧಾನ ಮಾಡಿದಳು. ಅಳಿಯನ ಕೋಪವು ಇಳಿಯಲಿಲ್ಲ. ಬಳಿಕ ಸಾಗರೆಯ ಸರದಿಯು ಬಂದಿತು.

ಸೊಸೆಯು ಅತ್ತೆಯು ಮನೆಗೆ ಬಂದರೆ ಹಗಲು ಹೊತ್ತು ಗಂಡನನ್ನು ನೋಡುವುದಕ್ಕೆ ಅವಕಾಶವಿಲ್ಲದಷ್ಟು ತೌರುಮನೆಯಲ್ಲಿ ಅವಕಾಶವು ಸಿಕ್ಕದಿರಲಿಲ್ಲ. ಸಾಗರೆಯು ಗಂಡನನ್ನು ಏಕಾಂತದಲ್ಲಿ ನೋಡಿದಳು. ಅವಳು ಗಂಡನ ಕಾಲುಗಳನ್ನು ಹಿಡಿದುಕೊಂಡು ಮತ್ತೊಂದು ದಿನವಿದ್ದು ಹೋಗಬೇಕೆಂದು ಬೇಡಿಕೊಂಡಳು. 'ನಾನಾವ ಅಪರಾಧವನ್ನೂ ಮಾಡಲಿಲ್ಲವಷ್ಟೆ—ನನ್ನ ಮೇಲಿನ ಅಂತಃಕರಣಕ್ಕಾದರೂ ಇದ್ದು ಹೋಗಿ ಬರಬೇಕು' ಎಂದಳು.

ಆಗ ವ್ರಜೇಶ್ವರನಿಗೆ ಕೋಪವು ಶಮನವಾಗಿರಲಿಲ್ಲ. ಕೋಪದಿಂದವಳು ಹಿಡಿದಿದ್ದ ಕಾಲನ್ನೆಳೆದುಕೊಂಡನು. ಕೋಪದ ವೇಳೆಯಲ್ಲಾವ ಶಾರೀರಕವಾದ ಕೆಲಸವನ್ನು ಮಾಡಿದರೂ ಶಕ್ತಿಯಿಂದಲೇ ಮಾಡಿದಂತಾಗಿರುವುದು. ಅದಕ್ಕೆ ಸರಿಯಾಗಿಯೇ ಕೈಕಾಲುಗಳ ಚಾಲನವೂ ಬಲವಾಗಿಯೇ ಇದ್ದು ಒಂದು ಮಾಡುವುದಕ್ಕೆ ಹೋದರೆ ಮತ್ತೊಂದು ಪ್ರಕಾರವಾಗಿ ಕಂಡುಬರುವುದು. ಅದು ಕಾರಣ, ಸಾಗರೆಯು ಕಾಲನ್ನು ಹಿಡಿದುಕೊಂಡು ಗೋಳಾಡುವುದನ್ನು ತಪ್ಪಿಸುವುದಕ್ಕೆ ವ್ರಜೇಶ್ವರನು ತನ್ನ ಕಾಲನ್ನೆಳೆದುಕೊಳ್ಳುವಾಗ ಒಂದು ಪ್ರಮಾದವುಂಟಾಯಿತು. ಎಳೆದುಕೊಳ್ಳುವಾಗ ಕಾಲು ಸಾಗರೆಯ ಮೈಗೆ ಬಲವಾಗಿ ತಗಲಿತು. ಅವಳು ಕೋಪದಿಂದ ಗಂಡನು ತನ್ನನ್ನೊದ್ದನೆಂದು ತಿಳಿದುಕೊಂಡಳು. ಆಗವಳು ಅವನ ಕಾಲನ್ನು ಬಿಟ್ಟು ಕುಪಿತಫಣಿನಿಯಂತಿದ್ದು ನಿಂತು, 'ಇದೇನು ? ನನ್ನನ್ನು ಒದೆಯುತ್ತೀರಿ ?' ಎಂದಳು.

ವಾಸ್ತವಿಕವಾಗಿ ವ್ರಜೇಶ್ವರನಿಗೆ ಒದೆಯುವ ಇಷ್ಟವಿರಲಿಲ್ಲ—ಹಾಗೆಂದು ಹೇಳಿದ್ದರೆ ಎಲ್ಲಾ ಶಾಂತವಾಗುತಿದ್ದಿತು. ಆದರದು ಕೋಪದ ವೇಳೆ—ಸಾಗರೆಯು ಕಣ್ಣು ಮುಖಗಳನ್ನು ತಿರಿಗಿಸಿಕೊಂಡು ನಿಂತಿದ್ದಳು. ವ್ರಜೇಶ್ವರನಿಗೆ ಅದನ್ನು ನೋಡಿ ಕೋಪವು ಮತ್ತಷ್ಟು ಹೆಚ್ಚಾಯಿತು. ಆ ಕೋಪದಲ್ಲಿ ಅವನು, 'ಒದ್ದರೂ ಒದ್ದೆ—ನೀನು ದೊಡ್ಡಮನುಷ್ಯನ ಮಗಳಾಗಿದ್ದರೆ ಇರು. ಈ ಕಾಲು ನನ್ನದು. ದೊಡ್ಡಮನುಷ್ಯನಾದ ನಿಮ್ಮಪ್ಪನೂ ಈ ಕಾಲನ್ನು ಒಂದು ದಿನ ಪೂಜೆ ಮಾಡಿದ್ದಾನೆ' ಎಂದನು.

ಸಾಗರೆಯು ಕೋಪದಿಂದ ಜ್ಞಾನ ಹೋಗಲಾಡಿಸಿಕೊಂಡವಳಾಗಿ, 'ಪೂಜೆಯೇ ಮಾಡಿದನೋ, ಪೂರಾ ಮುರಿದನೋ ! ನಾನದಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡುತ್ತೇನೆ' ಎಂದಳು.

ವ್ರಜೇಶ್ವರ—ಬದಲಿಗೆ ಬದಲು ಒದೆಯಲಿಲ್ಲವೇಕೆ ?

ಸಾಗರ—ನಾನು ಅಂತಹ ಅಧಮಳಲ್ಲ. ಆದರೆ ನಾನು ಬ್ರಾಹ್ಮಣ ಹೆಂಗಸಾಗಿದ್ದರೆ ನೀವು ನನ್ನ ಕಾಲು—ಮುಂದೆ ಮಾತು ತೋಚದಿದ್ದವಕಾಶವಿದ್ದಲ್ಲಿ, ಮಾತು ಪೂರೈಸುವದರೊಳಗಾಗಿ ಹಿಂದುಗಡೆ ಕಿಟಕಿಯಿಂದಾರೋ, " ನನ್ನ ಕಾಲುಗಳನ್ನು ನಿಮ್ಮ ತೊಡೆಯಮೇಲಿಟ್ಟು ನೀವದನ್ನೊತ್ತುವ ಹಾಗೆ ಮಾಡುತ್ತೇನೆ " ಎಂದು ಮಾತನ್ನು ಪೂರೈಸಿದರು.

ಸಾಗರೆಯ ಬಾಯಲ್ಲಿಯೂ ಅಂತಹ ಮಾತು ಹೊರಡುತಿದ್ದಿತು. ಸಾಗರೆಯು ಸ್ವಲ್ಪವೂ ಮುಂದು ಯೋಚನೆಯಿಲ್ಲದೆ ಹಿಂದೆ ತಿರುಗಿ ನೋಡದೆ ಕೋಪದಿಂದದೇ ಮಾತನ್ನೇ ಪುನರುಕ್ತಿಯಾಗಿ, ' ನನ್ನ ಕಾಲನ್ನು ನಿಮ್ಮ ತೊಡೆಯ ಮೇಲಿಟ್ಟು ನೀವದನ್ನೊತ್ತುವ ಹಾಗೆ ಮಾಡುತ್ತೇನೆ ' ಎಂದು ಹೇಳಿದಳು.

ವ್ರಜೇಶ್ವರನಿಗೆ ಕೋಪವು ಅಧಿಕವಾಗಿ, ಅವನು ಮುಂದಿನಯೋಚನೆಯಿಲ್ಲದೆ, ' ನಾನು ಹೇಳುವುದೂ ಅದೇ ಮಾತು—ನಿನ್ನ ಕಾಲನ್ನು ನನ್ನಿಂದೊತ್ತಿಸಿಕೊಳ್ಳುವ ತನಕ ನಾನು ನಿನ್ನ ಮುಖವನ್ನು ನೋಡುವುದಿಲ್ಲ. ನನ್ನೀ ಪ್ರತಿಜ್ಞೆಯು ಭಂಗವಾದರೆ ನಾನು ಬ್ರಾಹ್ಮಣನಲ್ಲ ' ವೆಂದು ಹೇಳಿದನು.

ವ್ರಜೇಶ್ವರನು ಕಿಡಿ ಇಡುವ ಕೋಪದಿಂದ ಮೈ ಉರಿದವನ ಹಾಗಾಗಿ ಅಲ್ಲಿ ನಿಲ್ಲದೆ ಹೊರಟುಹೋದನು. ಸಾಗರೆಯು ಕಾಲು ಚಾಚಿಕೊಂಡು ಅಳುತ್ತ ಕೂತಳು. ವ್ರಜೇಶ್ವರನು ಹೊರಟುಹೋದ ಬಳಿಕ ಒಬ್ಬ ಪರಿಚಾರಿಕೆಯು ಸಾಗರೆಯ ಅವಸ್ಥೆಯನ್ನು ನೋಡೋಣವೆಂದು ಅವಳಿದ್ದ ಕೋಣೆಗೆ ಕೆಲಸ ಮಾಡುವವಳಂತೆ ಬಂದಳು. ಆಗ ಸಾಗರೆಗೆ ಕಿಟಕಿಯಲ್ಲಾರೋ ಮಾತಾಡಿದುದು ಜ್ಞಾಪಕಕ್ಕೆ ಬಂದು, ಅವಳು ಪರಿಚಾರಿಕೆಯನ್ನು ಕುರಿತು, ' ಕಿಟಕಿಯ ಹೊರಗೆ ನಿಂತು ಮಾತಾಡಿದವಳು ನೀನೆ ? ' ಎಂದು ಕೇಳಿದಳು.

ಪರಿಚಾರಿಕೆ—ನಾನೆಲ್ಲಿ ಮಾತಾಡಿದೆ ?

ಸಾಗರ—ಹಾಗಾದರೆ ಕಿಟಕಿಯಲ್ಲಿ ಮುಖವನ್ನಿಟ್ಟುಕೊಂಡು ನೋಡಿದವರಾರು ?

ಆಗ ಸಾಕ್ಷಾತ್ತು ಲಕ್ಷ್ಮಿಯಂತೆ ರೂಪವತಿಯಾದ ಕಾಂತಿವಿಶಿಷ್ಟೆಯಾದೊಬ್ಬ ಹೆಂಗಸು ಕೊಠಡಿಯೊಳಗೆ ಪ್ರವೇಶಮಾಡಿ, ' ಕಿಟಕಿಯಲ್ಲಿ ನಿಂತಿದ್ದವಳು ನಾನು ' ಎಂದಳು.

ಸಾಗರ—ನೀನಾರು ?

ಆಗ ಹೆಂಗಸು, ನೀನು ನನ್ನನ್ನು ಯಾವಾಗಲೂ ಕಂಡಿಲ್ಲವೆ ? ಎಂದಳು.

ಸಾಗರ—ಇಲ್ಲ. ನೀನು ಯಾರು ?

ಆಗ ಆ ಹೆಂಗಸು ' ನಾನು ದೇವೀಚೌಧುರಾಣಿ ! " ಎಂದಳು.

ಪರಿಚಾರಿಕೆಯ ಕೈಲಿದ್ದ ಪಾನದಾನು ನೆಲದಮೇಲೆ ಬಿದ್ದು ಝಣಝಣ ಶಬ್ದ

ವಾಯಿತು. ಅವಳೂ ಕೈ ಕಾಲು ನಡುಗಿ 'ಆಹಾ! ಆಹಾ!' ಎಂದು ಶಬ್ದ ಮಾಡುತ್ತ ಪ್ರಜ್ಞೆತಪ್ಪಿದವಳಂತೆ, ನಿಂತಿದ್ದಹಾಗೆ ಭಯದಿಂದ ಬಿದ್ದಳು. ಅವಳ ಮೈ ಮೇಲಿದ್ದ ಬಟ್ಟೆಯು ಸರಿದುಹೋಯಿತು.

ದೇವೀಚೌಧುರಾಣಿಯು ಅವಳ ಕಡೆಗೆ ತಿರಿಗಿಕೊಂಡು, 'ಏನೇ ಕೆಟ್ಟರಂಡೆ! ಎದ್ದು ನಿಲ್ಲು' ಎಂದಳು.

ಪರಿಚಾರಿಕೆಯು ಅಳುತಳುತ ಸ್ತಂಭಿತೆಯಾಗಿ ಎದ್ದು ನಿಂತುಕೊಂಡಳು. ಸಾಗರೆಯ ಮೈಯಲ್ಲಿಯೂ ಬೆವರು ಕಿತ್ತುಕೊಂಡಿತು. ಅವಳ ಬಾಯಲ್ಲಿ ಮಾತು ಹೊರಡಲಿಲ್ಲ. ದೇವೀಚೌಧುರಾಣಿಯ ಹೆಸರನ್ನಾರು ಕೇಳಿಲ್ಲ. ಆ ಬಾಲವೃದ್ಧರೂ ಆ ಹೆಸರನ್ನು ಕೇಳಿದ ನಿಮಿಷದಲ್ಲಿ ನಡುಗಿಹೋಗುವರು. ಅಳುವ ಮಕ್ಕಳು ಆ ಹೆಸರನ್ನು ಕೇಳಿದರೆ ಅಳುವುದನ್ನು ನಿಲ್ಲಿಸಿಬಿಡುತಿದ್ದುವು. ಆ ಹೆಸರು ಬಹಳ ಭಯಂಕರವಾದುದು.

ಆವರೆ ಸ್ವಲ್ಪಹೊತ್ತಾದ ಬಳಿಕ ಸಾಗರೆಯು ನಕ್ಕಳು. ದೇವೀಚೌಧು ರಾಣಿಯೂ ನಕ್ಕಳು.

---

## ಮೂರನೆಯ ಪರಿಚ್ಛೇದ

ವರ್ಷಾಕಾಲ, ರಾತ್ರಿ, ಬೆಳದಿಂಗಳು. ಬೆಳದಿಂಗಳು ಅಷ್ಟೊಂದು ಉಜ್ವಲವಾಗಿರಲಿಲ್ಲ; ಬಹಳ ಮಧುರವಾಗಿದ್ದಿತು. ಸ್ವಲ್ಪ ಅಂಧಕಾರದಿಂದ ಕೂಡಿದ್ದಿತು. ಪೃಥಿವಿಗೆ ಸ್ವಪ್ನಮಯವಾದ ಆವರಣವೋ ಎಂಬಂತಿದ್ದಿತು. ತ್ರಿಸ್ರೋತ ಗಂಗಾನದಿಯು ಮಳೆಗಾಲದ ಜಲಪ್ರವಾಹದಿಂದ ಎರಡು ದಡವೂ ತುಂಬಿ ಹರಿಯುತಿದ್ದಿತು. ಚಂದ್ರಕಿರಣವು ಶೀಘ್ರವಾದಾ ಗತಿಯುಳ್ಳ ನದಿಯ ಜಲಪ್ರವಾಹದಲ್ಲಿ—ಪ್ರವಾಹದಲ್ಲಿ, ಸುಳಿಗಳಲ್ಲಿ, ತರಂಗಗಳಲ್ಲಿ ಒಂದೊಂದು ತಡವೆ ಪ್ರಕಾಶಿಸುವುದು. ಜಲದ ತರಂಗವು ಒಡೆದ ಕಡೆಯಲ್ಲಿ ಚಕಮುಕಿ ಹೊಡೆದಂತಾಗುವುದು. ತಗ್ಗಿನಲ್ಲಿ ನೀರು ಧುಮುಕಿ ತರಂಗವು ಒಡೆದುಹೋದ ಕಡೆಯಲ್ಲಿ ಝುಲಿತ್ಕಾರವಾಗಿ ಝುಳಿಸುವುದು. ದಡದಲ್ಲಿದ್ದ ಮರಗಳ ಬುಡಕ್ಕೆ ನೀರು ಬಂದು ಹೊಡೆಯುವುದು. ಅಲ್ಲಿ ಮರದ ನೆರಳು ಬಿದ್ದು ನೀರಿನಮೇಲೆ ಅಂಧಕಾರವಾಗುವುದು. ಅಂಧಕಾರದಲ್ಲಿ ಮರದೆಲೆ, ಹಣ್ಣು ಕಾಯಿಗಳು ಬಿದ್ದು ಬಲವಾದ ಸೆಳೆವಿನಿಂದ ಹರಿಯುವ ಪ್ರವಾಹದೊಂದಿಗೆ ತೇಲಿಹೋಗುತಿದ್ದುವು. ಪ್ರವಾಹವು ದಡಕ್ಕೆ ಹೊಡೆದು ನೀರು ಕಲಕಲ ಜಳಜಳ ಶಬ್ದಮಾಡುತಿದ್ದಿತು. ಅವೆಲ್ಲಾ ಅಂಧಕಾರದಲ್ಲಾಗುತಿದ್ದುವು. ಅಂಧಕಾರದಲ್ಲಿ ವಿಶಾಲ ಜಲಾಧಾರವಾದಾ ನದಿಯು ಸಮುದ್ರವನ್ನು ಹುಡುಕುತ್ತ ಪಕ್ಷಿಯ ವೇಗದಿಂದ ಓಡುತಿದ್ದಿತು. ದಡ ದಡದಲ್ಲಿಯೂ ಅಸಂಖ್ಯಾತವಾದ ಕಲಕಲ ಶಬ್ದ; ಸುಳಿಗಳಲ್ಲಿ ಘೋರತರವಾದ ಗರ್ಜನೆ; ಪ್ರವಾಹ ಪ್ರವಾಹವು

ಎದುರುಬದುರು ಬಂದು ಪ್ರತಿಹತವಾಗುವದರಿಂದುಂಟಾಗುವಂತೆ ಶಬ್ದ; ಆ ಶಬ್ದ ಗರ್ಜನೆಗಳು ಒಟ್ಟೈಸಿ ಗಂಭೀರವಾದ ಗಗನವನ್ನು ವ್ಯಾಪಿಸಿಕೊಂಡು ಶಬ್ದ ವಾಗುತಿದ್ದವು.

ಆ ಗಂಗಾನದಿಯಲ್ಲಿ ದಡದಿಂದ ಸ್ವಲ್ಪ ದೂರದಲ್ಲೊಂದು ಚಿಕ್ಕ ಹಡಗು ಗೂಟಕ್ಕೆ ಕಟ್ಟಲ್ಪಟ್ಟದ್ದಿತು. ಆ ಸಣ್ಣ ಹಡಗಿಗೆ ಸ್ವಲ್ಪ ದೂರದಲ್ಲೊಂದು ಆಲದ ಮರದ ಛಾಯೆಯು ಬಿದ್ದೆಡೆ ಅಂಧಕಾರದಲ್ಲಿ ಮತ್ತೊಂದು ದೊಡ್ಡದಾದ ಹಡಗು. ಆ ದೊಡ್ಡ ಹಡಗಿನ ಸಮಾಚಾರವನ್ನು ಕಡೆಗೆ ಹೇಳುವೆವು. ಮೊದಲು ಸಣ್ಣ ಹಡಗಿನ ವಿಚಾರವನ್ನು ತಿಳಿಸುವೆವು. ಸಣ್ಣ ಹಡಗು ನಾನಾವರ್ಣಗಳಿಂದ ಚಿತ್ರವಾಗಿದ್ದಿತು. ಕಂಭಗಳಿಗೆಲ್ಲಾ ಬೆಳ್ಳಿಭಂಗಾರದ ಗಿಲ್ಟು ಮಾಡಿದ ಹಿತ್ತಾಳೆ ಕಟ್ಟುಗಳ ಹಾಕಲ್ಪಟ್ಟದ್ದುವು. ಅಡಗಿನ ಮುಂಭಾಗದಲ್ಲೊಂದು ನೀರಿನ ಹುಲಿಯ (Shark-ಸಮುದ್ರದಲ್ಲಿರುವ ಒಂದು ದೊಡ್ಡದಾದ ಹುಲಿಯ ಮುಖದ ಮೀನು) ಮುಖ—ಅದಕೂ ಭಂಗಾರದ ಗಿಲ್ಟು. ಹಡಗಿನೆಲ್ಲಾ ಕಡೆಯಲ್ಲಿಯೂ ಬಹಳ ಪರಿಷ್ಕಾರವಾಗಿದ್ದಿತು. ಬಿಸಿಲು ಗಾಳಿಯಿಂದ ಮರೆಮಾಡುವುದಕ್ಕೆ ಸೊಗಸಾದ ಮೇಲಛಾವಣಿ. ಸ್ವಲ್ಪವೂ ಗದ್ದಲವಿಲ್ಲ. ಹಡಗು ನಡೆಯಿಸುವವರು ಒಂದು ಕಡೆಯಲ್ಲಿ ಮಲಗಿದ್ದಾರೆ. ಅವರಲ್ಲಾರೂ ಎಚ್ಚರವಾಗಿದ್ದಂತೆ ಕಾಣಲಿಲ್ಲ. ಹಡಗಿನ ಮೇಲ್ಭಾಗದಲ್ಲೊಬ್ಬ ವ್ಯಕ್ತಿಯು ಕುಳಿತು, ನೋಡುವುದಕ್ಕೆ ಅತಿ ಮನೋಹರವಾಗಿದ್ದಿತು!

ಹಡಗಿನ ಮೇಲುಭಾಗದಲ್ಲೊಂದು ಚಿಕ್ಕ ದಾದ ರತ್ನಗಂಬಳಿಯು ಹಾಸಿತ್ತಿತು.. ಸೊಗಸಾದ ರತ್ನಗಂಬಳಿ, ಬಹಳ ಮೃದುವಾಗಿ ನಾನಾವಿಧ ಚಿತ್ರಗಳಿಂದ ಚಿತ್ರಿತವಾಗಿದ್ದಿತು. ಅದರಮೇಲೊಬ್ಬ ಹೆಂಗಸು ಕುಳಿತಿದ್ದಳು. ಅವಳ ವಯಸ್ಸನ್ನೂಹಿಸುವುದಕ್ಕಾಗುತ್ತಿಲ್ಲ. ಇಪ್ಪತ್ತೈದು ವರ್ಷದ ಕೆಳಗೆ ಅಂತಹ ಪೂರ್ಣಾಯತವಾದ ಲಾವಣ್ಯವುಳ್ಳ ದೇಹವನ್ನಾದರೂ ಎಲ್ಲಿಯೂ ನೋಡಿರರು. ಇಪ್ಪತ್ತೈದು ವರ್ಷದ ಮೇಲೆ ಅಂತಹ ಯೌವನದ ಲಾವಣ್ಯವನ್ನೂ ಆರೂ ಎಲ್ಲಿಯೂ ಕಂಡಿರರು. ವಯಸ್ಸು ಎಷ್ಟಾದರೂ ಆಗಲಿ—ಹೆಂಗಸು ಪರಮ ಸುಂದರಿಯಾಗಿದ್ದಳು. ಆ ವಿಷಯದಲ್ಲಿ ಸಂದೇಹವಿಲ್ಲ. ಆ ಸುಂದರಿಯು ಕೃಶಾಂಗಿಯಾಗಿರಲಿಲ್ಲ. ಸ್ಥೂಲಾಂಗಿಯೆಂದು ಹೇಳಿದರೆ ಅವಳನ್ನು ನಿಂದಿಸಿದಂತಾಗುವುದು. ವಸ್ತುತಃ, ಅವಳ ಅವಯವವು ಸರ್ವತ್ರ ಷೋಡಶ ಕಲಾ ಪರಿಪೂರ್ಣವಾಗಿದ್ದಿತು. ಅಂದು ರಾತ್ರಿ ಗಂಗಾನದಿಯ ಎರಡು ಕಡೆಯ ದಡಗಳೂ ಹೇಗೆ ಪರಿಪೂರ್ಣವಾಗಿದ್ದುವೋ ಹಾಗೆ ಅವಳ ಶರೀರವೂ ಕೂಲಕೂಲದಲ್ಲಿಯೂ ಪರಿಪೂರ್ಣವಾಗಿದ್ದಿತು. ಅದಲ್ಲದೆ ಲಕ್ಷಣವಾದ ಉನ್ನತ ದೇಹ, ದೇಹವು ಅಷ್ಟು ಉನ್ನತವಾಗಿದ್ದುದರಿಂದಲೇ ಅವಳನ್ನು ಸ್ಥೂಲಾಂಗಿಯೆಂದು ಹೇಳಲಾರದೆ ಹೋದೆವು. ಯೌವನವೆಂಬ ಮಳೆಯು ಹೊಸ ಪ್ರವಾಹದ ನೀರು ಕಮನೀಯತೆಗೆ ಆಧಾರವಾದಾ ದೇಹದಲ್ಲಿ ತುಂಬಿದ್ದಿತು—ನೀರು ಅದಮಿಹೋಗಿ ಕಾಣಿಸದಂತಿರಲಿಲ್ಲ.

ನೀರು ಕೂಲದಿಂದ ಕೂಲದವರೆಗೆ ತುಂಬಿ ತುಳುಕುತಿದ್ದಿತು. ಅಸ್ಥಿರವಾಗಿದ್ದಿತು. ನೀರು ಅಸ್ಥಿರ; ಆದರಾ ಲಾವಣ್ಯಮಯಿಯಾದ ಚಂಚಲೆಯು ಅಸ್ಥಿರನಲ್ಲ; ನಿರ್ವಿಕಾರ; ಅವಳು ಶಾಂತೆಯಾಗಿಯೂ ಗಂಭೀರೆಯಾಗಿಯೂ ಮಧುರೆಯಾಗಿಯೂ ಆನಂದಮಯಿಯಾಗಿಯೂ ಇದ್ದಳು. ಜ್ಯೋತ್ಸ್ನಾಮಯಿಯಾದಾ ನದಿಯ ಅನುಸಂಗಿನಿಯಾಗಿದ್ದಳು ಆ ನದಿಯು ಹಾಗೆ ಆ ಸುಂದರಿಯೂ ಸುಸಜ್ಜಿತೆಯಾಗಿದ್ದಳು. ಈ ಕಾಲದಲ್ಲಿ ಢಾಕಾ ಮಲ್ಮಲಿಗೆ ಅಷ್ಟೊಂದು ಮರ್ಯಾದೆಯಿಲ್ಲ. ಆದರೆ ಒಂದುನೂರು ವರ್ಷಕ್ಕೆ ಹಿಂದೆ ಆ ದೇಶದ ಬಟ್ಟೆಯು ಚೆನ್ನಾಗಿದ್ದಿತು. ಆದಕ್ಕೆ ಹೆಚ್ಚು ಮರ್ಯಾದೆ. ಸುಂದರಿಯು ಶುಭ್ರವಾದುದೊಂದು ಮಲ್ಮಲಿನ ಸೀರೆಯನ್ನುಟ್ಟಿದ್ದಳು. ಆ ಸೀರೆಗೆ ಜರೀಹೂವು. ಅದರ ಸೆರಗಿನಲ್ಲಿ ಮುತ್ತು ವಜ್ರ ಕೆಂಪು ಮುಂತಾದ ರತ್ನಗಳು ಖಚಿತವಾಗಿದ್ದುವು. ಅವಳ ಶರೀರವು ನವರತ್ನ ಖಚಿತವಾದ ಆಭರಣಗಳಿಂದಲಂಕರಿಸಲ್ಪಟ್ಟಿದ್ದಿತು. ಆ ಬೆಳದಿಂಗಳ ಬೆಳಕಿನಲ್ಲದು ಥಳಥಳಿಸುತ್ತಿದ್ದಿತು. ನದಿಯ ನೀರಿನಲ್ಲದು ಝುಳಿಕಿಸುತಿದ್ದಂತೆ ಶರೀರವೂ ಪ್ರಕಾಶಿಸುತಿದ್ದಿತು. ಜ್ಯೋತ್ಸ್ನಾಪುಲಕಿತವಾದಾ ಸ್ಥಿರವಾದ ನದಿಯು ಜಲದಂತೆ ಶುಭ್ರವಾದಾ ವಸನ; ಮತ್ತು ಜಲದಲ್ಲಿ ತರಂಗಗಳು ಒಡೆದು ವಜ್ರಕಿಡಿಗಳು ಹರಡಿದ್ದಂತೆ ಚಂದ್ರಕಿರಣವು ಕಣ್ಣೊಳಿಸುವಂತಿದ್ದಾ ಶುಭ್ರವಾದವಳ ವಸನದಲ್ಲಿ ನವರತ್ನಗಳು ಹೊಳೆಯುತಿದ್ದುವು ನದಿಯ ತೀರದಲ್ಲಿದ್ದ ವನದ ಛಾಯೆಯಿಂದ ಪ್ರಾಂತಭಾಗವು ಕಪ್ಪಾಗಿದ್ದಂತೆ ಸುಂದರಿಯ ಅಂಧಕಾರಮಯವಾದಾ ಕೇಶರಾಶಿಯು ಬಿಚ್ಚಿಹೋಗಿ ಅವಳ ಅಂಗಗಳ ಮೇಲೆ ಬಿದ್ದಿತ್ತು. ಆ ಕೇಶರಾಶಿಯು ಗುಂಗುರು ಗುಂಗುರಾಗಿ ಸುತ್ತಿಸುತ್ತಿಕೊಂಡು ಗೊಂಚಲು ಗೊಂಚಲಾಗಿ ಹಾರಾಡುತ ಬೆನ್ನಿನ ಮೇಲೂ ಭುಜಗಳಮೇಲೂ ಬಾಹುಗಳಮೇಲೂ ವಕ್ಷದಮೇಲೂ ಬಿದ್ದಿದ್ದಿತು. ಅದರ ಮಸೃಣವಾದ ಕೋಮಲ ಪ್ರಭೆಯಮೇಲೆ ಚಂದ್ರಕಿರಣವು ಕ್ರೀಡಿಸುತಿದ್ದಿತು. ಅದರ ಸುಗಂಧ ಗಂಧದಿಂದ ಗಗನವು ಪರಿಪೂರಿತವಾಗಿದ್ದಿತು. ತಲೆಯಲ್ಲೊಂದು ನಾಗಸಂಪಿಗೆಯ ಹೂವು ಮುಡಿಯಲ್ಪಟ್ಟಿದ್ದಿತು.

ಹಡಗಿನ ಮೇಲುಭಾಗದಲ್ಲಿ ರತ್ನಗಂಬಳಿಯ ಮೇಲೆ ಬಹು ರತ್ನಮಂಡಿತೆಯಾದಾ ರೂಪವತಿಯು ಮೂರ್ತಿಮತಿಯಾದ ಸರಸ್ವತಿಯೋಪಾದಿಯಲ್ಲಿ ವೀಣಾಹಸ್ತೆಯಾಗಿ ವೀಣೆಯನ್ನು ನುಡಿಸುತ್ತಿದ್ದಳು. ಚಂದ್ರನ ಕಾಂತಿಯಲ್ಲಿ ಬೆಳದಿಂಗಳಿನಂತೆ ವರ್ಣಗಳು ಸೇರುತಿವೆ. ಅದರೊಂದಿಗೆ ಮೃದುಮಧುರವಾದ ವೀಣೆಯ ಧ್ವನಿಯೂ ಸೇರುತಿದೆ—ನೀರಿನಲ್ಲಿ ಚಂದ್ರಕಿರಣವು ಕ್ರೀಡಿಸುವಂತೆ, ಆ ಹೆಂಗಸಿನ ಅಲಂಕಾರಗಳಲ್ಲಿ ಚಂದ್ರಕಿರಣವು ಕ್ರೀಡಿಸುವಂತೆ, ವನ್ಯ ಕುಸುಮಗಳಿಂದ ಸುಗಂಧಿತವಾದ ಕೌಮುದೀ ಸ್ನಾತವಾದಾ ವಾಯುವಿನ ಸ್ತರಗಳಲ್ಲಾ ವೀಣಾ ಶಬ್ದವು ಕ್ರೀಡಿಸುತಿದ್ದಿತು. 'ಝುಂ ಝುಂ ಛನ್ ಛನ್,' ಎಂದು ನುಡಿಸುತಿದ್ದಳು. ಅದನ್ನೆಲ್ಲಾ ನಾವು ಹೇಳಲಾರೆವು. ವೀಣೆಯು ಒತ್ತಡವೆ ಕೋಪಿಸಿಕೊಳ್ಳುವುದು;

ಒತ್ತಡವೆ ನಾಟ್ಯವಾಡುವುದು, ಒತ್ತಡವೆ ಆದರ ಮಾಡುವುದು, ಗರ್ಜಿಸುವುದು— ನಗುವುದು—ನುಡಿಸುತ್ತಿದ್ದವಳು, ಕಾಂಭೋಜ, ಸಿಂಧು ಮುಂತಾದ ಮಧುರವಾದ ರಾಗಗಳನ್ನೂ ಕೇದಾರಗೌಳಿ, ಜೇಹಾಗ್ ಮುಂತಾದ ಗಂಭೀರ ರಾಗಗಳನ್ನೂ ಆಲಾಪಮಾಡುವಳು. ನಾದವು ಕುಸುಮ ಮಾಲೆಗಳಂತೆ ನದಿಯ ಕಲ್ಲೋಲ ಪ್ರವಾಹದಲ್ಲಿ ತೇಲಿ ಹೋಗುತ್ತಿದ್ದಿತು. ಮತ್ತೂ ಬೇರೆ ಅನೇಕ ರಾಗಗಳನ್ನು ಹಾಡಿದಳು. ಆಗ ಹಡಗಿನ ಕೆಳಭಾಗದಲ್ಲಿ ಮಲಗಿದ್ದವರಲ್ಲೊಬ್ಬನು ಎದ್ದು ಬಂದು ಸುಂದರಿಯ ಬಳಿ ನಿಂತನು. ಅವನು ದೀರ್ಘಾಕಾರವುಳ್ಳ, ಬಲಿಷ್ಠನಾದ ಮನುಷ್ಯ ನಾಗಿದ್ದನು. ಅವನಿಗೆ ದೊಡ್ಡ ಮಿಾಶೆ, ಕುತ್ತಿಗೆಯಲ್ಲಿ ಯಜ್ಞೋಪವೀತವಿದ್ದಿತು. ಅವನು ಹಾಡಿನ ಸಂಕೇತದಿಂದಬಂದು, 'ಏನಾಯಿತು?' ಎಂದನು.

ಸುಂದರಿ—ನೋಡಿ ಗೊತ್ತಾಗಲಿಲ್ಲವೆ?

ಪುರುಷ—ಏನೂ ಇಲ್ಲ—ಬರುವುದೇನು?

ರತ್ನಗಂಬಳಿಯ ಮೇಲೊಂದು ಸಣ್ಣ ದುರ್ಬೀನಿದ್ದಿತು. ಆ ಕಾಲದಲ್ಲಿ ಭಾರತ ವರ್ಷಕ್ಕೆ ದುರ್ಬೀನು ಹೊಸದಾಗಿ ಬಂದಿದ್ದಿತು. ಅವಳು ದುರ್ಬೀನನ್ನು ತೆಗೆದು ಅವನ ಕೈಯಲ್ಲಿ ಕೊಟ್ಟಳು—ಏನನ್ನೂ ಹೇಳಲಿಲ್ಲ. ಅವನು ದುರ್ಬೀನನ್ನು ತೆಗೆದು ಕೊಂಡು ನದಿಯಲ್ಲಿ ಎಲ್ಲಾ ದಿಕ್ಕುಗಳಲ್ಲಿಯೂ ನೋಡಿದನು. ಒಂದು ಕಡೆಯಲ್ಲಿ ಮತ್ತೊಂದುಚಿಕ್ಕ ಹಡಗು ಇದ್ದುದನ್ನು ನೋಡಿ, 'ಒಂದು ಹಡಗು ಹಳ್ಳದಲ್ಲಿದೆ; ಅದಾವುದು?' ಎಂದನು.

ಉತ್ತರ—ಈ ನದಿಯಲ್ಲಿ ಇಂದು ನಾಳೆ ಬೇರೆ ಹಡಗಾವುದೂ ಬರುವ ವರ್ತ ಮಾನವಿಲ್ಲ.

ಪುರುಷನು ಪುನಃ ದುರ್ಬೀನನ್ನು ಹಿಡಿದು ನೋಡುತಿದ್ದನು.

ಯುವತಿಯು ವೀಣೆಯನ್ನು ನುಡಿಸುತ್ತ, 'ರಂಗರಾಜ!' ಎಂದು ಕೂಗಿದಳು.

ರಂಗರಾಜ—ಏನು ಅಪ್ಪಣೆ?

'ಏನಿದೆ, ನೋಡು?'

ರಂಗರಾಜ—ಕೆಲವು ಜನರಾರೋ ಅದರಲ್ಲಿರುವ ಹಾಗಿದೆ, ಅಷ್ಟು ಮಾತ್ರ ಕಾಣುತ್ತದೆ.

ಯುವತಿ—ಎಷ್ಟು ಜನ?

ರಂಗರಾಜ—ಚೆನ್ನಾಗಿ ಗೊತ್ತಾಗುವುದಿಲ್ಲ. ಬಹಳ ಮಂದಿ ಜನರಿಲ್ಲ—ಹಡ ಗನ್ನು ಬಿಚ್ಚಲೆ?

ಯುವತಿ—ಬಿಚ್ಚು ಕತ್ತಲೆಯಾಗಿರುವ ಕಡೆಯಲ್ಲಿಯೇ ಮೆಲ್ಲಮೆಲ್ಲಗೆ ತೆಗೆದು ಕೊಂಡು ಹೋಗು.

ಆಗ ರಂಗರಾಜನು ನಾವಿಕರನ್ನು ಕುರಿತು 'ಹಡಗನ್ನು ಬಿಚ್ಚಿರಿ' ಎಂದನು.

---

## ನಾಲ್ಕನೆಯ ಪರಿಚ್ಛೇದ

ನದಿಯಲ್ಲಿ ಆಲಮರದ ನೆರಳಿನಲ್ಲಿ ಮತ್ತೊಂದು ಹಡಗು, ಇದ್ದಿತೆಂದು ಹೇಳಿದ್ದೆವು. ಅದು ಅರವತ್ತು ಮೊಳ ಉದ್ದ, ಮೂರು ಮಾರು ಅಗಲವಿದ್ದಿತು. ಅದರಲ್ಲಿ ಐವತ್ತು ಮಂದಿ ಜನರು ಅಡಗಿ ಮಲಗಿದ್ದರು. ರಂಗರಾಜನ ಸಂಕೇತವನ್ನು ಕೇಳಿ ಆ ಐವತ್ತು ಜನರೂ ಎದ್ದರು. ಒಬ್ಬೊಬ್ಬನಲ್ಲಿಯೂ ಒಂದೊಂದು ದೊಣ್ಣೆ, ಒಂದೊಂದು ಕತ್ತಿ, ಒಂದೊಂದು ಗುರಾಣಿ. ಅವರು ತಮ್ಮತಮ್ಮ ಆಯುಧಗಳನ್ನು ಪಾರ್ಶ್ವದಲ್ಲಿಟ್ಟುಕೊಂಡು ಹಡಗಿನ ಮೇಲುಬಾಗದಲ್ಲಿ ಕುಳಿತಿದ್ದರು. ಒಬ್ಬನೂ ಶಬ್ದ ಮಾಡುತ್ತಿರಲಿಲ್ಲ. ನಿಶ್ಶಬ್ದವಾಗಿ ಹಡಗನ್ನು ಬಿಚ್ಚಿ ತಂದದನ್ನು ಯುವತಿಯು ಕುಳಿತಿದ್ದ ಹಡಗಿಗೆ ತಗಲಿಸಿದರು. ರಂಗರಾಜನು ತನ್ನ ಪಂಚಾಯುಧಗಳ ಸಮೇತನಾಗಿ ಆ ಹಡಗಿನ ಮೇಲೆ ಹೋದನು. ಆಗಾ ಯುವತಿಯು ಅವನನ್ನು ಕರೆದು, 'ರಂಗರಾಜ! ಮೊದಲು ನಾನು ಹೇಳಿದುದೆಲ್ಲಾ ಜ್ಞಾಪಕವಿ : ಅದರಂತೆ ಮಾಡಬೇಕು' ಎಂದಳು.

ರಂಗರಾಜನು ಜ್ಞಾಪಕವಿದೆ ಎಂದು ಹೇಳಿ ತನ್ನ ಹಡಗಿನ ಮೇಲೆ ಹೋದನು. ಹಡಗು ಮೆಲ್ಲಮೆಲ್ಲಗೆ ದಡದಲ್ಲಿ ಹೋಯಿತು. ಇತ್ತಲಾಗಿ ರಂಗರಾಜನು ಹಡಗನ್ನು ಬೇಗನೆ ನಡಿಸಬೇಕಾದ ಆವಶ್ಯಕವಿರಲಿಲ್ಲ, ಮತ್ತೊಂದು ಹಡಗು ಬರುತ್ತಿದ್ದ ಹಾಗೆ ರಂಗರಾಜನು ತನ್ನ ಹಡಗನ್ನು ಅದಕ್ಕೆದುರಾಗಿ ಜಾಗ್ರತೆ ನಡೆಯಿಸಲು ಅಪ್ಪಣೆ ಮಾಡಿದನು. ಅವನಲ್ಲಿ ಐವತ್ತು ಮಂದಿ ಜನರಿದ್ದರೂ ನಿಶ್ಶಬ್ದವಾಗಿದ್ದಿತು.

ಇದಿರಾಗಿ ಬಂದಾ ಹಡಗಿನ ಮೇಲುಭಾಗದಲ್ಲಿ ಎಂಟುಮಂದಿ ಹಿಂದುಸ್ಥಾನಿಯ ರಕ್ಷಕರಿದ್ದರು. ಜನರ ಸಹಾಯವಿಲ್ಲದೆ ಆ ಕಾಲದಲ್ಲಿ ಪ್ರಯಾಣಿಕರು ರಾತ್ರಿ ಹಡಗಿನಲ್ಲಿ ಪ್ರಯಾಣಮಾಡುತ್ತಿರಲಿಲ್ಲ. ಎಂಟುಜನರಲ್ಲಿಬ್ಬರು ಆಯುಧವನು ಕೆಳಗಿಟ್ಟುಕೊಂಡು ಕುಳಿತಿದ್ದರು. ಅವರು ಕೆಂಪು ರುಮಾಲುಗಳನ್ನು ಧರಿಸಿದ್ದರು. ಮಿಕ್ಕ ಆರು ಮಂದಿ ದಕ್ಷಿಣದಿಕ್ಕಿನಿಂದ ಮೃದುಮಧುರವಾಗಿ ಬೀಸುತಿದ್ದ ತಣ್ಣೊಂಡ ಮಂದಮಾರುತದಿಂದೊಡಗೂಡಿದಾ ಬೆಳದಿಂಗಳಲ್ಲಿ ಕಪ್ಪಾದ ದಾಡಿಗಳು ಹಾರಾಡುತಿದ್ದ ಹಾಗೆಯೇ ಸುಖವಾಗಿ ನಿದ್ರೆ ಗೈಯುತಿದ್ದರು. ಕಾವಲಿದ್ದವರಲ್ಲೊಬ್ಬನು ಇದಿರಿಗೆ ಬರುತಿದ್ದ ಹಡಗನ್ನು ನೋಡಿ, ಪದ್ಧತಿಯಂತೆ, 'ಹಡಗು, ದೂರದಲ್ಲಿರಲಿ!' ಎಂದು ಕೂಗಿದನು.

ರಂಗರಾಜನು, 'ಬೇಕಾದರೆ ನೀನೇ ದೂರ ಹೋಗು' ಎಂದನು.

ಕಾವಲಿನವನು ಹಡಗಿನಲ್ಲಾರೂ ಕಾಣದಿದ್ದುದನ್ನು ಕಂಡು, ಭಯಪಡಿಸುವುದಕ್ಕೆ ಸಲವಾಗಿ ಬಂದೂಕಿಗೆ ಗುಂಡನ್ನು ಹಾಕದೆ ಬರಿ ಮದ್ದನ್ನು ಹಾಕಿ ಹುಸಿ ಬಂದೂಕನ್ನು ಹಾರಿಸಿದನು. ರಂಗರಾಜನಿಗೆ ಅದು ಹುಸಿ ಬಂದೂಕಿನ ಶಬ್ದವೆಂದು ಗೊತ್ತಾಯಿತು. ಅವನು ನಕ್ಕು, 'ಏನು, ಪಾಂಡೇಠಾಕೂರರೆ! ಒಂದು

ರವೆಯೂ ಇಲ್ಲವೆ ಹೋಯಿತೆ! ರವೆ ಇರುವ ತೋಟೆಯನ್ನು ಕೊಡಲೆ?' ಎಂದನು.

ಹೀಗೆಂದು ಹೇಳಿ ರಂಗರಾಜನು ಕಾವಲಿನವನ ತಲೆಗೆ ಗುರಿಯಿಟ್ಟು ಬಂದೂಕನ್ನು ಎತ್ತಿ ಹಿಡಿದನು. ಕಾವಲಿನವನು ತನ್ನ ಬಂದೂಕನ್ನು ಕೆಳಗಿಳಿಸಿ, 'ಹೊಡಿಯ ಬೇಡ' ಎಂದನು. ರಂಗರಾಜನು, 'ನಿನ್ನ ಕೆಂಪು ರುಮಾಲನ್ನು ಹಾರಿಸುವೆನು' ಎಂದು ಹೇಳಿ, ಬಂದೂಕನ್ನು ಬಿಟ್ಟು, ಬಿಲ್ಲು ಅಂಬುಗಳನ್ನು ತೆಗೆದೊಂದು ಅಂಬನ್ನು ತೀವ್ರ ವೇಗದಿಂದ ಬಿಟ್ಟನು. ಕಾವಲಿನವನ ಕೆಂಪು ರುಮಾಲು ಹಾರಿಹೋಯಿತು. ಕಾವಲಿನವನು 'ರಾಮ! ರಾಮ!' ಎಂದು ಕೂಗಿಕೊಂಡನು.

ಅಷ್ಟರಲ್ಲಾ ಹಡಗು ಬಂದು ರಂಗರಾಜನ ಹಡಗಿಗೆ ತಾಕಿತು. ರಂಗರಾಜನ ಕಡೆಯ ಹತ್ತು ಹದಿನೈದು ಮಂದಿ ಜನರು ಓಡಿಬಂದು ತಗಲಿದಾ ಹಡಗಿನ ಮೇಲೆ ಆಯುಧ ಸಮೇತರಾಗಿ ಧುಮುಕಿದರು. ಅದರಲ್ಲಿ ಮಲಗಿದ್ದ ಆರು ಮಂದಿ ಕಾವಲಿನವರು ಬಂದೂಕಿನ ಶಬ್ದದಿಂದ ಎಚ್ಚರವಾದರೂ ಗಾಬರಿಯಿಂದ ನಿದ್ರೆಯ ಮೊಬ್ಬಿನಲ್ಲಿ ಕೈಗೆ ಆಯುಧಗಳು ಸಿಕ್ಕದೆ ಅವುಗಳನ್ನು ಹುಡುಕುವುದರಲ್ಲಿದ್ದರು. ರಂಗರಾಜನ ಜನರು ಕೈ ಜಾಗ್ರತೆ ಮಾಡಿ ಆ ಆರುಮಂದಿ ಆಳುಗಳನ್ನು ಹಿಡಿದು ಕಟ್ಟಿಹಾಕಿದರು. ಮೊದಲಿನಿಂದಾ ಆರುಮಂದಿ ಆಳುಗಳು ಎಚ್ಚರವಾಗಿದ್ದು ಯುದ್ಧವನ್ನು ಮಾಡಿದ್ದರೂ ಪ್ರಯೋಜನವಾಗುತ್ತಿರಲಿಲ್ಲ. ಆಕ್ರಮಣಮಾಡಿದವರ ಸಂಖ್ಯೆಯು ಹೆಚ್ಚಾಗಿದ್ದಿತು. ಅವರಾ ಹಡಗಿನಲ್ಲಿದ್ದವರನ್ನೆಲ್ಲಾ ಕಟ್ಟಿ ಅವರ ಕೈಲಿದ್ದ ಆಯುಧಗಳನ್ನೆಲ್ಲಾ ಕಸರಿಕೊಂಡು ಹಡಗಿನ ಕೊಠಡಿಗೆ ಪ್ರವೇಶ ಮಾಡ ಹೋದರು. ಆದರೆ ಒಳಗಡೆ ಬಾಗಿಲಿಗೆ ಅಗಣಿಯು ಹಾಕಿದ್ದಿತು.

ಒಳಗಡೆ ವ್ರಜೇಶ್ವರ. ಅವನು ಮಾವನ ಮನೆಯಿಂದ ಸ್ವಂತ ಮನೆಗೆ ಹೋಗುತ್ತಿದ್ದನು. ದಾರಿಯ್ಲಲ್ಲೀ ವಿಪತ್ತು. ಅದವನು ಧೈರ್ಯಗೊಂಡು ಹೊರಟು ದುದರ ಫಲ. ಬೇರೆ ಜನರಾರೂ ಹಾಗೆ ಪ್ರಯಾಣ ಮಾಡುತ್ತಿರಲಿಲ್ಲ.

ರಂಗರಾಜನು, ಬಾಗಿಲನ್ನು ತಟ್ಟಿ, 'ಸ್ವಾಮಿ! ಬಾಗಿಲನ್ನು ತೆಗೆಯಿರಿ' ಎಂದನು.

ಒಳಗಾಗ ನಿದ್ರೆಯಿಂದೆಚ್ಚರವಾಗಿ ಎದ್ದಿದ್ದ ವ್ರಜೇಶ್ವರನು, 'ಗದ್ದಲ ಮಾಡುವವರಾರು?' ಎಂದನು.

ರಂಗರಾಜ—ಗದ್ದಲವೇನೂ ಇಲ್ಲ. ಹಡಗಿಗೆ ಕಳ್ಳರು ಬಿದ್ದಿದ್ದಾರೆ.

ವ್ರಜೇಶ್ವರನು ಸ್ವಲ್ಪಹೊತ್ತು ನಿಸ್ತಬ್ಧನಾಗಿದ್ದು, ಬಳಿಕ ಕಾವಲಿನವರನ್ನು ಕುರಿತು, 'ಪಾಂಡೆ! ತಿವಾರಿ! ರಾಮಸಿಂಹ!' ಎಂದು ಕೂಗಿದನು.

ರಾಮಸಿಂಹನು, ಹೊರಗಿನಿಂದ, 'ಧರ್ಮಾವತಾರವೆ! ಕೆಟ್ಟ ಕಳ್ಳರು ನಮ್ಮನ್ನೆಲ್ಲಾ ಹಿಡಿದು ಕೈಕಾಲುಗಳನ್ನು ಕಟ್ಟಿಹಾಕಿದ್ದಾರೆ' ಎಂದು ಕೂಗಿಕೊಂಡನು.

ವ್ರಜೇಶ್ವರನು ಸ್ವಲ್ಪನಕ್ಕು, 'ಕೇಳಿ ಬಹಳ ವ್ಯಸನವಾಗುತ್ತದೆ. ನಿಮ್ಮಂತಹ ವೀರರನ್ನು ಬುತ್ತಿ ರೊಟ್ಟಿಯನ್ನು ತಿನ್ನುವುದಕ್ಕೆ ಬಿಡದೆ ಕಟ್ಟಿಹಾಕಿದರೆ! ಕಳ್ಳರು ಬಹಳ ತಪ್ಪನ್ನು ಮಾಡಿದರು. ನಾಳೆ ಬೆಳಿಗ್ಗೆ ನಿಮಗೆ ಭತ್ತೆಯನ್ನು ಹೆಚ್ಚು ಮಾಡ ಬೇಕೆಂದಿದ್ದೇನೆ. ಯೋಚಿಸಬೇಡಿ!' ಎಂದನು.

ಕೇಳಿ ರಂಗರಾಜನೂ ಸ್ವಲ್ಪ ನಕ್ಕು, 'ನನಗೂ ಅದೇ ಅಭಿಪ್ರಾಯ' ವೆಂದು ಹೇಳಿ, 'ಈಗ ಬಾಗಿಲನ್ನು ತೆಗೆಯಿರಿ' ಎಂದನು.

ವ್ರಜೇಶ್ವರ—ನೀನಾರು ?

ರಂಗರಾಜ—ನಾನೊಬ್ಬ ಕಳ್ಳ. ಬಾಗಿಲನ್ನು ತೆಗೆಯಬೇಕೆಂದು ಕೋರು ತ್ತೇನೆ.

ವ್ರ ಜೇಶ್ವರ—ಬಾಗಿಲನ್ನೇಕೆ ತೆಗೆಯಲಿ ?

ರಂಗರಾಜ—ನಿಮ್ಮ ಸರ್ವಸ್ವವನ್ನೂ ಲೂಟಿ ಮಾಡುವುದಕ್ಕೆ.

ವ್ರಜೇಶ್ವರ—ಏಕೆ ? ನನ್ನನ್ನು ಹಿಂದೂಸ್ಥಾನಿಯ ಕಾವಲಿನವನೆಂದು ತಿಳಿ ದೆಯೊ ? ನನ್ನ ಕೈಲಿ ಜೋಡು ನಲ್ಲಿಯ ಬಂದೂಕಿದೆ—ಸಿದ್ಧವಾಗಿದೆ. ಈ ಕೊಠಡಿಗೆ ಪ್ರವೇಶಮಾಡುವವನ ಪ್ರಾಣವನ್ನು ತೆಗೆದುಕೊಳ್ಳುವೆನು.

ರಂಗರಾಜ— ಒಬ್ಬನು ಪ್ರವೇಶಮಾಡುವುದಿಲ್ಲ. ಎಷ್ಟು ಜನರನ್ನು ಹೊಡಿಯುವೆ? ನೀನೂ ಬ್ರಾಹ್ಮಣ-ನಾನೂ ಬ್ರಾಹ್ಮಣ. ಬ್ರಹ್ಮಹತ್ಯೆಯಾಗು ವುದು—ಅನ್ಯಾಯವಾಗಿ ಬ್ರಹ್ಮಹತ್ಯೆಯಿಂದ ಪ್ರಯೋಜನವಿಲ್ಲ.

ವ್ರಜೇಶ್ವರ—ಆ ಪಾಪವುಂಟಾಗಕೂಡದೆಂದು ನಾನೂ ಒಪ್ಪುತ್ತೇನೆ.

ಆ ಮಾತು ಪೂರೈಸುವುದರೊಳಗಾಗಿ ಮಡಮಡ ಶಬ್ದವಾಯಿತು. ಕೊಠ ಡಿಯ ಮತ್ತೊಂದು ಬಾಗಿಲನ್ನೊಡೆದು ಕಳ್ಳನೊಬ್ಬನು ಕೊಠಡಿಗೆ ಪ್ರವೇಶ ಮಾಡಿದನು. ಅದನ್ನು ಕಂಡು ವ್ರಜೇಶ್ವರನು ಬಂದೂಕನ್ನು ಹಿಂದಿರುಗಿಸಿಕೊಂಡು ಅವನ ತಲೆಯ ಮೇಲೆ ಹೊಡಿದನು. ಕಳ್ಳನು ಮೂರ್ಛಿತನಾಗಿ ಬಿದ್ದನು. ಆ ಸಮಯದಲ್ಲಿ ರಂಗರಾಜನು ತಾನು ನಿಂತಿದ್ದ ಬಾಗಿಲನ್ನು ಕಾಲಿನಿಂದೊದ್ದನು. ಬಾಗಿಲು ಮುರಿದು ಬಿದ್ದಿತು. ರಂಗರಾಜನು ಕೊಠಡಿಯೊಳಗೆ ಹೋದನು. ವ್ರಜೇಶ್ವರನು ಬಂದೂಕನ್ನು ಪುನಃ ತಿರುಗಿಸಿಕೊಂಡು ರಂಗರಾಜನ ಕಡೆಗೆ ಗುರಿ ಹಿಡಿದನು. ಅಷ್ಟರೊಳಗೆ ರಂಗರಾಜನು ಬಂದೂಕನ್ನು ಅವನ ಕೈಯಿಂದ ಕಿತ್ತು ಕೊಂಡನು. ಇಬ್ಬರೂ ಸಮಾನ ಬಲಶಾಲಿಗಳು. ಆದರೆ ರಂಗರಾಜನ ಹಸ್ತ ಲಾಘವು ಹೆಚ್ಚು—ವ್ರಜೇಶ್ವರನು ಬಂದೂಕನ್ನು ಸರಿಮಾಡಿ ಹಿಡಿಯುವುದರೊಳಗೆ ರಂಗರಾಜನು ಅದನ್ನು ಕಿತ್ತುಕೊಂಡನು. ವ್ರಜೇಶ್ವರನು ಕೈಯಿಂದ ಬಲವಾಗಿ ರಂಗರಾಜನ ತಲೆಗೆ ಹೊಡಿಯಲು ಕೈಯೆತ್ತಿದನು. ಆ ಗುದ್ದು ರಂಗರಾಜನ ಕೈಮೇಲೆ ಬಿದ್ದಿತು. ಕೊಠಡಿಯ ಮತ್ತೊಂದು ಮೂಲೆಯಲ್ಲಿ ಕೆಲವು ಆಯುಧ ಗಳಿದ್ದುವು. ವ್ರಜೇಶ್ವರನು ಬೇಗನೆ ಹೋಗಿ ಹರಿತವಾದೊಂದು ಕತ್ತಿಯನ್ನು

ತೆಗೆದುಕೊಂಡು, ನಕ್ಕು, 'ನೋಡು, ನಾನು ಬ್ರಹ್ಮಹತ್ಯೆಗೆ ಅಂಜುವುದಿಲ್ಲ' ಎಂದನು. ಹೀಗೆಂದು ಹೇಳಿ ವ್ರಜೇಶ್ವರನು ರಂಗರಾಜನನ್ನು ಕಡಿಯುವುದಕ್ಕೆ ಕತ್ತಿಯನ್ನೆತ್ತಿದನು. ಅಷ್ಟರಲ್ಲಿ ನಾಲ್ಕೈದು ಮಂದಿ ಕಳ್ಳರು ಓಡಿಬಂದು ಅವನ ಮೇಲೆ ಬಿದ್ದು ಎತ್ತಿದ್ದಾ ಕತ್ತಿಯನ್ನು ಕಿತ್ತುಕೊಂಡರು. ಇಬ್ಬರು ಅವನೆರಡು ಕೈಗಳನ್ನೂ ಹಿಡಿದುಕೊಂಡರು. ಒಬ್ಬನು ಒಂದು ಹಗ್ಗವನ್ನು ತೋರಿ, 'ಕಟ್ಟಿ ಬಿಡಲೆ?' ಎಂದು ಕೇಳಿದನು.

ವ್ರಜೇಶ್ವರ—ಕಟ್ಟಬೇಡ—ನಾನು ಸೋತನೆಂದೊಪ್ಪುತ್ತೇನೆ. ಏನು ಬೇಕೋ ಕೇಳು, ನಾನೇ ಕೊಡುವೆನು.

ರಂಗರಾಜ—ನಿನ್ನಲ್ಲಿರುವುದನ್ನೆಲ್ಲಾ ತೆಗೆದುಕೊಳ್ಳುವೆನು. ಸ್ವಲ್ಪವನ್ನಾದರೂ ಬಿಟ್ಟು ಹೋಗುತಿದ್ದೆನು—ಆದರೆ ನೀನು ಹೊಡಿಯುತಿದ್ದಾ ಪೆಟ್ಟು ಬಿದ್ದಿದ್ದರೆ ನನ್ನ ತಲೆಯು ಒಡೆದು ಹೋಗುತಿದ್ದಿತು. ಆದುದರಿಂದ ಸ್ವಲ್ಪವನ್ನೂ ಬಿಟ್ಟು ಹೋಗುವುದಿಲ್ಲ. ಒಂದು ಕಾಸನ್ನೂ ಬಿಡುವುದಿಲ್ಲ.

ವ್ರಜೇಶ್ವರ—ಕೊಠಡಿಯಲ್ಲಿರುವುದನ್ನೆಲ್ಲಾ ತೆಗೆದುಕೊಂಡು ಹೋಗು; ನಾನದಕ್ಕೆ ಅಡ್ಡಿಮಾಡುವುದಿಲ್ಲ.

ವ್ರಜೇಶ್ವರನಾ ಮಾತನ್ನು ಹೇಳುವುದಕ್ಕೆ ಮೊದಲೇ ಕಳ್ಳರು ಇದ್ದುದನ್ನೆಲ್ಲಾ ತೆಗೆದುಕೊಳ್ಳಲು ಪ್ರಾರಂಭಿಸಿದ್ದರು. ಇಪ್ಪತ್ತೈದು ಮಂದಿ ಕಳ್ಳರು ಬಂದಿದ್ದರು. ಅಲ್ಲಿದ್ದ ಸಾಮಾನುಗಳನ್ನೆಲ್ಲಾ ಹೊತ್ತಿದ್ದರು. ಕೇವಲ ಉಡುವ ಬಟ್ಟೆಗಳು, ಪೂಜೆಯ ಸಾಮಾನು, ಅಷ್ಟನ್ನು ಮಾತ್ರ ಬಿಟ್ಟಿದ್ದರು. ಅದನ್ನೂ ಹೊತ್ತು ಅಲ್ಲೇನನ್ನೂ ಬಿಡದೆ, ರಂಗರಾಜನನ್ನು ಕುರಿತು, 'ಸಾಮಾನುಗಳನ್ನು ಸಾಗಿಸಿದುದಾಯಿತು. ಏನನ್ನೂ ಬಿಟ್ಟಿಲ್ಲ; ಅಪ್ಪಣೆಯಾದರೆ ಸ್ವಸ್ಥಾನಕ್ಕೆ ಹೋಗುವೆವು' ಎಂದರು.

ರಂಗರಾಜ—ನಾನೂ ಬಂದೆನು.

ಹೀಗೆಂದು ಹೇಳಿ, ವ್ರಜೇಶ್ವರನನ್ನು ಕುರಿತು, 'ನೀನು ನಮ್ಮ ಸಂಗಡ ಬರಬೇಕು' ಎಂದನು.

ವ್ರಜೇಶ್ವರ—ಏಕೆ? ನಾನೆಲ್ಲಿಗೆ ಬರಬೇಕು?

ರಂಗರಾಜ—ನಮ್ಮ ರಾಣಿಯ ಬಳಿಗೆ.

ವ್ರಜೇಶ್ವರ—ನಿಮಗೆ ರಾಣಿಯು ಬೇರೆ ಇದ್ದಾಳೆಯೆ? ಅವಳಾರು?

ರಂಗರಾಜ—ನಮ್ಮ ರಾಜರಾಣಿ.

ವ್ರಜೇಶ್ವರ—ಅವಳಾರು, ಪುನಃ? ಕಳ್ಳರಿಗೆ ರಾಜರಾಣಿ ಇದ್ದಾಳೆಂದು ನಾನರಿಯೆ.

ರಂಗರಾಜ—ದೇವೀರಾಣಿಯ ಹೆಸರನ್ನು ಕೇಳಿಲ್ಲವೆ?

ವ್ರಜೇಶ್ವರ—ಓಹೋ! ನೀವು ದೇವೀಚೌಧುರಾಣಿಯ ಕಡೆಯವರೊ?

ರಂಗರಾಜ—ಸುಮ್ಮನೆ ಚರ್ಚೆಯಿಂದೇನು ? ನಾವು ನಮ್ಮ ರಾಣಿಯ ಕಾರ್ಯನಿರ್ವಾಹಕರು.

ವ್ರಜೇಶ್ವರ—ಎಂತಹ ರಾಣಿಯೋ ಅಂತಹ ಕಾರ್ಯನಿರ್ವಾಹಕರು! ನನ್ನನ್ನು ರಾಣಿಯ ಭೇಟಿಗೆ ಕರೆದುಕೊಂಡು ಹೋಗಬೇಕೋ ? ನನ್ನನ್ನು ಕೈದಿಯಾಗಿಟ್ಟು ಆದಾಯ ಪಡೆಯಬೇಕೋ ?

ರಂಗರಾಜ—ಹಡಗಿನಲ್ಲೇನೋ, ಏನೂ ಸಿಗಲಿಲ್ಲ. ನಿನಗೆ ಸ್ವಲ್ಪ ತೊಂದರೆಯನ್ನು ಕೊಟ್ಟರೆ ಏನಾದರೂ ಹೊರಡಬಹುದು.

ವ್ರಜೇಶ್ವರ—ನಿಮ್ಮ ಸಂಗಡ ಹೋಗಲೆನಗೂ ಇಷ್ಟ. ನಿಮ್ಮ ರಾಜ ರಾಣಿಯು ಎಂತಹವಳೋ ನೋಡಿ ಬರಬೇಕು. ಅವಳು ಯುವತಿಯೊ ?

ರಂಗರಾಜ—ಅವಳು ನಮ್ಮ ತಾಯಿ. ಮಕ್ಕಳು ತಾಯಿಯ ವಯಸ್ಸನ್ನು ಹೇಳುವುದಿಲ್ಲ.

ವ್ರಜೇಶ್ವರ—ಬಹಳ ರೂಪವತಿಯೆಂದು ಕೇಳಿದ್ದೇನೆ.

ರಂಗರಾಜ—ನಮ್ಮ ತಾಯಿಯು ಸಾಕ್ಷಾತ್ತು ಮಹಾಲಕ್ಷ್ಮಿ.

ವ್ರಜೇಶ್ವರ—ನಡಿ, ಹಾಗಾದರೆ, ಮಹಾಲಕ್ಷ್ಮಿಯ ಸಂದರ್ಶನವನ್ನು ಮಾಡೋಣ.

ಹೀಗೆಂದು ಹೇಳಿ ವ್ರಜೇಶ್ವರನು ರಂಗರಾಜನ ಜತೆಯಲ್ಲಿ ಕೊಠಡಿಯಿಂದ ಹೊರಗೆ ಬಂದು ನೋಡಲಾಗಿ ಅವನ ನಾವಿಕರೆಲ್ಲರೂ ನದಿಯಲ್ಲಿ ಬಿದ್ದು ಈಸಿ ಕೊಂಡು ಹೋಗುತಿದ್ದರು. ವ್ರಜೇಶ್ವರನು ಅವರನ್ನು ಕೂಗಿ, 'ಈಗ ನೀವು ಹಡಗಿನಮೇಲೆ ಹತ್ತಬಹುದು. ಭಯವಿಲ್ಲ. ಹತ್ತಿರಿ, ನಿಮ್ಮ ಅಲ್ಲಾವಿನ (ದೇವರ) ಹೆಸರನ್ನು ಕೂಗಿರಿ. ನಿಮಗೆ ಪ್ರಾಣ, ಮಾನ, ದೌಲತ್ತು, ಇಜ್ಜತು (ಮರ್ಯಾದೆ), ಮುಂತಾದುವು ಹೆಚ್ಚಾಗಲಿ ! ನೀವು ಬಹಳ ಹುಷಿಯಾರ್ (ಜಾಗರೂಕರು) !' ಎಂದು ಕೂಗಿ ಹೇಳಿದನು.

ನಾವಿಕರು ಆಗೊಬ್ಬಬ್ಬನಾಗಿ ಹಡಗನ್ನು ಹತ್ತಲಾರಂಭಿಸಿದರು. ವ್ರಜೇಶ್ವರನು ರಂಗರಾಜನನ್ನು ಕುರಿತು, 'ನನ್ನ ಕಾವಲಿನವರನ್ನು ಕಟ್ಟುಬಿಚ್ಚಿ ಬಿಡುಗಡೆ ಮಾಡಬಹುದೊ ?' ಎಂದನು.

ರಂಗರಾಜ—ಆಕ್ಷೇಪಣೆಯಿಲ್ಲ. ಅವರು ಬಿಡುಗಡೆಯಾದ ಬಳಿಕ ನಮ ಮೇಲೆ ಬೀಳುವುದಾದರೆ ನಿಮ್ಮ ತಲೆಯುಳಿಯುವುದಿಲ್ಲ. ಆದನ್ನವರಿಗೆ ತಿಳಿಸಬೇಕು.

ವ್ರಜೇಶ್ವರನು ಅವರಿಗೆ ಹಾಗೆ ತಿಳಿಸಿದನಲ್ಲದೆ, ಅವರು ತೋರಿದ ವೀರ್ಯ ಶೌರ್ಯಪರಾಕ್ರಮಗಳಿಗೆ ತಕ್ಕಂತೆ ಅವರ ಸಂಬಳವನ್ನು ಹೆಚ್ಚಿಸುವುದಾಗಿ ಭರವಸೆಯನ್ನೂ ಕೊಟ್ಟು, 'ನೀವು ಎಲ್ಲಿಯೂ ಹೋಗಬೇಡಿರಿ, ನಿರ್ಭಯವಾಗಿರಿ, ಏನನ್ನೂ ಮಾಡಬೇಡಿರಿ, ನಾನು ಜಾಗ್ರತೆಯಾಗಿ ಹಿಂದಿರುಗಿ ಬರುವೆನು' ಎಂದು

ಹೇಳಿ, ಅವನು ರಂಗರಾಜನ ಸಂಗಡ ಮತ್ತೊಂದು ಹಡಗಿನ ಮೇಲೆ ಹತ್ತಿ ಹೋದನು. ಆಗಾ ಹಡಗಿನವರು, 'ದೇವೀರಾಣಿಗೆ ಜಯವಾಗಲಿ!' ಎಂದು ಕೂಗಿದರು. ಹಡಗು ಮುಂದೆ ಸಾಗಿತು.

---

# ಐದನೆಯ ಪರಿಚ್ಛೇದ

ಹಡಗು ಹೋಗುತ್ತ ವ್ರಜೇಶ್ವರನು ರಂಗರಾಜನನ್ನು ಕುರಿತು, 'ನನ್ನನ್ನು ಎಷ್ಟು ದೂರ ಕೊಂಡೊಯ್ವಿರಿ? ನಿಮ್ಮ ರಾಣಿಯರು ಎಲ್ಲಿದ್ದಾರೆ?' ಎಂದು ಕೇಳಿದನು.

ರಂಗರಾಜ—ಮುಂದೆ ಹಡಗು ಕಾಣುತ್ತದೆಯಷ್ಟೆ; ಅದವರ ಹಡಗು.

ವ್ರಜೇಶ್ವರ—ಆ ಹಡಗೆ? ನಾನದನ್ನು ಇಂಗ್ಲೀಷರ ಹಡಗೆಂದೂ, ರಂಗಪುರವನ್ನು ಲೂಟ ಮಾಡುವುದಕ್ಕೆ ಬಂದಿದ್ದಾರೆಂದೂ ತಿಳಿದಿದ್ದೆನು. ಅಷ್ಟೊಂದು ದೊಡ್ಡ ಹಡಗು ಏಕೆ?

ರಂಗರಾಜ—ರಾಣಿಯು ರಾಣಿಯಂತಿರಬೇಕು. ಅದರಲ್ಲಿ ಏಳು ಕೊಠಡಿಗಳಿವೆ.

ವ್ರಜೇಶ್ವರ—ಅಷ್ಟು ಕೊಠಡಿಗಳಲ್ಲಾರಿದ್ದಾರೆ?

ರಂಗರಾಜ—ಒಂದು ದರಬಾರು ಮಾಡುವ ಕೊಠಡಿ. ಒಂದು ಸ್ನಾನ ಮಾಡುವ ಕೊಠಡಿ, ಒಂದರಲ್ಲಿ ಅಡಿಗೆ ಮಾಡುವುದು. ಒಂದು ಖೈದಿಗಳನ್ನು ಇಡುವ ಕೊಠಡಿ. ಇಂದು ನೀನಾ ಕೊಠಡಿಯಲ್ಲಿರಬೇಕು?

ಹೀಗೆ ಮಾತಾಡುತಿದ್ದ ಹಾಗೆ ಹಡಗು ಅದರ ಹತ್ತಿರ ಬಂದು ಸೇರಿತು. ದೇವೀಚೌಧುರಾಣಿಯು ಹಡಗಿನ ಮೇಲಿರಲಿಲ್ಲ. ಅವಳ ಜನರು ಕಳುವು ಮಾಡುತಿದ್ದಾಗ ಹಡಗಿನಮೇಲೆ ಕುಳಿತುಕೊಂಡು ಬೆಳದಿಂಗಳಲ್ಲಿ ವೀಣೆಯನ್ನು ನುಡಿಸುತಿದ್ದಳು. ನುಡಿಸುತಿದ್ದುದು ಚೆನ್ನಾಗಿರಲಿಲ್ಲ. ತಾಳ, ಲಯ, ಸ್ವರಗಳು ಒಂದಕ್ಕೊಂದು ಮೇಳನವಾಗುತ್ತಿರಲಿಲ್ಲ. ಅವಳು ಅನ್ಯಮನಳಾಗಿದ್ದಳು. ಹಡಗು ಹಿಂದಿರುಗಿ ಬರುವಾಗ ಹಡಗಿನ ಮೇಲಿನಿಂದಿಳಿದು ಕೊಠಡಿಯೊಳಗೆ ಹೊರಟು ಹೋದಳು.

ಇತ್ತಲಾಗಿ ರಂಗರಾಜನು ಬಂದು ಕೊಠಡಿಯ ಬಾಗಿಲ ಹತ್ತಿರ ನಿಂತು, 'ರಾಣಿಗೆ ಜಯವಾಗಲಿ!' ಎಂದು ಹೇಳಿದನು. ಬಾಗಿಲಿಗೆ ರೇಷ್ಮೆಯ ಪರದೆಯು ಹಾಕಿದ್ದಿತು. ಒಳಗೆ ಕಾಣುತ್ತಿರಲಿಲ್ಲ. ಒಳಗಿನಿಂದಲೇ ದೇವಿಯು 'ಏನು ಸಮಾಚಾರ?' ಎಂದು ಕೇಳಿದಳು.

ರಂಗರಾಜ—ಎಲ್ಲಾ ಮಂಗಳವಾಗಿದೆ.

ದೇವಿ—ನಮ್ಮ ಜನರಿಗಾರಿಗಾದರೂ ಗಾಯವಾಯಿತೆ?

ರಂಗರಾಜ—ಅರಿಗೇನೂ ಆಗಲಿಲ್ಲ.

ದೇವಿ—ಅವರ ಕಡೆಯುವರಾರಾದರೂ ಖೂನಾದರೆ ?

ರಂಗರಾಜ—ಖೂನಾದವರಾರೂ ಇಲ್ಲ. ತಮ್ಮ ಇಷ್ಟಪ್ರಕಾರ ಕೆಲಸವಾಗಿದೆ.

ದೇವಿ—ಅವರ ಕಡೆಯವರಿಗೆ ಗಾಯವಾಯಿತೆ ?

ರಂಗರಾಜ—ಇಬ್ಬರು ಹಿಂದುಸ್ಥಾನದ ಆಳುಗಳಿಗೆ ಒಂದೆರಡು ಒದೆಗಳು ಬಿದ್ದಿರಬಹುದು.

ದೇವಿ—ಸಾಮಾನುಗಳು ?

ರಂಗರಾಜ—ಎಲ್ಲಾ ತಂದಿದ್ದೇವೆ. ಅಷ್ಟೇನು ಹೆಚ್ಚಿರಲಿಲ್ಲ.

ದೇವಿ—ಬಾಬು ?

ರಂಗರಾಜ—ಬಾಬುವನ್ನು ಹಿಡಿದುಕೊಂಡು ಬಂದಿದ್ದೇವೆ.

ದೇವಿ—ಹಾಜರು ಮಾಡು.

ಆಗ ರಂಗರಾಜನು ವ್ರಜೇಶ್ವರನಿಗೆ ಸನ್ನೆ ಮಾಡಿದನು. ವ್ರಜೇಶ್ವರನು ಹೊರಗಿನ ಕೊಠಡಿಯಿಂದ ಬಂದನು. ಬಂದು ಬಾಗಿಲಲ್ಲಿ ನಿಂತನು.

ದೇವಿಯು, 'ನೀವಾರು ?' ಎಂದು ಕೇಳಿದಳು. ಅವಳಿಗೆ ಗಂಟಲು ಸರಿಯಾಗಿರಲಿಲ್ಲ. ಧ್ವನಿಯು ಸರಿಯಾಗಿ ಹೊರಡಲಿಲ್ಲ.

ವ್ರಜೇಶ್ವರನು ಎಂತಹ ಮನುಷ್ಯನೆಂಬುದು ಪಾಠಕಮಹಾಶಯರಿಗೆ ಗೊತ್ತಿರಬಹುದು. ಭಯವೆಂಬುದು ಅವನಿಗೆ ಚಿಕ್ಕ ವಯಸ್ಸಿನಿಂದಲೂ ಗೊತ್ತಿರಲಿಲ್ಲ. ದೇವೀಚೌಧುರಾಣಿಯ ಹೆಸರನ್ನು ಹೇಳಿದರೆ ಉತ್ತರ ಬಂಗಾಳಾ ಸೀಮೆಯವರಿಗೆಲ್ಲಾ ನಡುಕ ಹತ್ತುವುದು. ವ್ರಜೇಶ್ವರನಿಗೆ ನಗುವು ಬಂದಿತು. 'ಹೆಂಗಸಿಗೆ ಗಂಡಸು ಭಯಪಡುವುದೆ?' ಎಂದು ಯೋಚಿಸಿ, ಹೆಂಗಸಿನ ಮುಂದೆ ಕೈದಿಯಾಗಿ ಬಂದು ನಿಂತಿರುವುದಕ್ಕಾಗಿ ನಕ್ಕು, ದೇವಿಯು ಕೇಳಿದುದಕ್ಕೆ ಉತ್ತರವಾಗಿ, 'ನನ್ನ ಪರಿಚಯದಿಂದಾಗುವುದೇನು ? ನನ್ನ ಹಣಕ್ಕೂ ನಿಮಗೂ ಸಂಬಂಧವೇ ಹೊರತು ಬೇರೆ ಇಲ್ಲ. ಹಣವೇನೋ ಕಸರಿಕೊಂಡಾಯಿತು. ನನ್ನ ಹೆಸರಿನಿಂದ ಹಣವು ಹುಟ್ಟೀತೆ ?' ಎಂದನು.

ದೇವಿ—ಹುಟ್ಟದೆ ಏನು ? ನೀವು ಎಂತಹ ಮನುಷ್ಯರೆಂದು ಗೊತ್ತಾದರೆ ಹಣವಿರುವ ಸ್ಥಳವೂ ಗೊತ್ತಾಗುವುದು. (ಆಗಲೂ ಅವಳ ಧ್ವನಿಯು ಹಾಗೆ.ಹಾಗೆಯೆ.)

ವ್ರಜ—ಅದಕ್ಕೋಸ್ಕರವೋ ನನ್ನನ್ನು ಹಿಡಿದು ಕರೆಯಿಸಿರುವುದು ?

ದೇವಿ—ಇಲ್ಲದಿದ್ದರೆ ನಿಮ್ಮನ್ನು ಹಿಡಿಸುತ್ತಿರಲಿಲ್ಲ.

ದೇವಿಯು ಪರದೆಯೊಳಗಿದ್ದಳಾಗಿ ಅವಳು ಮಾತನ್ನು ಹೇಳುವಾಗ ಕಣ್ಣೊರಸಿಕೊಂಡುದುದನ್ನಾರೂ ನೋಡಲಿಲ್ಲ.

ವ್ರಜ—ನನ್ನ ಹೆಸರು ದುಃಖೀರಾಮ ಚಕ್ರವರ್ತಿಯೆಂದು ಹೇಳಿದರೆ ನೀವು ನಂಬುವಿರೊ ?

ದೇವಿ—ಇಲ್ಲ.

ವ್ರಜ—ಹಾಗಾದರೆ ಕೇಳುವುದರಿಂದ ಪ್ರಯೋಜನವೇನು ?

ದೇವಿ—ನೀವು ಹೇಳುವಿರೋ ಇಲ್ಲವೋ ನೋಡೋಣವೆಂದು.

ವ್ರಜ—ನನ್ನ ಹೆಸರು ಕೃಷ್ಣಗೋವಿಂದ ಘೋಷಾಲ.

ದೇವಿ—ಅದಲ್ಲ.

ವ್ರಜ—ದಯಾರಾಮಬಕ್ಷಿ.

ದೇವಿ—ಅದೂ ಅಲ್ಲ.

ವ್ರಜ—ವ್ರಜೇಶ್ವರರಾಯ.

ದೇವಿ—ಅದಿರಬಹುದು.

ಆ ಸಮಯದಲ್ಲಿ ಮತ್ತೊಬ್ಬ ಹೆಂಗಸು ಶಬ್ದ ಮಾಡದೆ ಬಂದು ದೇವಿಯ ಬಳಿ ಕುಳಿತುಕೊಂಡಳು. ಕುಳಿತುಕೊಂಡು, 'ಗಂಟಲ್ಲಿ ಕಟ್ಟಿಕೊಂಡಿದೇಕೆ ?' ಎಂದಳು.

ದೇವಿಯು ಕಣ್ಣೀರು ತಡೆದು ನಿಲ್ಲಲಾರದೆ ಹೋಯಿತು. ಮಳೆಗಾಲದಲ್ಲಿ ಅರಳಿದ ಹೂವಿನೊಳಗೆ ಮಳೆಯ ನೀರು ತುಂಬಿದ್ದು ಮರದ ಕೊಂಬೆಯನ್ನು ಹಿಡಿದು ಅಲ್ಲಾಡಿಸಿದರದು ಹೇಗೆ ಸುರಿದುಬಿಡುವುದೋ ಹಾಗೆ ದೇವಿಯ ಕಣ್ಣು ಗಳಲ್ಲಿ ತುಂಬಿದ್ದ ನೀರು ಕೊಂಬೆಯನ್ನು ಅಲ್ಲಾಡಿಸುತ್ತಲೇ ದರದರ ಸುರಿಯಿತು. ದೇವಿಯ ಪಕ್ಕದಲ್ಲಿದ್ದವಳ ಕಿವಿಯಲ್ಲಿ, 'ನಾನಿನ್ನೀಹಾಸ್ಯವನ್ನು ನಡೆಯಿಸಲಾರೆನು; ನೀನು ಮಾತಾಡು. ಎಲ್ಲಾ ಗೊತ್ತಿದೆಯಷ್ಟೆ ?' ಎಂದಳು.

ಹೀಗೆಂದು ಹೇಳಿ ದೇವಿಯು ಅಲ್ಲಿಂದೆದ್ದು ಬೇರೆ ಕೊಠಡಿಗೆ ಹೊರಟು ಹೋದಳು. ಆ ಹೆಂಗಸು ದೇವಿಗೆ ಬದುಲಾಗಿ ಕುಳಿತುಕೊಂಡು ವ್ರಜೇಶ್ವರನ ಸಂಗಡ ಮಾತಾಡಿದಳು. ಪಾಠಕಮಹಾಶಯರಿಗೆ ಅವಳ ಪರಿಚಯವುಂಟು. ಅವಳಾ ಬ್ರಾಹ್ಮಣನಿಲ್ಲದ ಬ್ರಾಹ್ಮಣಿಯಾದ ನಿಶೀಠಾಕೂರಿಣಿ.

ನಿಶಿ—ಈಗ ಹೇಳಿದ ಹೆಸರು ಸರಿ. ನಿಮ್ಮ ಹೆಸರು ವ್ರಜೇಶ್ವರರಾಯ !

ವ್ರಜೇಶ್ವರನಿಗೆ ಸ್ವಲ್ಪ ರಗಳೆಗೆ ಬಂದಿತು. ಪರದೆಯ ಹಿಂದುಗಡೆ ಏನೇನೂ ಗೊತ್ತಾಗುತ್ತಿರಲಿಲ್ಲ. ಆವದೂ ಕಾಣುತ್ತಿರಲಿಲ್ಲ. ಆದರೆ ಧ್ವನಿಯಿಂದ ಮೊದಲು ಮಾತಾಡುತಿದ್ದವಳಲ್ಲವೆಂದು ತಿಳಿದನು. ಮೊದಲು ಮಾತಾಡುತಿದ್ದವಳ ಧ್ವನಿಯು ಅತಿ ಮಧುರವಾಗಿದ್ದಿತು. ಈಗಿನವಳ ಧ್ವನಿಯು ಹಾಗಿರಲಿಲ್ಲ. ಹೇಗಾದರೂ ಆಗಲಿ ಕೇಳಿದ ಮಾತಿಗೆ ಉತ್ತರವಾಗಿ, 'ನನ್ನ ಹೆಸರು ಗೊತ್ತಾಯಿತಷ್ಟೆ. ಅದಕ್ಕೆ ಬೆಲೆಯು ನಿಶ್ಚಯವಾಗಲಿ; ಎಷ್ಟು ಬೆಲೆಗೆ ನನ್ನನ್ನು ಖುಲಾಸೆ ಮಾಡು ವಿರಿ ?' ಎಂದನು.

'ನಿಮ್ಮ ಬೆಲೆ ಒಂದು ಹಳೆ ಕುರುಡುಕಾಸು. ಒಂದು ಹಳೆ ಕಾಸು ಇವಿಯೆ? ಇದ್ದರೆ ಕೊಟ್ಟು ಹೊರಟುಹೋಗಬಹುದು.'

ವ್ರಜ—ಈಗ ಸಧ್ಯಕ್ಕದನ್ನು ಸಂಗಡ ತಂದಿಲ್ಲ.

ನಿಶಿ—ನಿಮ್ಮ ಹಡಗಿಗೆ ಹೋಗಿ ತಂದುಕೊಡಿ.

ವ್ರಜ—ಹಡಗಿನಲ್ಲಿದ್ದುದನ್ನೆಲ್ಲಾ ನಿಮ್ಮ ಆಳುಗಳು ತಂದಿದ್ದಾರೆ. ಅಲ್ಲೊಂದು ಕುರುಡುಕಾಸೂ ಇಲ್ಲ.

ನಿಶಿ—ನಿಮ್ಮ ನಾವಿಕರಲ್ಲಿ ಸಾಲಗೊಂಡು ತಂದುಕೊಡಬಹುದು.

ವ್ರಜ—ನಾವಿಕರು ಕುರುಡುಕಾಸನ್ನಿಟ್ಟಿರುವುದಿಲ್ಲ.

ನಿಶಿ—ನಿಮಗೆ ತಕ್ಕ ಬೆಲೆಯನ್ನು ತಂದುಕೊಡದಿರುವವರೆಗೂ ನೀವು ಕೈದಿಯಾಗಿರಬೇಕು.

ಅನಂತರ ವ್ರಜೇಶ್ವರನು ಕೊಠಡಿಯಲ್ಲಿ ಮತ್ತೊಬ್ಬರಾರೋ ಇರುವಹಾಗೆ ತಿಳಿದುಕೊಂಡನು. ಕಂಠವು ಸ್ತ್ರೀಕಂಠವಾಗಿದ್ದಿತು. ರಾಣಿಯನ್ನು ಕುರಿತು, 'ರಾಣಿಜಿ! ಆ ಮನುಷ್ಯನ ಬೆಲೆಯು ಒಂದೇ ಕುರುಡುಕಾಸಾದರೆ ನಾನಾ ಕುರುಡುಕಾಸನ್ನು ಕೊಡುವೆನು. ನನಗೆ ಆವನನ್ನು ಮಾರಿದರೆ ನಾನು ಕೊಂಡುಕೊಳ್ಳುವೆನು' ಎಂದೊಬ್ಬಳು ಹೇಳಿದಳು.

ಹೀಗೆಂದು ಹೇಳಿದುದನ್ನು ವ್ರಜೇಶ್ವರನು ಹೊರಗೆ ನಿಂತು ಕೇಳಿದನು. ಅದಕ್ಕೆ ಉತ್ತರವಾಗಿ ರಾಣಿಯು, 'ಆಕ್ಷೇಪಣೆಯಿಲ್ಲ; ಆದರಾ ಮನುಷ್ಯನನ್ನು ಕೊಂಡುಕೊಂಡು ನೀನೇನನ್ನು ಮಾಡುವೆ? ಅವನು ಬ್ರಾಹ್ಮಣ; ನೀರನ್ನು ಸೇದಲಾರ, ಕಟ್ಟಿಗೆಯನ್ನೊಡಿಯಲಾರನು' ಎಂದು ಹೇಳಿದಳು.

ವ್ರಜೇಶ್ವರನು ಅದನ್ನು ಕೇಳಿದನು. ಅನಂತರ ಒಳಗಾ ರಮಣಿಯು 'ನನಗೆ ಅಡಿಗೆ ಮಾಡುವುದಕ್ಕೆ ಬ್ರಾಹ್ಮಣನಿಲ್ಲ; ನನಗವನು ಅಡಿಗೆ ಮಾಡುತ್ತಾನೆ' ಎಂದಳು.

ಅನಂತರ ನಿಶಿಯು ವ್ರಜೇಶ್ವರರನನ್ನು ಕುರಿತು, 'ಕೇಳಿದಿರೊ? ನಿಮ್ಮನ್ನು ಮಾರಿದ್ದೇವೆ, ನನಗೆ ಕುರುಡುಕಾಸು ಬಂದಿತು. ನಿಮ್ಮನ್ನಾರು ಬೆಲೆಯನ್ನು ಕೊಟ್ಟು ಕೊಂಡುಕೊಂಡರೋ ನೀವವರ ಸಂಗಡ ಹೋಗಬೇಕು. ಅಡಿಗೆಯನ್ನು ಮಾಡಬೇಕು' ಎಂದಳು.

ವ್ರಜೇಶ್ವರ—ಅವರಾರು?

ನಿಶಿ—ಅವಳೊಬ್ಬ ಹೆಂಗಸು, ಹೊರಗೆ ಬರುವವಳಲ್ಲ. ನೀವೇ ಒಳಗೆ ಬರಬಹುದು.

---

## ಆರನೆಯ ಪರಿಚ್ಛೇದ

ವ್ರಜೇಶ್ವರನು ಅಪ್ಪಣೆಯನ್ನು ಪಡೆದು, ಬಾಗಿಲಿಗೆ ಹಾಕಿದ್ದ ಪರದೆಯನ್ನೆತ್ತಿ ಕೊಠಡಿಯೊಳಗೆ ಪ್ರವೇಶಮಾಡಿದನು. ಒಳಗೆ ಹೋಗಿ ನೋಡಲಾಗಿ ಅವನಿಗೆ ಅತ್ಯಾಶ್ಚರ್ಯವುಂಟಾಯಿತು. ಕೊಠಡಿಯೊಳಗೆ ಗೋಡೆಯು ಹಲಿಗೆ

ಯಲ್ಲಿ ಮಾಡಿದ್ದಿತು. ಅದರಮೇಲೆ ಚಿತ್ರವಿಚಿತ್ರ ಚಿತ್ರಗಳಿದ್ದುವು. ಭಕ್ತಜನರು ಪೂಜೆಯನ್ನು ಮಾಡುವ ದಶಭುಜೆಯಾದ ಮಹಾಕಾಳಿಯ ಪ್ರತಿಮೆಯು ಚಿತ್ರಿತವಾಗಿತ್ತು. ಶುಂಭನಿಶುಂಭರ ಯುದ್ಧ, ಮಹಿಷಾಸುರನ ಯುದ್ಧ, ದಶಾವತಾರ, ಅಷ್ಟನಾಯಿಕ ದಿಕ್ಪಾಲಕರು, ಸಪ್ತಮಾತೃಕೆ, ದಶಮಹಾವಿದ್ಯಾ, ಕೈಲಾಸ, ಬೃಂದಾವನ, ಲಂಕೆ, ಇಂದ್ರನ ಸಭೆ, ನವನಾರೀಕುಂಜರ, ವಸ್ತ್ರಾಪಹರಣ ಮುಂತಾದುದೆಲ್ಲಾ ಚಿತ್ರಿತವಾಗಿದ್ದುವು. ಆ ಕೊಠಡಿಯಲ್ಲಿ ನಾಲ್ಕಂಗುಲದ ದಪ್ಪದ ಮೃದುವಾದ ರತ್ನ ಗಂಬಳಿಯು ನೆಲಕ್ಕೆ ಹಾಸಿತ್ತು. ಅದರಲ್ಲಿಯೂ ಅನೇಕ ಚಿತ್ರಗಳಿದ್ದುವು. ಆದರಮೇಲೆ ಒಂದು ಸಿಂಹಾಸನ. ಸಿಂಹಾಸನದ ಮೇಲೆ ಕಿನ್‌ಕಾಬಿನಿಂದ ಮಾಡಲ್ಪಟ್ಟ ಹಂಸತೂಲಿಕಾತಲ್ಪ—ಅವಲ್ಲದೆ ಬಂಗಾರದ ಅತ್ತರದಾನು, ಬಂಗಾರದ ಪುಷ್ಪಪಾತ್ರೆ, ಅದರಲ್ಲಿ ಗೋಪುರವಾಗಿ ಮಾಡಿಟ್ಟದ್ದ ಸುಗಂಧವುಳ್ಳ ಪುಷ್ಪ, ಬಂಗಾರದ ಗುಡಿಗುಡಿ. ಆದರಲ್ಲಿ ಕಸ್ತೂರಿ ಮಿಶ್ರಿತವಾದ ತಂಬಾಕು. ಎರಡು ಕಡೆಗಳಲ್ಲಿಯೂ ಬೆಳ್ಳಿಯ ದೀಪದ ಕಂಬಗಳು. ಅವುಗಳಲ್ಲಿ ಗಂಧದ ಎಣ್ಣೆ ಹಾಕಿ ದೀಪವು ಉರಿಯುತಿದ್ದಿತು. ಮೇಲೆ ಛಾವಣಿಯಿಂದ ಬಂಗಾರದ ಸರಪಣಿಗೆ ತೂಗುಹಾಕಿದ್ದ ಬಂಗಾರ ತೂಗುದೀಪ. ನಾಲ್ಕು ಮೂಲೆಗಳಲ್ಲಿಯೂ ನಾಲ್ಕು ಬೆಳ್ಳಿಯ ಪ್ರತಿಮೆಗಳು ಮನುಷ್ಯಾಕೃತಿಯಾಗಿ ನಿಂತಿದ್ದುವು, ಅವುಗಳ ಕೈಲಿ ದೀಪ. ಸಿಂಹಾಸನದ ಮೇಲೊಬ್ಬ ರಮಣಿಯು ಮಲಗಿದ್ದಾಳೆ. ಅವಳ ಮುಖದ ಮೇಲೆ ಜರತಾರಿಯ ಅಂಚಿನೊಂದು ಮಲಮಲಿನ ವಸ್ತ್ರವು ಹೊದಿಸಿದ್ದಿತು. ಮುಖವು ಚೆನ್ನಾಗಿ ಕಾಣುತಿರಲಿಲ್ಲ. ಆದರವಳ ವರ್ಣವು ಕಾಸಿದ ಬಂಗಾರದಂತಿರುವುದು. ಕಪ್ಪಾದ ಮುಂಗುರುಳು ಕಣ್ಣಿಗೆ ಅನುಭವವಾಗುತಿದ್ದಿತು. ಕರ್ಣಾಭರಣಗಳು ಬಟ್ಟೆಯೊಳಗಿನಿಂದ ಹೊಳೆಯುತಿದ್ದುವು. ಅದಕ್ಕೆ ಮೇಲಾಗಿ ಅವಳ ಕಣ್ಣುಗಳ ಕಟಾಕ್ಷವು ಪ್ರಕಾಶಿಸುದ್ದಿತು. ಹೆಂಗಸು ಮಲಗಿದ್ದವಳು ನಿದ್ರೆಮಾಡುತ್ತಿರಲಿಲ್ಲ.

ವ್ರಜೇಶ್ವರನು ದರಬಾರಾಗುವ ಕೊಠಡಿಯೊಳಗೆ ಪ್ರವೇಶ ಮಾಡಿ, ಮಲಗಿದ್ದ ರಮಣಿಯನ್ನು ನೋಡಿ, 'ರಾಣಿಯವರಿಗೆ ಏನೆಂದು ಆಶೀರ್ವಾದ ಮಾಡಲಿ?' ಎಂದನು.

ಸುಂದರಿ—ನಾನು ರಾಣಿಯಲ್ಲ.

ವ್ರಜೇಶ್ವರನಾ ಮಾತನ್ನು ಕೇಳಿ ಅವನದುವರೆಗೂ ಕೇಳಿದ್ದ ಸ್ತ್ರೀಕಂಠವಲ್ಲವೆಂದು ತಿಳಿದನು. ಅವಳ ಧ್ವನಿಯನ್ನು ಕೇಳಿದರೆ ಬೇಕೆಂದವಳು ವಿಕೃತ ಸ್ವರದಿಂದ ಮಾತಾಡಿದಂತೆ ತಿಳಿದುಬಂದಿತು. ಅವನು ಮನಸ್ಸಿನಲ್ಲಿ, 'ದೇವೀಚೌಧುರಾಣಿಯು ಅತಿ ಮಾಯಾವಿನಿ; ಅಷ್ಟೊಂದು ಕುಹಕವಿಲ್ಲದಿದ್ದರೆ ಹೆಂಗಸಾಗಿ ದೇಶಕ್ಕೆಲ್ಲಾ ಮಹಾಭಯವನ್ನುಂಟುಮಾಡುವಷ್ಟು ಸಾವಿರಾರು ದರೋಡೆ ಡಕಾಯಿತಿಗಳನ್ನು ಮಾಡಬಲ್ಲವಳಾಗಿದ್ದಳೆ?' ಎಂದು ಭಾವಿಸಿ, ಪ್ರಕಾಶ್ಯವಾಗಿ, 'ನಾನಿದುವರೆಗೆ ಆರ ಸಂಗಡ ಮಾತಾಡುತಿದ್ದೆನೋ ಆ ರಮಣಿಯು ಎಲ್ಲಿ?' ಎಂದು ಕೇಳಿದನು.

ಸುಂದರಿ—ನಿಮ್ಮನ್ನು ಒಳಗೆ ಬರುವುದಕ್ಕೆ ಅಪ್ಪಣೆಯನ್ನು ಮಾಡಿ ಮಲಗುವುದಕ್ಕೆ ಹೋದಳು. ರಾಣಿಯಿಂದ ನಿಮಗೇನೂ ಕೆಲಸವಿಲ್ಲ.

ವ್ರಜೇಶ್ವರ—ನೀವಾರು ?

ಸುಂದರಿ—ನಿಮ್ಮನ್ನು ಬೆಲೆಕೊಂಡುಕೊಂಡ ನಿಮ್ಮ ಯಜಮಾನಿ.

ವ್ರಜೇಶ್ವರ—ನನ್ನ ಯಜಮಾನಿಯೆ ?

ಸುಂದರಿ—ಗೊತ್ತಿಲ್ಲವೆ ? ಒಂದು ಕುರುಡುಕಾಸನ್ನು ಕೊಟ್ಟು ಬೆಲೆಗೆ ತೆಗೆದುಕೊಳ್ಳಲಿಲ್ಲವೆ ?

ವ್ರಜೇಶ್ವರ—ಹೌದು, ನಿಜ. ನಿಮಗೇವೇ ಆಗಲಿ, ಏನೆಂದು ಆಶೀರ್ವಾದವನ್ನು ಮಾಡಲಿ ?

ಸುಂದರಿ—ಆಶೀರ್ವಾದ ಮಾಡುವುದಕ್ಕೆ ಪಾತ್ರಭೇದವುಂಟೆ ?

ವ್ರಜೇಶ್ವರ—ಹೆಂಗಸರಿಗೆ ಆಶೀರ್ವಾದ ಮಾಡುವುದಲ್ಲಿ ಭೇದವಿದೆ. ಸುಮಂಗಲಿಗೆ ಒಂದು ವಿಧವಾದ ಆಶೀರ್ವಾದ; ಗಂಡನಿಲ್ಲದವಳಿಗೆ ಒಂದು ವಿಧ; ಪುತ್ರವತಿಯಾದವಳಿಗೆ..........

ಸುಂದರಿ—ನನಗೆ ಬೇಗನೆ ಸಾಯಲೆಂದು ಆಶೀರ್ವಾದವನ್ನು ಮಾಡಿರಿ.

ವ್ರಜೇಶ್ವರ—ನಾನು ಅಂತಹ ಆಶೀರ್ವಾದವನ್ನಾರಿಗೂ ಮಾಡುವುದಿಲ್ಲ. ನೀವು ಒಂದುನೂರು ಮೂರುವರ್ಷ ಚಿರಜೀವಿಯಾಗಿ ಚಿರಾಯುಷ್ಮತಿಯಾಗಿರಬೇಕೆಂದು ಆಶೀರ್ವಾದ ಮಾಡುತ್ತೇನೆ.

ಸುಂದರಿ—ನನಗೆ ಈಗ ಇಪ್ಪತ್ತೈದು ವರ್ಷಗಳು. ನೀವು ಎಪ್ಪತ್ತೆಂಟು ವರ್ಷದತನಕ ಅನ್ನಮಾಡಿ ಹಾಕಬಲ್ಲಿರಾ ?

ವ್ರಜೇಶ್ವರ—ಮೊದಲೊಂದು ದಿನ ಅನ್ನವನ್ನು ಮಾಡುತ್ತೇನೆ. ಊಟಮಾಡಿ ನೋಡಿ. ಆಗಬಹುದಾದರೆ ಎಪ್ಪತ್ತೆಂಟು ವರ್ಷಗಳೂ ಮಾಡುವೆನು.

ಸುಂದರಿ—ಹಾಗಾದರೆ ಕುಳಿತುಕೊಳ್ಳಿರಿ. ಹೇಗೆ ಅಡಿಗೆಯನ್ನು ಮಾಡುವಿರೋ ಅದನ್ನು ಹೇಳಿರಿ.

ವ್ರಜೇಶ್ವರನಾ ಕೋಮಲವಾದ ರತ್ನಗಂಬಳಿಯಮೇಲೆ ಕುಳಿತುಕೊಂಡನು.

ಸುಂದರಿ—ನಿಮ್ಮ ಹೆಸರೇನು ?

ವ್ರಜೇಶ್ವರ—ಅದೆಲ್ಲಾ ನಿಮಗೆ ಮೊದಲೇ ಗೊತ್ತಿರಬೇಕು. ನನ್ನ ಹೆಸರು ವ್ರಜೇಶ್ವರ. ನಿಮ್ಮ ಹೆಸರೇನು ? ಗಂಟಲನ್ನು ದಪ್ಪಮಾಡಿಕೊಂಡು ಮಾತಾಡುತ್ತೀರಿ. ಏಕೆ ? ನಾನು ನಿಮಗೆ ತಿಳಿದ ಮನುಷ್ಯನೆ ?

ಸುಂದರಿ—ನಾನು ನಿಮ್ಮ ಯಜಮಾನಿ. ನನ್ನ ಸಂಗಡ ಮಾತಾಡುವಾಗ, 'ತಾವು,' 'ಅಪ್ಪಣೆಪ್ರಕಾರ' ಎಂದು ಮರ್ಯಾದೆಯಿಂದ ಮಾತಾಡಬೇಕು.

ವ್ರಜೇಶ್ವರ—ಅಪ್ಪಣೆಪ್ರಕಾರ—ತಮ್ಮ ಹೆಸರೇನು ?

ಸುಂದರಿ—ನನ್ನ ಹೆಸರು ಸುಡುಗಾಡು—ನಾನು ನಿಮ್ಮ ಯಜಮಾನಿಯಾಗಿ

ದ್ದೇನೆ. ನನ್ನ ಹೆಸರನ್ನು ಕೇಳಕೂಡದು. ನಿಮ್ಮ ಹೆಸರನ್ನು ಹಿಡಿದು ನಾನೂ ಕರೆಯುವುದಿಲ್ಲ.

ವ್ರಜೇಶ್ವರ—ಹಾಗಾದರೆ ಏನೆಂದು ಕರೆದರೆ ನಾನು ಬಂದು ಸನ್ನಿಧಾನದಲ್ಲಿ ಹಾಜರಾಗಲಿ ?

ಸುಡುಗಾಡು—ನಿಮ್ಮನ್ನು ನಾನು ರಾಮಧನ ಎಂದು ಕೂಗುವೆನು. ನೀವು ನನ್ನನ್ನು ಮುನೀಬ ಠಾಕೂರಿಣಿ ಎಂದು ಹೇಳಬೇಕು. ಈಗ ಹೇಳಿ, ನೀವಿರುವುದಾವ ಊರು ?

ವ್ರಜೇಶ್ವರ—ಒಂದು ಕಾಸಿನ ಬೆಲೆಗೆ ಕೊಂಡುಕೊಂಡಿರುವವನ ಪರಿಚಯದಿಂದ ಪ್ರಯೋಜನವೇನು ?

ಸುಂದರಿ—ಅದನ್ನು ಹೇಳದಿದ್ದರೆ ಒಳ್ಳೆಯದಾಯಿತು. ರಂಗರಾಜನನ್ನು ಕೇಳಿದರೆ ಗೊತ್ತಾಗುತ್ತದೆ. ನೀವೇನು, ವೈದಿಕರೋ ? ವಾರೇಂದ್ರರೋ ? ರಾಟಗರೋ ? ಆವ ಗುಂಪಿಗೆ ಸೇರಿದವರು ?

ವ್ರಜೇಶ್ವರ—ಆದಾದರೇನು ? ನಾನು ಮಾಡುವ ಅನ್ನವನ್ನೇ ಊಟ ಮಾಡುವಿರಷ್ಟೆ.

ಸುಂದರಿ—ನೀವು ನಮ್ಮ ಗುಂಪಿಗೆ ಸೇರದಿರುವವರಾದರೆ ಬೇರೆ ಕೆಲಸವನ್ನು ಕೊಡುತ್ತೇನೆ.

ವ್ರಜೇಶ್ವರ—ಬೇರೆ ಕೆಲಸವಾವದು ?

ಸುಂದರಿ—ನೀರನ್ನು ಹೊರುವುದು, ಕಟ್ಟಿಗೆಯನ್ನು ತರುವುದು, ಕೆಲಸಕ್ಕೇನು ಕಡಿಮೆ ?

ವ್ರಜೇಶ್ವರ—ನಾನು ರಾಟಗರ ಗುಂಪಿಗೆ ಸೇರಿದವನು.

ಸುಂದರಿ—ಹಾಗಾದರೆ ನೀವು ನೀರನ್ನು ಸೇದಬೇಕು. ಕಟ್ಟಿಗಯನ್ನೊಡಿಯಬೇಕು. ನಾವು ವಾರೇಂದ್ರರು. ನೀವು ರಾಟಗರಲ್ಲಿ, ಕುಲೀನರೋ ವಂಶಜರೋ ?

ವ್ರಜೇಶ್ವರ—ಆನೂತುಗಳೆಲ್ಲಾ ವಿವಾಹಸಂಬಂಧಕ್ಕಾದರೆ ಬೇಕು. ಅಂತಹ ಸಂಬಂಧವೇನಾದರೂ ಬೆಳೆಯಬೇಕೋ ? ನಾನು ಮದುವೆಯಾದವನು.

ಸುಂದರಿ—ಮದುವೆಯಾದವರೆ ? ನಿಮಗೆಷ್ಟು ಮಂದಿ ಹೆಂಡಂದಿರು ?

ವ್ರಜೇಶ್ವರ—ನೀರನ್ನು ಸೇದುವವನು ನಾನು. ನೀರನ್ನು ಹೊರುತ್ತೇನೆ. ಇಷ್ಟೆಲ್ಲಾ ನನ್ನ ಪರಿಚಯವನ್ನು ಕೊಡಲಾರೆನು.

ಆಗ ಸುಂದರಿಯು ರಾಣಿಯನ್ನು ಕರೆದು, 'ರಾಣಿ ! ಈ ಬ್ರಾಹ್ಮಣ ಮಹಾಶಯರು ಬಹಳ ಅವಿಧೇಯರಾಗಿದ್ದಾರೆ. ಕೇಳಿದ ಮಾತಿಗೆ ಉತ್ತರವನ್ನು ಕೊಡುವುದಿಲ್ಲ' ವೆಂದಳು.

ನಿಶಿಯು ಮತ್ತೊಂದು ಕೊಠಡಿಯಿಂದ, 'ಉತ್ತರವನ್ನು ಕೊಡದಿದ್ದರೆ ಚಡೀ ಹೊಡಿಸು' ಎಂದಳು.

ಆಗೊಬ್ಬ ಪರಿಚಾರಿಕೆಯು ಒಂದು ಬೆತ್ತವನ್ನು ಹಿಡಿದು, 'ಛಳ್ ಛಳ್' ಎಂದು ಬೀಸಿ, ಅದನ್ನಾ ಸುಂದರಿಯು ಕುಳಿತಿದ್ದ ಸ್ಥಳದಲ್ಲಿ ಹಾಕಿ ಹೊರಟು ಹೋದಳು. ಸುಂದರಿಯು ಬೆತ್ತವನ್ನು ಕೈಗೆ ತೆಗೆದುಕೊಂಡು ಮುಖದ ಮೇಲೆ ಹಾಕಿಕೊಂಡಿದ್ದ ಬಟ್ಟೆಯೊಳಗೆ ಮಧುರವಾದ ಅಧರವನ್ನು ಮನೋಹರವಾದ ದಂತ ಗಳಿಂದ ಕಡಿದು ತಾನು ಕುಳಿತಿದ್ದ ತಿವಾಸಿಯ ಮೇಲೆ 'ಚಟ್‌ಚಟ್' ಎಂದು ಎರಡು ಮೂರು ಪೆಟ್ಟುಗಳನ್ನು ಹೊಡಿದು 'ನೋಡಿದರೋ ?' ಎಂದಳು.

ವ್ರಜೇಶ್ವರನು ನಕ್ಕು, 'ತಾವೇನನ್ನು ಮಾಡಿದರೂ ಮಾಡಬಲ್ಲಿರಿ. ಏನನ್ನು ಬೇಕಾದರೂ ಹೇಳುತ್ತೇನೆ' ಎಂದನು.

ಸುಂದರಿ—ನಿಮ್ಮ ಪರಿಚಯವು ನಮಗೆ ಬೇಕಿಲ್ಲ. ನಿಮ್ಮ ಪರಿಚಯದಿಂದಾಗ ಬೇಕಾದುದೇನೂ ಇಲ್ಲ. ನೀವು ಅಡಿಗೆಯನ್ನು ಮಾಡಿದರೆ ನಾವು ಊಟಮಾಡುವು ದಿಲ್ಲ. ಮತ್ತಾವ ಕೆಲಸವನ್ನು ಮಾಡಬಲ್ಲಿರಿ ? ಹೇಳಿರಿ.

ವ್ರಜೇಶ್ವರ—ಅಪ್ಪಣೆಯಾಗಲಿ.

ಸುಂದರಿ—ನೀರನ್ನು ಹೊರುವಿರೊ ?

ವ್ರಜೇಶ್ವರ—ಇಲ್ಲ.

ಸುಂದರಿ—ಕಟ್ಟಿಗೆಯನ್ನು ಕಡಿಯುವಿರೋ ?

ವ್ರಜೇಶ್ವರ—ಇಲ್ಲ.

ಸುಂದರಿ—ಸಂತೆಗೆ ಹೋಗಿ ವ್ಯಾಪಾರವನ್ನು ಮಾಡಬಲ್ಲಿರೋ ?

ವ್ರಜೇಶ್ವರ—ತಪ್ಪು ತಪ್ಪಾಗಿ.

ಸುಂದರಿ—ತಪ್ಪಾಗಿ ಮಾಡಿದರೆ ಸಾಗದು. ಬೀಸಣಿಗೆಯಿಂದ ಗಾಳಿಯನ್ನು ಹಾಕುವಿರೋ ?

ವ್ರಜೇಶ್ವರ—ಗಾಳಿಯನ್ನು ಹಾಕಬಲ್ಲೆನು.

ಸುಂದರಿ—ಒಳ್ಳೆಯದು. ಈ ಚಾಮರವನ್ನು ತೆಗೆದುಕೊಂಡು ಬೀಸಿ.

ವ್ರಜೇಶ್ವರನು ಚಾಮರವನ್ನು ತೆಗೆದುಕೊಂಡು ಬೀಸಲಾರಂಭಿಸಿದನು. ಆಗವಳು, 'ಕಾಲನ್ನೊತ್ತಬಲ್ಲಿರೋ ?' ಎಂದಳು.

ವ್ರಜೇಶ್ವರನ ದುರದೃಷ್ಟ ! ಆ ಸುಂದರಿಯು ಕೆಟ್ಟಬಾಯಿನವಳೆಂದು ತಿಳಿದು, ಕಳ್ಳರ ಅರಸಿಯ ಮನಸ್ಸನ್ನು ಹೇಗಾದರೂ ಸಂತೋಷಪಡಿಸಿ, ಅವಳ ಕೈಯಿಂದ ತಪ್ಪಿಸಿಕೊಂಡು ಹೋಗಬೇಕೆಂಬ ಅಭಿಪ್ರಾಯದಿಂದ, ಸರಸವಾದ ಮಾತಾಡೋಣ ವೆಂದು ಯೋಚಿಸಿಕೊಂಡು, 'ನಿನ್ನಂತಹ ಸುಂದರಿಯ ಕಾಲನ್ನೊತ್ತುವುದು ನನ್ನ ಭಾಗ್ಯವೇ ಸರಿ' ಎಂದನು.

ಸುಂದರಿಯು ಹಾಗಾದರೆ 'ಒತ್ತಡವೆ ಒತ್ತಬಾರದೆ?' ಎಂದು ಹೇಳಿ, ಬಾಳೇ ಕಂಬದಂತಿದ್ದ ಕಾಲನ್ನು ಅವನ ಕಡೆಗೆ ನೀಡಿದಳು.

ವ್ರಜೇಶ್ವರನಿಗೆ ಯತ್ನವಿಲ್ಲವಾಗಿ ಬಂತು. ತಾನಾಗಿಯೇ ಹೇಳಿಕೊಂಡ

ಮಾತು; ಮಾಡುವುದೇನು ? ಯತ್ನವಿಲ್ಲದೆ ಎರಡು ಕೈಗಳಿಂದಲೂ ಕಾಲನ್ನು ಹಿಡಿದೊತ್ತಿದನು. ಕಾಲೊತ್ತುತ್ತ ಮನಸ್ಸಿನಲ್ಲಿ ಇದೇನೋ ಬಹಳ ನೀಚವಾದ ಕೆಲಸ; ಜಾತಿಯು ಉಳಿಯುವ ಹಾಗಿಲ್ಲ. ಹೇಗಾದರೂ ಮಾಡಿ ಇವರ ಕೈಯಿಂದ ಉಳಿದುಕೊಂಡು ಉದ್ಧಾರವಾಗಿ ಹೋದರೆ ಪ್ರಾಜಾಪತ್ಯ ಮುಂತಾದ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡು ತೀರಬೇಕೆಂದಂದುಕೊಂಡನು.

ಆಗಾ ದುಷ್ಟೆಯಾದ ಸುಂದರಿಯು, ' ರಾಣಿಜಿ! ಒತ್ತಡವೆ ಇತ್ತ ಕಡೆ ಬಂದು ಹೋಗೋಣಾಗಲಿ' ಎಂದಳು.

ದೇವೀಜೌಘ:ರಾಣಿಯು ಬರುವ ಶಬ್ದವನ್ನು ಕೇಳಿ ವ್ರಜೇಶ್ವರನು ಸುಂದರಿಯ ಕಾಲನ್ನು ಸ್ವಲ್ಪ ಸರಿಸಿಬಿಟ್ಟನು. ಸುಂದರಿಯು ನಕ್ಕು, 'ಅದೇಕೆ? ಕಾಲನ್ನು ಸರಿಸಿದಿರಿ?' ಎಂದಳು. ಆಗವಳು ತನ್ನ ಸಹಜವಾದ ಧ್ವನಿಯಿಂದ ಮಾತಾಡಿದಳು. ವ್ರಜೇಶ್ವರನು ಬಹಳ ಆಶ್ಚರ್ಯಪಟ್ಟವನಾಗಿ, 'ಇದೇನು ? ಈ ಕಂಠವು ನನಗೆ ಗೊತ್ತಾದ ಕಂಠವಾಗಿದೆ?' ಎಂದು ಹೇಳಿ, ಧೈರ್ಯಗೊಂಡವಳ ಮುಖಾವರಣವನ್ನು ತೆಗೆದನು. ಸುಂದರಿಯು ಕಿಲಕಿಲ ನಕ್ಕಳು.

ವ್ರಜೇಶ್ವರನು, 'ಇದೇನು ! ಇದೇನು !! ನೀನು ಸಾಗರೆಯೆ ?' ಎಂದನು.

ಸುಂದರಿಯು, ' ನಾನು ಸಾಗರೆ. ಗಂಗೆಯಲ್ಲ, ಯಮುನೆಯಲ್ಲ, ಕೊಲ್ಲಿಯಲ್ಲ. ಸಾಕ್ಷಾತ್ತು ಸಾಗರ. ನಿಮಗೆ ಬಹಳ ದುರದೃಷ್ಟವಲ್ಲವೆ? ಪರಸ್ತ್ರೀಯೆಂದು ತಿಳಿದಿದ್ದಾಗ ಬಹಳ ಸಂತೋಷದಿಂದ ಕಾಲನ್ನೊತ್ತುತ್ತಿದ್ದಿರಿ; ಮನೆಯ ಹೆಂಗಸಾಗಿ ಕಾಲನ್ನೊತ್ತಬೇಕೆಂದು ಹೇಳಿದಾಗ ಕೋಪದಿಂದ ರೇಗಿರೇಗಿ ಹೊರಟುಹೋದರಲ್ಲವೆ ? ಹೋಗಲಿ; ನನ್ನ ಪ್ರತಿಜ್ಞೆಯು ಭಂಗವಾಗಲಿಲ್ಲ. ನೀವು ನನ್ನ ಕಾಲನ್ನೊತ್ತಿದಿರಿ. ಈಗ ನನ್ನನ್ನು ಮುಖವೆತ್ತಿ ಚೆನ್ನಾಗಿ ನೋಡೋಣಾಗಲಿ. ತ್ಯಾಗಮಾಡಿದರೂ ಮಾಡಬಹುದು, ಗ್ರಹಿಸಿದರೂ ಗ್ರಹಿಸಬಹುದು. ಈಗ ನಾನು ಯಥಾರ್ಥವಾದ ಬ್ರಾಹ್ಮಣರ ಹೆಂಗಸಾದೆನು. ನೀವು ಯಥಾರ್ಥವಾದ ಸ್ವನಾಮಖ್ಯಾತರಾದ ಬ್ರಾಹ್ಮಣರಾದಿರಿ' ಎಂದಳು

---

## ಏಳನೆಯ ಪರಿಚ್ಛೇದ

ವ್ರಜೇಶ್ವರನು ಸ್ವಲ್ಪ ಹೊತ್ತು ಚದುರಿದ ಮನಸ್ಸುಳ್ಳವನಾಗಿದ್ದವನು, ಕಡೆಗೆ, ' ಸಾಗರ! ನೀನಿಲ್ಲಿಗೆ ಹೇಗೆ ಬಂದೆ?' ಎಂದು ಕೇಳಿದನು. ಸಾಗರೆಯು, ' ಸಾಗರ ಸ್ವಾಮಿಾ ! ತಾವು ಇಲ್ಲಿಗೆ ಹೇಗೆ ಬರೋಣಾಯಿತು ?' ಎಂದಳು.

ವ್ರಜೇಶ್ವರ—ಅದು ಹೇಗೆ ? ನಾನು ಕೈದಿಯಾಗಿ ಬಂದೆನು. ನೀನೂ ಕೈದಿಯಾಗಿ ಬಂದೆಯಾ ? ನನ್ನನ್ನು ಹಿಡಿದುಕೊಂಡು ಬಂದರು. ನಿನ್ನನ್ನೂ ಹಿಡಿದುಕೊಂಡು ಬಂದರೆ ?

ಸಾಗರ—ನಾನು ಕೈದಿಯೂ ಅಲ್ಲ. ನನ್ನನ್ನಾರೂ ಹಿಡಿದುಕೊಂಡು ಬರಲಿಲ್ಲ. ನನ್ನ ಇಷ್ಟಪ್ರಕಾರ ದೇವಿಯ ಸಹಾಯವನ್ನು ಪಡೆದು ಬಂದೆನು. ನೀವು ಕಾಲೊಷ್ಟು ಬೇಕೆಂತಲೇ ದೇವಿಯ ರಾಜ್ಯದಲ್ಲಿ ವಾಸಮಾಡುತ್ತೀನೆ.

ಆಗ ನಿಶಿಯು ಬಂದಳು. ಅವಳ ಉಡುಪುತೊಡಗೆಗಳನ್ನು ನೋಡಿ ವ್ರಜೇಶ್ವರನು ಅವಳೇ ದೇವೀಚೌಧುರಾಣಿಯೆಂದು ತಿಳಿದುಕೊಂಡನು. ವ್ರಜೇಶ್ವರನು ಮರ್ಯಾದೆಗೆ ಸಲವಾಗಿ ಎದ್ದು ನಿಂತನು.

ನಿಶಿ—ಹೆಂಗಸರು ದರೋಡೆ ಕಳ್ಳರಾದ ಮಾತ್ರಕ್ಕೆ ಅಷ್ಟೊಂದು ಮರ್ಯಾದೆ ಮಾಡಬೇಕಾದ ಅವಶ್ಯಕವಿಲ್ಲ. ತಾವು ಕುಳಿತುಕೊಳ್ಳಬಹುದು. ನಿಮ್ಮ ಹಡಗಿನ ಮೇಲೆ ಬಿದ್ದು ಕಳವು ಮಾಡಬೇಕೆಂದು ಕೇಳೋಣಾಗುತ್ತದೋ? ಸಾಗರೆಯ ಶಪಥವನ್ನುದ್ಧಾರಮಾಡುವುದಕ್ಕೆ. ಈಗವಳ ಪ್ರತಿಜ್ಞೆಯು ನೆರವೇರಿತು. ನಿಮ್ಮಿಂದ ನಮಗೆ ಮತ್ತೇನೂ ಪ್ರಯೋಜನವಿಲ್ಲ. ನೀವು ನಿಮ್ಮ ಹಡಗಿಗೆ ಹಿಂದಿರುಗಿ ಹೋಗಬಹುದು. ನಮ್ಮ ಅಡ್ಡಿಯಿಲ್ಲ. ನಿಮ್ಮ ಸಾಮಾನುಗಳಲ್ಲಿ ನಮಗೊಂದು ಕಾಸೂ ಬೇಡ. ನಿಮ್ಮ ಹಡಗಿಗೆ ಅವೆಲ್ಲವನ್ನೂ ಕಳುಹಿಸಿದ್ದೇವೆ. ಅವಳು, ದುರ್ಗ್ಗಾಣಿಯವಳಾದ ಸಾಗರೆಯು ನಿಮಗೇನಾಗಬೇಕು? ಅವಳು ತೌರುಮನೆಗೆ ಹಿಂದಿರುಗಿ ಹೋಗಲೆ? ನೀವೇ ಕರೆದುಕೊಂಡು ಹೋಗುವಿರೋ? ನೀವವಳ ಕಾಸಿನ ಗುಲಾಮರು, ಅದು ನೆನವಿರಲಿ.

ಆಶ್ಚರ್ಯದಮೇಲೆ ಆಶ್ಚರ್ಯ! ವ್ರಜೇಶ್ವರನು ವಿಹ್ವಲನಾದನು. ದರೋಡೆಯೆನ್ನುವದೆಲ್ಲಾ ಸುಳ್ಳು. ಇವರು ದರೋಡೆ ಕಳ್ಳರಲ್ಲ! ವ್ರಜೇಶ್ವರನು ಸ್ವಲ್ಪ ಹೊತ್ತು ಯೋಚನೆಮಾಡಿ, ಕಡೆಗೆ, 'ನೀವು ನನ್ನನ್ನು ಶುದ್ಧವಾಗಿ ಮೂಗನನ್ನಾಗಿ ಮಾಡಿಟ್ಟಿರಿ! ದೇವೀಚೌಧುರಾಣಿಯ ಕಡೆಯವರು, ನನ್ನ ಹಡಗಿನಮೇಲೆ ಬಿದ್ದು ಕಳವು ಮಾಡಿದರೆಂದು ನಾನು ತಿಳಿದಿದ್ದೆನು!!' ಎಂದು ಹೇಳಿದನು.

ನಿಶಿ—ನಿಜವಾಗಿಯೂ ಇದೇ ದೇವೀಚೌಧುರಾಣಿಯ ಹಡಗು. ದೇವೀರಾಣಿಯು ನಿಜವಾಗಿಯೂ ದರೋಡೆಗಳನ್ನು ನಡೆಯಿಸುತ್ತಾಳೆ.

ಮಾತು ಪೂರೈಸುವುದರೊಳಗಾಗಿ ವ್ರಜೇಶ್ವರನು, 'ದೇವೀರಾಣಿಯು ನಿಜವಾಗಿಯೂ ದರೋಡೆ ಮಾಡುವವಳಾಗಿದ್ದರೆ ನೀವು ರಾಣಿಯಲ್ಲವೇನು?' ಎಂದು ಕೇಳಿದನು.

ನಿಶಿ—ನಾನು ರಾಣಿಯಲ್ಲ. ನೀವು ರಾಣಿಯನ್ನು ನೋಡಲು ಇಷ್ಟವಿದ್ದರೆ ರಾಣಿಯು ದರ್ಶನವನ್ನು ಕೊಡುವಳು. ನಾನು ಹೇಳುತ್ತಿದ್ದುದನ್ನು ಮುಂದೆ ಕೇಳಿರಿ, ಹೇಳುತ್ತೇನೆ. ನಾವು ನಿಜವಾಗಿಯೂ ದರೋಡೆ ಮಾಡುತ್ತೇವೆ. ನಿಮ್ಮ ಮೇಲೆ ದರೋಡೆಮಾಡಿದ್ದುದು ಕೇವಲ ಸಾಗರೆಯ ಪ್ರತಿಜ್ಞೆಯನ್ನು ಕಾಪಾಡುವುದಕ್ಕೋಸ್ಕರ. ಈಗ ಸಾಗರೆಯು ಮನೆಗೆ ಹೋಗುವುದು ಹೇಗೆ? ಅವಳ ಪ್ರತಿಜ್ಞೆಯನ್ನು ಕಾಪಾಡಿದ ಹಾಗಾಯಿತು.

ವ್ರಜೇಶ್ವರ—ಬಂದದು ಹೇಗೆ?

ನಿಶಿ—ರಾಣಿಯವರ ಸಂಗಡ.

ವ್ರಜೇಶ್ವರ—ನಾನೂ ಸಾಗರೆಯು ತೌರುಮನೆಗೆ ಹೋಗಿದ್ದೆನು. ಅಲ್ಲಿಂದ ಬರುತಿದ್ದೇನೆ. ಅಲ್ಲಿ ರಾಣಿ ಚೌಧುರಾಣಿಯರು ಇರಲಿಲ್ಲವಲ್ಲ?

ನಿಶಿ—ನೀವು ಅಲ್ಲಿಂದ ಹೊರಟುಬಂದ ಬಳಿಕ ಅಲ್ಲಿಗೆ ರಾಣಿಜಿಯವರು ಹೋಗಿದ್ದರು.

ವ್ರಜೇಶ್ವರ—ಹಾಗಾದರೆ, ಅಷ್ಟರೊಳಗೆ ಇಲ್ಲಿಗೆ ಬಂದದು ಹೇಗೆ?

ನಿಶಿ—ನಮ್ಮ ಹಡಗನ್ನು ನೋಡಲಿಲ್ಲವೇನು? ಅರವತ್ತು ಮೊಳ ಉದ್ದ!

ವ್ರಜೇಶ್ವರ—ಹಾಗಾದರೆ ನೀವೇ ಸಾಗರೆಯನ್ನು ಹಡಗಿನಲ್ಲಿ ಕರಕೊಂಡು ಹೋಗಿ ಬಿಡಕೂಡದೇಕೆ?

ನಿಶಿ—ಅದಕ್ಕೆ ಒಂದು ಬಾಧೆಯುಂಟು. ಸಾಗರೆಯು ಆರಿಗೂ ಹೇಳದೆ ರಾಣಿಯವರ ಸಂಗಡ ಬಂದಳು. ಈಗ ನಮ್ಮ ಜನರೊಂದಿಗೆ ಹೋದರೆ ಮನೆಯವರು ಅವಳನ್ನೆಲ್ಲಿಗೆ ಹೋಗಿದ್ದೆ ಎಂದು ಕೇಳುವರು. ನಿಮ್ಮ ಸಂಗಡ ಹೋದರೆ ಆರೂ ಕೇಳುವುದಿಲ್ಲ.

ವ್ರಜೇಶ್ವರ—ಒಳ್ಳೆಯದು, ಹಾಗೇವೇ ಆಗಲಿ, ನೀವು ದಯಮಾಡಿ ನನ್ನ ಹಡಗು ಬರುವಂತೆ ಅಪ್ಪಣೆಮಾಡಿರಿ.

'ಆಗಲಿ' ಎಂದು ಹೇಳಿ ನಿಶಿಯು ಅಲ್ಲಿಂದೆದ್ದು ಹೊರಟುಹೋದಳು.

ಆಗ ಸಾಗರೆಯು ಒಬ್ಬಳೇ ಇದ್ದಳು. ವ್ರಜೇಶ್ವರನು ಅವಳನ್ನು ಕುರಿತು, 'ಸಾಗರ! ನೀನೇಕೆ ಅಂತಹ ಪ್ರತಿಜ್ಞೆಯನ್ನು ಮಾಡಿದೆ?' ಎಂದನು.

ಸಾಗರೆಯು ಮುಖವನ್ನು ಬಟ್ಟೆಯಿಂದ ಮುಚ್ಚಿಕೊಂಡು—ಮಲಮಲಿನ ಬಟ್ಟೆಯಲ್ಲಿ—ಅತ್ತಳು. ವಾಚಾಲಗಿತ್ತಿಯಾದಾ ಸಾಗರೆಯು ಬಿಕ್ಕಿ ಬಿಕ್ಕಿ ಅತ್ತಳು. ಮೆಲ್ಲಮೆಲ್ಲಗೆ ಬಹಳ ಅತ್ತಳು. ಮೆಲ್ಲಮೆಲ್ಲಗೆ—ಏಕೆಂದರೆ, ಶಬ್ದಮಾಡಿದರೆ ದೇವೀ ರಾಣಿಗೆ ಕೇಳುವುದೆಂಬ ಭಯದಿಂದ ಮೆಲ್ಲಮೆಲ್ಲಗೆ ಅತ್ತಳು.

ಅಳುವು ಕಡಿಮೆಯಾದ ಬಳಿಕ ವ್ರಜೇಶ್ವರನು, 'ಸಾಗರ! ನೀನು ನನ್ನನ್ನು ಕರೆಯಲಿಲ್ಲವೇಕೆ? ಕರದಿದ್ದರೆ ಎಲ್ಲಾ ಸರಿಹೋಗುತಿದ್ದಿತು' ಎಂದನು.

ಸಾಗರೆಯು ಕಷ್ಟದಿಂದ ರೋದನವನ್ನು ನಿಲ್ಲಿಸಿ, ಕಣ್ಣೀರನ್ನೊರಸಿಕೊಂಡು, 'ನನ್ನ ಹಣೇಬರಹ; ಆದರೆ ನಾನು ಕರೆಯದಿದ್ದರೂ ನೀನೇ ಬರಲಿಲ್ಲವೇಕೆ?' ಎಂದುತ್ತರವನ್ನು ಹೇಳಿದಳು.

ವ್ರಜೇಶ್ವರ—ನೀನು ನನ್ನನ್ನು ಹೊರಡಿಸಿಬಿಟ್ಟೆ. ಕರೆಯದೆ ಬರುವುದು ಹೇಗೆ?

ಆ ಮಾತುಕಥೆಗಳೆಲ್ಲಾ ಶಾಸ್ತ್ರೋಕ್ತವಾಗಿ ಮುಗಿದುವು. ಅನಂತರ ವ್ರಜೇಶ್ವರನು, 'ಸಾಗರ! ನೀನು ದರೋಡೆ ಕಳ್ಳರ ಸಂಗಡ ಬಂದುದು ಹೇಗೆ?' ಎಂದನು.

ಸಾಗರ—ದೇವಿಯು ಸಂಬಂಧದಲ್ಲಿ ನನಗೆ ಅಕ್ಕನಾಗಬೇಕೆಂಬುದು ಮೊದಲೇ ಹೇಳಿದ್ದೇನೆ. ನೀನು ಹೊರಟುಹೋದ ಬಳಿಕ ಅವಳು ನಮ್ಮ ತಂದೆಯ ಮನೆಗೆ ಬಂದಳು. ನಾನಾಗ ಅಳುತ್ತಿದ್ದುದನ್ನು ಕಂಡು, ಏಕೆಂದು ವಿಚಾರಿಸಿ, 'ನಿನ್ನ ಶ್ಯಾಮಲವಲ್ಲಭನನ್ನು ನಾನು ಹಿಡಿದು ಕಟ್ಟಿ ತಂದುಕೊಡುವೆನು; ನನ್ನ ಸಂಗಡ ಬಂದಿರು' ಎಂದು ಹೇಳಿದಳು. ಆದುದರಿಂದ ಅವಳೊಂದಿಗೆ ಬಂದೆನು. ಅವಳನ್ನು ನಂಬುವುದಕ್ಕೆನಗೆ ಅನೇಕ ಕಾರಣಗಳುಂಟು. ನಿನ್ನ ಸಂಗಡ ಪಲಾಯನವಾಗಿ ಹೋಗುವೆನೆಂದು ನನ್ನ ಪರಿಚಾರಕರಿಗೆ ಹೇಳಿ ಬಂದೆನು. ನಿನಗೋಸ್ಕರ ಇದನ್ನೆಲ್ಲಾ ಸಿದ್ಧಪಡಿಸಿದ್ದೇನೆ. ಸ್ವಲ್ಪ ಫಲಾಹಾರವನ್ನು ಮಾಡಿ, ಬಳಿಕ ಹೋಗಿ ಬರಬಹುದು?

ವ್ರಜೇಶ್ವರ—ಅದು ಹೇಗೆ? ಯಜಮಾನಿಯಾದವಳು ಹೇಳಲಿಲ್ಲ.

ಆಗ ಸಾಗರೆಯು ದೇವಿಯನ್ನು ಕರೆದಳು. ದೇವಿಯು ಬರಲಿಲ್ಲ, ನಿಶಿಯು ಬಂದಳು.

ನಿಶಿಯನ್ನು ನೋಡಿ, 'ನನ್ನ ಹಡಗು ಬರುವುದಕ್ಕೆ ಅಪ್ಪಣೆಮಾಡಿದರೋ?' ಎಂದವಳನ್ನು ಕೇಳಿದನು.

ನಿಶಿ—ಹಡಗು ನಿಮ್ಮದೇ ಇದೆ. ಆದರೆ ನೀವು ರಾಣಿಯವರಿಗೆ ತಂಗಿಯ ಗಂಡಂದಿರಾಗಬೇಕು. ಸಂಬಂಧಿಗಳು ಮನೆಗೆ ಬಂದರೆ ಊಟ ಉಪಚಾರ ಆದರವೇನೂ ನಡಿಯಲಿಲ್ಲ. ಕೇವಲ ಅಪಮಾನವೇ ಆಯಿತು. ಬಹಳ ವ್ಯಸನವಾಗುತ್ತದೆ. ನಾವು ಡಕಾಯಿತಿಗಳಾದ ಮಾತ್ರಕ್ಕೆ ನಮ್ಮಲ್ಲಿ ಹಿಂದೂ ಜಾತಿಯ ಪದ್ಧತಿಯೇ ಇಲ್ಲವೆ?

ವ್ರಜೇಶ್ವರ—ಏನನ್ನು ಮಾಡಬೇಕೆಂದು ಹೇಳುತ್ತೀರಿ?

ನಿಶಿ—ಮೊದಲು ಎದ್ದು ಸರಿಯಾದ ಆಸನದಲ್ಲಿ ಕುಳಿತುಕೊಳ್ಳಿರಿ.

ಹೀಗೆಂದು ಹೇಳಿ ಸಿಂಹಾಸನವನ್ನು ತೋರಿದಳು. ವ್ರಜೇಶ್ವರನು ನೆಲಕ್ಕೆ ಹಾಕಿದ್ದ ರತ್ನಗಂಬಳಿಯಮೇಲೆ ಕುಳಿತಿದ್ದವನು, 'ನಾನು ಸರಿಯಾಗಿ ಕುಳಿತಿದ್ದೇನೆ' ಎಂದು ಹೇಳಿದನು.

ಅನಂತರ ನಿಶಿಯು ಸಾಗರೆಯನ್ನು ಕುರಿತು, 'ತಂಗಿ! ನಿನ್ನ ಸಾಮಾನುಗಳನ್ನು ಬೇರೆ ತೆಗೆದಿಟ್ಟುಕೊ; ನಾನು ಪರರ ದ್ರವ್ಯವನ್ನು ಮುಟ್ಟುವವರಲ್ಲ'ವೆಂದು ಹೇಳಿ ಸ್ವಲ್ಪ ನಕ್ಕು, 'ಬೆಳ್ಳಿ ಬಂಗಾರ ಹೊರ್ತು ಇತರ ದ್ರವ್ಯವನ್ನು ಮುಟ್ಟುವದಿಲ್ಲ!' ಎಂದಳು.

ವ್ರಜೇಶ್ವರ—ಹಾಗಾದರೆ, ನಾನು ಕಂಚು ಹಿತ್ತಾಳೆ ಪಾತ್ರೆಗಳಲ್ಲಿ ಬಿದ್ದವನಾದೆನೊ?

ನಿಶಿ—ನಾನೇನೋ ಹಾಗೇವೇ ತಿಳಿದಿದ್ದೇನೆ. ಹೆಂಗಸರು ಪುರುಷರನ್ನು ಕಂಚು ತಾಮ್ರದಲ್ಲಿ ಲೆಕ್ಕಮಾಡಿಕೊಂಡಿದ್ದಾರೆ. ಹಾಗೆ ತಿಳಿದುಕೊಳ್ಳದಿದ್ದರೆ

ಮನೆಯ ಸಂಸಾರವು ನಡೆಯುವುದಿಲ್ಲ. ಆದುದರಿಂದ ಪಾತ್ರೆಗಳಂತೆ ಅವರನ್ನೂ ಚೆನ್ನಾಗಿ ತಿಕ್ಕಿ, ಉಜ್ಜಿ, ಬೆಳಗಿ, ತೊಳೆದು ಮನೆಯಲ್ಲಿ ಭದ್ರಪಡಿಸಿ ಇಟ್ಟುಕೊಳ್ಳುವುದರಲ್ಲಿ ಹೆಂಗಸರಿಗೆ ಪ್ರಾಣ ಹೋಗುತ್ತದೆ. ತಂಗಿ ಸಾಗರೆ! ನಿನ್ನ ಗಡಿಗೆ, ಗುಡಾಣ ಪಾತ್ರೆಗೀತ್ರೆಗಳನ್ನು ದೂರ ಇಟ್ಟುಕೊ, ನಮ್ಮದರೊಂದಿಗೆಲ್ಲಾದರೂ ಸೇರಿ ಹೋದೀತವ್ವ! ಆರು ಬಲ್ಲರು!

ವ್ರಜೇಶ್ವರ—ಕಂಚು ತಾಮ್ರವಾದುದಂತೂ ಸರಿಯೆ! ಪುನಃ ಗಡಿಗೆ ಗುಡಾಣವೆ! ಗಡಿಗೆ ಗುಡಾಣಗಳ ಸಂಗಡ ಸೇರುವುದಕ್ಕೂ ಯೋಗ್ಯತೆಯಿಲ್ಲವೆನ್ನುವಿರಲ್ಲವೆ?

ನಿಶಿ—ಸ್ವಾಮಿ! ನಾನು ವೈಷ್ಣವಳು. ಕಂಚು ತಾಮ್ರದವರೆಗೆ ನನ್ನ ಬುದ್ಧಿಯು ಓಡುವದಿಲ್ಲ. ನಮ್ಮದೆಲ್ಲಾ ಗಡಿಗೆ ಗುಡಾಣವೇ ಸರಿ. ಕಂಚು ತಾಮ್ರದ ಸಮಾಚಾರವನ್ನು ಸಾಗರೆಯಿಂದ ತಿಳಿದುಕೊಳ್ಳಬೇಕು.

ಸಾಗರ—ನನಗೆ ಚೆನ್ನಾಗಿ ಗೊತ್ತು. ಪುರುಷರು ಕಂಚು ತಾಮ್ರದ ಪಾತ್ರೆಗಳಲ್ಲಿ ಕೊಡವಿದ್ದ ಹಾಗೆ. ಒಳಗೆ ಬರಿದು-ಅಂತಃಶೂನ್ಯ-ನಾವು ಗುಣವತಿಯರು ಗುಣವೆಂಬ ನೀರನ್ನ ದರಲ್ಲಿ ತುಂಬಿ ಪೂರ್ಣಕುಂಭವನ್ನಾಗಿ ಮಾಡುವೆವು.

ನಿಶಿ ಚೆನ್ನಾಗಿ ಹೇಳಿದೆ. ಆದುದರಿಂದಲೇ ಹೆಂಗಸಾಗಿ ನೀರು ತುಂಬಿದ ಕೊಡವನ್ನು ಕಟ್ಟಿಕೊಂಡು ಸಂಸಾರ ಸಮುದ್ರದಲ್ಲಿ ಬಿದ್ದು ಮುಣುಗುವುದು! ಎಲೈ ತಂಗಿ! ನೀನೇ ನಿನ್ನ ಕೊಡವನ್ನೆತ್ತಿ ಗಡಮಂಚಿಕೆಯಂತಿರುವ ಅಡ್ಡ ಹಲಿಗೆಯ ಮೇಲಿಟ್ಟುಕೊ.

ವ್ರಜ–ಕೊಡವು ತಾನಾಗಿಯೇ ಅಡ್ಡಹಲಿಗೆಯ ಮೇಲೆ ಹೋಗಿ ಕೂಡುತ್ತದೆ!

ಹೀಗೆಂದು ಹೇಳಿ ವ್ರಜೇಶ್ವರನು ತಾನಾಗಿಯೇ ಎದ್ದು ಹೋಗಿ ಸಿಂಹಾಸನದ ಮೇಲೆ ಕುಳಿತುಕೊಂಡನು. ಒಮ್ಮಿಂದೊಮ್ಮೆ ಪರಿಚಾರಿಕರಿಬ್ಬರು—ಬಹು ಮೂಲ್ಯದ ವಸನಗಳಿಂದ ಭೂಷಿತರಾದ ಸುಂದರಿಯರಾದ ಯುವತಿಯರು—ಬಂಗಾರದ ಹಿಡಿಯುಳ್ಳೆರಡು ಚಾಮರಗಳನ್ನು ಹಿಡಿದುಕೊಂಡು ಅಪ್ಪಣೆಯಿಲ್ಲದೆ ಬೀಸಲಾರಂಭಿಸಿದರು. ನಿಶಿಯು ಸಾಗರೆಯನ್ನು ಕುರಿತು 'ನಿನ್ನ ಸ್ವಾಮಿಗೋಸ್ಕರ ನಿನ್ನ ಕೈಯಿಂದ ಸ್ವಲ್ಪ ತಂಬಾಕನ್ನು ತೀಡಿತಂದು ಕೊಡು' ಎಂದಳು.

ಸಾಗರೆಯು ಜಾಗ್ರತೆಯಾಗಿ ಬಂಗಾರದೊಂದು ಗುಡಿಗುಡಿಯನ್ನು ತಂದು ಅದರ ಮೇಲಿನ ಬಟ್ಲನ್ನು ತೆಗೆದು ಕಸ್ತೂರಿಯ ಗಂಧದಿಂದ ಮಿಶ್ರಿತವಾದ ತಂಬಾಕನ್ನು ತೀಡಿಹಾಕಿ ಬೆಂಕಿಯ ಕೆಂಡವನ್ನಿಟ್ಟೂದಿ ಹುಕ್ಕೆಯನ್ನು ತಂದಿಟ್ಟಳು. ವ್ರಜೇಶ್ವರನು, 'ಬೇರೊಂದು ಹೊಸದಾದ ನಾಳವನ್ನದಕ್ಕೆ ಹಾಕಿಕೊಡಿ' ಎಂದನು.

ನಿಶಿ—ಅನುಮಾನವೇನೂ ಬೇಡ. ಗುಡಿಗುಡಿಯನ್ನಾರೂ ಎಂಜಲು ಮಾಡಿಲ್ಲ. ಅದನ್ನಾರೂ ಉಪಯೋಗಿಸಿಲ್ಲ. ನಾವಾರೂ ತಂಬಾಕನ್ನು ಉಪಯೋಗಿಸತಕ್ಕವರಲ್ಲ.

ವ್ರಜೇಶ್ವರ—ಹಾಗಾದರೆ ಇಲ್ಲಿ ಹುಕ್ಕೆಯು ಹೇಗೆ ಬಂತು ?

ನಿಶಿ—ದೇವಿಯು ಪೌಲತ್ತಿನ ಅಟ್ಟಹಾಸ—

ವ್ರಜೇಶ್ವರ—ಅಟ್ಟಹಾಸವೇ ಆಗಲಿ. ನಾನಿಲ್ಲಿಗೆ ಬಂದಾಗ ತಂಬಾಕ ನ್ನಾರೋ ಸೇದುತಿದ್ದರು. ಆರೂ ಉಪಯೋಗಿಸುತ್ತಿರಲಿಲ್ಲವೆ ?

ನಿಶಿ—ಸೀದಿ ಸಿದ್ಧಮಾಡುತಿರುವುದೂ ಅಟ್ಟಹಾಸವೆ ?

ಗುಡಿಗುಡಿಯನ್ನು ಅಂದೇ ಹೊರಗೆ ತೆಗೆದುದು—ಆ ತಂಬಾಕುವೂ ಅಂದೇ ಕೊಂಡುದುದು-ಸಾಗರೆಯ ಸ್ವಾಮಿಯು ಬರುವನೆಂದು ಸಿದ್ಧಮಾಡಿಕೊಂಡಿಟ್ಟು ದುದು–ವ್ರಜೇಶ್ವರನು ಬಾಯಿಗಿಟ್ಟುಕೊಳ್ಳುವ ನಾಳವನ್ನು ಚೆನ್ನಾಗಿ ಪರೀಕ್ಷಿಸಿ ನೋಡಿದನು-ಉಪಯೋಗಿಸಲ್ಪಟ್ಟಿರಲಿಲ್ಲವಾಗಿ ಅದರಲ್ಲಿ ಧೂಮಪಾನವನ್ನು ಮಾಡಿ ಅನಿರ್ವಚನೀಯ ಸುಖದಲ್ಲಿ ಮಗ್ನನಾದನು. ಆಗ ನಿಶಿಯು ಸಾಗರೆಯನ್ನು ಕುರಿತು, 'ಕೆಟ್ಟಮೋರೆಯವಳೆ ? ನಿಂತೇನನ್ನು ಮಾಡುವೆ ? ಗಂಡಸು ಹುಕ್ಕೆ ಯನ್ನು ಸೇವಿಸುವಾಗ ಹೆಂಗಸು ಅತ್ತಿತ್ತ ನೋಡಿಕೊಂಡಿರುವುದೆ ? ಹೋಗಿ, ಒಳ್ಳೆಯ ವೀಳ್ಯದೆಲೆ ಅಡಿಕೆಯನ್ನಾರಿಸಿ ತಂದಿಡು, ಇತರರು ಆರಿಸಿಟ್ಟಿದ್ದುದನ್ನು ತರಬೇಡ, ಕೈಲಾದರೆ ಅದರಲ್ಲೊಂದು ಔಷಧವನ್ನು ಹಾಕು' ಎಂದಳು.

ಸಾಗರ—ನೀನೇ ಆರಿಸಿಟ್ಟಿದ್ದುದು. ಔಷಧಗಿವಷಧವನ್ನು ಕಂಡಿದ್ದರೆ ನಾನೀಪರಿ ದೆಸೆಗೆಟ್ಟು ಬರುತಿದ್ದೆನೆ ? ಹೀಗೆಂದು ಹೇಳಿ ಸಾಗರೆಯು. ಪಚ್ಚಕರ್ಪೂರ ಮುಂತಾದ ಸುಗಂಧಗಳಿಂದ ಸುವಾಸಿತವಾದ ತಾಂಬೂಲವನ್ನು ಸಿದ್ಧಪಡಿಸಿ ಬಂಗಾರದ ತಟ್ಟೆಯಲ್ಲಿ ತಂದಿಟ್ಟಳು. ಅದನ್ನು ನೋಡಿ ನಿಶಿಯು, 'ನಿನ್ನ ಸ್ವಾಮಿ ಯನ್ನು ಅನೇಕವಾಗಿ ಹೀನೈಸಿದೆನು. ಏನಾದರೂ ಫಲಾಹಾರಕ್ಕಾದರೂ ಸಿದ್ಧ ಪಡಿಸು' ಎಂದಳು.

ವ್ರಜೇಶ್ವರನು ಮುಖಬಾಡಿದವನಾಗಿ, 'ಹಾಳು ! ಇದೇನು ಬಂದಿತು ! ಈ ಅರ್ಧರಾತ್ರಿಯಲ್ಲಿ ಫಲಾಹಾರವೆ ! ಮನ್ನಿಸಬೇಕು' ಎಂದನು.

ಆದರವನ ಮಾತನ್ನವರು ಲಕ್ಷ್ಯಮಾಡಲಿಲ್ಲ. ಸಾಗರೆಯು ಗದ್ದಲಮಾಡಿ, ಮತ್ತೊಂದು ಕೊಠಡಿಯನ್ನು ಪರಿಷ್ಕರಿಸಿ, ಸುವರ್ಣಪುಷ್ಪಖಚಿತವಾದೊಂದು ಮಣೆಯನ್ನು ಹಾಕಿ, ನಾಲ್ಕೈದು ಸುವರ್ಣದ ತಟ್ಟೆಗಳಲ್ಲಿ ಫಲಾಹಾರದ ಸಾಮಗ್ರಿ ಗಳನ್ನು ಸಿದ್ಧಪಡಿಸಿಟ್ಟಳು. ಸ್ವರ್ಣಪಾತ್ರದಲ್ಲಿ ಸುಗಂಧಯುಕ್ತವಾದ ನೀರನ್ನು ಸಿದ್ಧಪಡಿಸಿದಳು. ಸಿದ್ಧವಾದುದನ್ನು ತಿಳಿದು ನಿಶಿಯು ವ್ರಜೇಶ್ವರನನ್ನು ಕುರಿತು, 'ಸಿದ್ಧವಾಯಿತು, ಏಳಿ' ಎಂದಳು. ವ್ರಜೇಶ್ವರನು, ನಿಶಿಯ ಕಡೆಗೆ ನೋಡಿ, ಕೈಮುಗಿದು, 'ದರೋಡೆ ಮಾಡಿ ತಂದು ಕೈದಿಯನ್ನಾಗಿ ಮಾಡಿದಿರಿ; ಆ ಅತ್ಯಾ ಚಾರವನ್ನು ಸಹಿಸಿಕೊಂಡೆನು. ಆದರೀ ಅವೇಳೆಯಲ್ಲೀ ಅತ್ಯಾಚಾರವನ್ನು ಸಹಿಸಲಾರೆನು. ದೇವರಾಣೆ ! ಮನ್ನಿಸಬೇಕು' ಎಂದನು.

ಹೆಂಗಸು ಮನ್ನಿಸಲಿಲ್ಲ. ವ್ರಜೇಶ್ವರನು ಯತ್ನವಿಲ್ಲದೆ ಊಟವನ್ನು ಮಾಡಿದನು

ಸಾಗರೆಯು, 'ಬ್ರಾಹ್ಮಣ ಭೋಜನವಾದ ಬಳಿಕ ದಕ್ಷಿಣೆಯನ್ನು ಕೊಡಬೇಕಲ್ಲವೆ?' ಎಂದಳು. ನಿಶಿಯು, 'ದಕ್ಷಿಣೆಯನ್ನು ರಾಣಿಯೇ ಸ್ವಂತವಾಗಿ ಕೊಡುವಳು. ಬನ್ನಿ, ಸ್ವಾಮಿ? ರಾಣಿಯ ದರ್ಶನವನ್ನು ಮಾಡುವಿರಿ' ಎಂದು ಹೇಳಿ ಪ್ರಜೇಶ್ವರನನ್ನು ಮತ್ತೊಂದು ಕೊಠಡಿಗೆ ಸಂಗಡ ಕರೆದುಕೊಂಡು ಹೋದಳು.

---

# ಎಂಟನೆಯ ಪರಿಚ್ಛೇದ

ನಿಶಿಯು ಪ್ರಜೇಶ್ವರನನ್ನು ಸಂಗಡ ಕರೆದುಕೊಂಡು ದೇವಿಯ ಶಯ್ಯಾಗೃಹಕೆ ಹೋದಳು. ಪ್ರಜೇಶ್ವರನು ನೋಡಲಾಗದು ದರಬಾರಿನ ಕೊಠಡಿಗಿಂತಲೂ ಬಹಳ ಹೆಚ್ಚಾಗಿ ಅಲಂಕೃತವಾಗಿದ್ದಿತು. ಒಂದು ಭಾಗದಲ್ಲಿ ಸುವರ್ಣ ಮಂಡಿತವಾದ ಮುತ್ತಿನ ಜಾಲರಿಯುಳ್ಳ ಅಪರೂಪವಾದೊಂದು ಮಂಚ. ಆದರೆ ಪ್ರಜೇಶ್ವರನ ಕಣ್ಣು ಅವುಗಳಮೇಲೆ ಹೋಗಲಿಲ್ಲ. ಅಷ್ಟೊಂದು ಐಶ್ವರ್ಯಕ್ಕೂ ಅಧಿಕಾರಿಣಿಯಾದ ಪ್ರಖ್ಯಾತಗೊಂಡಿದ್ದ ದೇವೀರಾಣಿಯನ್ನು ನೋಡುತ್ತಿದ್ದನು. ಅವಳೊಂದು ಮರದ ಮಣೆಯಮೇಲೆ ಗೋಪಬಟ್ಟೆಯನ್ನು ಅರ್ಧ ತೆಗೆದು ಕುಳಿತಿದ್ದಳು. ಪ್ರಜೇಶ್ವರನು ನಿಶಿಯಲ್ಲಿಯೂ ಸಾಗರೆಯಲ್ಲಿಯೂ ನೋಡಿದ್ದ ಚಾಂಚಲ್ಯವು ಅವಳಲ್ಲಿರಲಿಲ್ಲ. ಅವಳು ಸ್ಥಿರೆಯಾಗಿಯೂ ಧೀರೆಯಾಗಿಯೂ ನಿಮ್ನ ದೃಷ್ಟಿಯುಳ್ಳವಳಾಗಿಯೂ ಲಜ್ಜೆಯಿಂದ ಅವನತಮುಖಿಯಾಗಿಯೂ ಇದ್ದಳು. ನಿಶಿಯೂ ಸಾಗರೆಯೂ, ಅವರಲ್ಲಿ ಸಾಗರೆಯೇ ವಿಶೇಷವಾಗಿ, ಸರ್ವಾಂಗಗಳಲ್ಲಿಯೂ ರತ್ನಾಲಂಕಾರದಿಂದಲಂಕೃತರಾಗಿದ್ದರಲ್ಲದೆ ಬಹುಮೂಲ್ಯವುಳ್ಳ ವಸ್ತ್ರಗಳನ್ನುಟ್ಟಿದ್ದರು. ದೇವಿಯು ಹಾಗಿರಲಿಲ್ಲ. ಅವಳು ಪ್ರಜೇಶ್ವರನನ್ನು ನೋಡುವುದಕ್ಕೆ ಸಲವಾಗಿ ಬಹುಮೂಲ್ಯವಾದ ವಸ್ತ್ರಾಲಂಕಾರಗಳಿಂದ ಭೂಷಿತೆಯಾಗಿದ್ದಳೆಂದು ಮೊದಲು ಹೇಳಿದ್ದೆವು. ಆದರೆ ಈಗ ನೋಡುವ ಸಮಯದಲ್ಲಿ ಅವುಗಳನ್ನೆಲ್ಲಾ ತೆಗೆದಿಟ್ಟು ಸಾಮಾನ್ಯವಾದೊಂದು ಸೀರೆಯನ್ನುಟ್ಟು ಕೈಯಲ್ಲೊಂದು ಬಳೆಯನ್ನು ಮಾತ್ರ ತೊಟ್ಟು ಪ್ರಜೇಶ್ವರನನ್ನು ಇದಿರು ನೋಡುತ್ತ ಕುಳಿತಿದ್ದಳು. ನಿಶಿಯು ಆಕೆಗೆ ಬುದ್ಧಿಭ್ರಮೆಯಾಗಿ ಹಾಗಿದ್ದಳೆಂದು ತಿಳಿದುಕೊಂಡಳು. ಬಳಿಕ ಯೋಚಿಸಿ 'ಛೀ! ಏನುಮಾಡಿಬಿಟ್ಟೆ! ಐಶ್ವರ್ಯದ ಹೊಳಪಿಗೆ ಒಳಬಿದ್ದೆನಲ್ಲ! ಆದರಿಂದ ಇತರರನ್ನು ಆಶೆಗೊಳಗಾಗುವಂತೆ ಮೋಹಗೊಳಿಸುವುದು ಸರಿಯಲ್ಲ' ವೆಂದಂದುಕೊಂಡು, ಆದುದರಿಂದಲೇ ದೇವಿಯು ವಿವೇಚನೆಯಿಂದ ಆಭರಣಗಳನ್ನೆಲ್ಲ ತೆಗೆದಿಟ್ಟುದುದು ಸರಿಯೆಂದು ಹೇಳಿಕೊಂಡಳು.

ಪ್ರಜೇಶ್ವರನನ್ನು ಕೊಠಡಿಯೊಳಗೆ ಕರೆತಂದು ಬಿಟ್ಟು ನಿಶಿಯು ಹೊರಟು ಹೋದಳು. ಪ್ರಜೇಶ್ವರನು ಒಳಗೆ ಬರುತ್ತಲೇ ದೇವಿಯು ಎದ್ದು ಅವನಿಗೆ ಪ್ರಣಾಮವನ್ನು ಮಾಡಿದಳು. ಅದನ್ನು ಕಂಡು ಪ್ರಜೇಶ್ವರನಿಗೆ ಮತ್ತಷ್ಟು ಆಶ್ಚರ್ಯ

ವುಂಟಾಯಿತು. ಏಕೆಂದರೆ, ಬೀಕ್ಕವರಾರೂ ನಮಸ್ಕಾರವನ್ನು ಮಾಡಿರಲಿಲ್ಲ. ದೇವಿಯು ನಮಸ್ಕಾರವನ್ನು ಮಾಡಿ ವ್ರಜೇಶ್ವರನೆದುರಿಗೆ ನಿಂತುಕೊಂಡಳು. ವ್ರಜೇಶ್ವರನು ನೋಡಿ, 'ಅವಳು ಯಥಾರ್ಥವಾಗಿ ದೇವಿಯಮೂರ್ತಿ!' ಎಂದಂದು ಕೊಂಡನು. ಅವನು ಅಂತಹ ಮೂರ್ತಿಯನ್ನಾವಾಗಲಾದರೂ ನೋಡಿದ್ದನೇ? ಅಹುದು, ವ್ರಜನು ಅಂತಹುದನ್ನೊಮ್ಮೆ ನೋಡಿದ್ದನು. ಆಗದು ಮತ್ತೂ ಹೆಚ್ಚು ಮಧುರವಾಗಿದ್ದಿತು. ಕಾರಣವೇನೆಂದರೆ, ದೇವಿಯ ಮೂರ್ತಿಯು ಆಗ ಬಾಲಿಕಾವಸ್ಥೆಯಲ್ಲಿದ್ದಿತು—ವ್ರಜೇಶ್ವರನೂ ಪ್ರಥಮ ಯೌವನದಲ್ಲಿದ್ದನು. ಹಾ! ಅದೇ ಇದಾಗಬಾರದೆ! ಈ ಮುಖವನ್ನು ನೋಡಿ ಆ ಮುಖವು ಜ್ಞಾಪಕಕ್ಕೆ ಬಂದಿತು. ಆದರೆ ನೋಡಲಾಗಿ ಈ ಮುಖವು ಆ ಮುಖವಾಗಿರಲಿಲ್ಲ. ಸ್ವಲ್ಪವೂ ಹಾಗಿರಲಿಲ್ಲವೆ? ಇಲ್ಲದಿರುವುದೆ? ಸ್ವಲ್ಪ ಆ ಮುಖವಾಗಿದೆ! ಅದುಕಾರಣದಿಂದಲೇ ವ್ರಜೇಶ್ವರನು ಮಾತಿಲ್ಲದೆ ನೋಡುತಿದ್ದಾನೆ! ಅವಳು ಸತ್ತು ಅನೇಕ ವರ್ಷಗಳಾಗಿ ಹೋದುವು—ಆದರೆ ಮನುಷ್ಯರು ಒಬ್ಬರಹಾಗೆ ಒಬ್ಬರು ಇರುವುದಿಲ್ಲವೆ? ಎಷ್ಟೋ ಜನರ ಸಾದೃಶ್ಯದಿಂದ ಒಬ್ಬರನ್ನು ನೋಡಿದರೆ ಮತ್ತೊಬ್ಬರ ಜ್ಞಾಪಕವು ಬರುವುದುಂಟು. ವ್ರಜೇಶ್ವರ! ಇದೂ ಹಾಗೇವೇ ಇರಬಹುದಲ್ಲವೆ?

ವ್ರಜೇಶ್ವರನು ಹಾಗೇವೇ ತಿಳಿದುಕೊಂಡನು. ಆದರಾ ಸಾದೃಶ್ಯದಿಂದಲೇ ಹೃದಯವು ತುಂಬಿಹೋಯಿತು. ಕಣ್ಣುಗಳಲ್ಲಿ ನೀರು ತುಂಬಿತು; ಸುರಿಯಲಿಲ್ಲವಾಗಿ ದೇವಿಗಾ ನೀರು ಗೊತ್ತಾಗಲಿಲ್ಲ—ನೋಡಿದ್ದರೆ ದೊಡ್ಡ ಅನರ್ಥಾಂತರಕ್ಕಿಡುತಿದ್ದಿತು. ಎರಡು ಮೇಘಗಳಲ್ಲಿಯೂ ಮಿಂಚು ತುಂಬಿದ್ದಿತು.

ಪ್ರಣಾಮವನ್ನು ಮಾಡಿ ದೇವಿಯು ಅಧೋದೃಷ್ಟಿಯುಳ್ಳವಳಾಗಿ, 'ಇಂದು ನಿಮ್ಮನ್ನು ಬಲವಂತದಿಂದ ಹಿಡಿದು ತಂದುದು ಬಹಳ ಕಷ್ಟವನ್ನು ಕೊಟ್ಟಂತಾಯಿತು. ಹಾಗೇಕೆ ನಡೆಯಿತೋ ಅದನ್ನು ಕೇಳೋಣಾಗಿದೆ. ನನ್ನ ಅಪರಾಧವನ್ನು ಮನಸ್ಸಿಗೆ ತಂದುಕೊಳ್ಳಬಾರದು' ಎಂದಳು.

ವ್ರಜೇಶ್ವರ—ನನಗೆ ತಾವು ಉಪಕಾರವನ್ನೇ ಮಾಡೋಣಾಯಿತು. ಹೆಚ್ಚು ಮಾತಾಡುವುದಕ್ಕೆ ವ್ರಜೇಶ್ವರನಿಗೆ ಶಕ್ತಿಯಿಲ್ಲ.

ದೇವಿ—ತಾವು ಇಲ್ಲಿ ದಯಮಾಡಿ ಊಟಮಾಡೋಣವಾಯಿತು. ಆದರಿಂದ ನಮಗೆ ಬಹಳ ಮರ್ಯಾದೆಮಾಡಿದಹಾಗಾಯಿತು. ತಾವು ಕುಲೀನ ಬ್ರಾಹ್ಮಣರು. ತಮಗೆ ಮರ್ಯಾದೆಮಾಡುವುದು ನಮಗೂ ಕರ್ತವ್ಯ. ತಾವು ನನಗೆ ಸಂಬಂಧವಾಗಬೇಕು. ನಾನು ತಮಗೆ ಮರ್ಯಾದಾ ಸ್ವರೂಪವಾಗಿ ಕೊಡುವುದನ್ನು ತಾವು ಅಂಗೀಕರಿಸಬೇಕು.

ವ್ರಜೇಶ್ವರ—ಹೆಂಡತಿಗಿಂತಲೂ ಹೆಚ್ಚಾದ ಧನವಾವುದು? ತಾವು ಹೆಂಡತಿಯನ್ನೇ ಕೊಡೋಣಾಯಿತು. ಅದಕ್ಕಿಂತ ಮತ್ತೇನು ಹೆಚ್ಚಾದುದನ್ನು ಕೊಡುವಿರಿ?

ಓ, ವ್ರಜೇಶ್ವರ! ಏನನ್ನು ಹೇಳಿದೆ? ಹೆಂಡತಿಗಿಂತಲೂ ಹೆಚ್ಚಾದ ಧನ ವಾವುದೂ ಇಲ್ಲವೊ? ಹಾಗಾದರೆ ತಂದೆಯೂ ಮಗನೂ ಸೇರಿಕೊಂಡು ಪ್ರಫುಲ್ಲೆಯನ್ನು ಮನೆಯಿಂದ ಅಟ್ಟಿದವನಲ್ಲವೆ, ನೀನು? ಹಾಗೇಕೆ ಮಾಡಿದೆ?

ಮಂಚದ ಹತ್ತರೊಂದು ಬೆಳ್ಳಿಯ ಕೊಡವಿದ್ದಿತು. ದೇವಿಯು ಅದನೆತ್ತಿಕೊಂಡು ಬಂದು ವ್ರಜೇಶ್ವರನ ಮುಂದಿಟ್ಟು, 'ಇದನ್ನು ಅಂಗೀಕರಿಸಬೇಕು' ಎಂದಳು.

ವ್ರಜೇಶ್ವರ—ತಮ್ಮ ಹಡಗಿನಲ್ಲಿಷ್ಟು ಬೆಳ್ಳಿ ಬಂಗಾರದ ಹೊಡತವನ್ನು ಕಂಡು ಅದನ್ನು ತೆಗೆದುಕೊಳ್ಳದಿದ್ದರೆ ಸಾಗರೆಯು ಏನಾದರೂ ಅನ್ನುವಳು. ಆದರೆ ಒಂದು ಮಾತುಂಟು—

ದೇವಿಯು ಅದಾವ ಮಾತೆಂಬುದನ್ನು ತಿಳಿದು, 'ನಾನು ಪ್ರಮಾಣವಾಗಿ ಹೇಳುತ್ತೇನೆ; ಇದು ಕಳವು ಮಾಲಲ್ಲ. ನನಗೆ ಸ್ವಲ್ಪ ಸ್ವಂತ ಆಸ್ತಿಯುಂಟೆಂದು ತಾವು ಕೇಳಿರಬಹುದು. ಅದುಕಾರಣ ತಾವಿದನ್ನು ಅಂಗೀಕರಿಸುವುದಕ್ಕೆ ಅನುಮಾನಿಸಕೂಡದು' ಎಂದಳು.

ವ್ರಜೇಶ್ವರನು ಅಂಗೀಕರಿಸಿದನು. ಕುಲೀನರವನಿಗೆ ಹಾಗೂ ಅಧ್ಯಾಪಕ ಭಟ್ಟಾಚಾರ್ಯನಿಗೆ ಸರ್ವದಾ ಮರ್ಯಾದೆಯನ್ನು ತೆಗೆದುಕೊಳ್ಳಲು ಲಜ್ಜೆಯಿಲ್ಲ—ಮನಸ್ಸಿಗೆ ಲಜ್ಜೆಯು ಹೊಳಿಯಲೂ ಇಲ್ಲ.

ಕೊಡವು ಭಾರವಾಗಿ ಕಂಡಿತು. ವ್ರಜೇಶ್ವರನದನ್ನೆತ್ತಿ ನೋಡಿದನು ಎತ್ತಲವನ ಕೈಲಿ ಸಾಗದೆ ಹೋಯಿತು. ಆಗವನು 'ಇದೇನಿದು! ಕೊಡದ ತುಂಬ ನೀರನ್ನು ತುಂಬಿದೆಯೆ?' ಎಂದು ಕೇಳಿದನು.

ದೇವಿ—ನಾನದನ್ನೆತ್ತಿಕೊಂಡು ಬಂದಾಗ ಶಬ್ದವಾಗಲಿಲ್ಲವೆ? ಅದುಲ್ಲಿ ನೀರಿರುವ ಸಂಭವವುಂಟೆ?

ವ್ರಜ—ಅದಕ್ಕೆ ಸಲವಾಗಿ ಕೇಳುವುದು, ಆದರಲ್ಲಿರುವುದೇನು? ವ್ರಜೇಶ್ವರನು ಕೊಡದೊಳಗೆ ಕೈಹಾಕಿ ತೆಗೆದು ನೋಡಲಾಗದು ಮೊಹರೆಗಳಾಗಿದ್ದುವು. ಕೊಡದ ತುಂಬ ಮೊಹರೆಗಳು ಪರಿಪೂರ್ಣವಾಗಿ ತುಂಬಿದ್ದುವು!

ವ್ರಜ—ಇದನ್ನೆಲ್ಲಾ ವದರಲ್ಲಿ ಸುರಿದುಕೊಳ್ಳಲಿ?

ದೇವಿ—ಸುರಿದುಕೊಳ್ಳಲೇಕೆ? ಕೊಡದ ಸಮೇತವಾಗಿ ಎಲ್ಲಾ ನಿಮಗೆ ಕೊಟ್ಟಿದ್ದೇನೆ.

ವ್ರಜ—ಏನು!

ದೇವಿ—ಏಕೆ?

ವ್ರಜ—ಎಷ್ಟು ಮೊಹರೆಗಳಿವೆ?

ದೇವಿ—ಮೂರುಸಾವಿರದ ಮುನ್ನೂರು.

ವ್ರಜ—ಮೂರುಸಾವಿರದ ಮುನ್ನೂರು ಮೊಹರೆಗಳಿಗೆ ಐವತ್ತುಸಾವಿರ

ರೂಪಾಯಿನ ಮೇಲಾಗುವುದು ? ಸಾಗರೆಯು ತನುಗೆ ಹಣದ ವಿಚಾರವಾಗಿ ಹೇಳಿದ್ದಳೆ ?

ದೇವಿ—ಸಾಗರೆಯು ತನುಗೆ ಐವತ್ತುಸಾವಿರ ರೂಪಾಯಿಗಳು ಅವಶ್ಯಕ ವಿರುವ್ವದಾಗಿ ಹೇಳಿದ್ದಳು.

ವ್ರಜ—ಅದಕ್ಕೆ ಸಲವಾಗಿ ಕೊಡೋಣಾಯಿತೆ ?

ದೇವಿ—ಹಣವು ನನ್ನದಲ್ಲ. ಹಣವು ದೇವರಿಗೆ ಸೇರಿದುದು, ದೇವಸ್ವವಾಗಿ ಅದೆನ್ನಲ್ಲಿದೆ. ದೇವರ ಹಣದಿಂದ ನಿಮಗೆ ಸಾಲವಾಗಿ ಕೊಟ್ಟಿದ್ದೇನೆ.

ವ್ರಜ—ನನಗೆ ಹಣವು ಬಹಳ ಆವಶ್ಯಕವಾಗಿದೆ—ಕಳವನ್ನಾದರೂ ಮಾಡಿ ಹಣವನ್ನೊದಗಿಸಬೇಕಾಗಿದ್ದಿತೆಂದು ತೋರುತ್ತದೆ. ಹಾಗೆ ಮಾಡಿದ್ದರೂ ನನಗದು ಅಧರ್ಮವಾಗುತ್ತಿರಲಿಲ್ಲ. ಏಕೆಂದರೆ, ಹಣವಿಲ್ಲದಿದ್ದರೆ ನಮ್ಮ ತಂದೆಗೆ ಜಾತಿಯು ಉಳಿಯದು. ನಾನೀ ಹಣವನ್ನು ಕೊಂಡೊಯ್ಯುವೆನು. ಆವಾಗದನ್ನು ಹಿಂದಕ್ಕೆ ಕೊಡಬೇಕಾಗುವುದು ?

ದೇವಿ—ದೇವರ ಸ್ವತ್ತು ದೇವರಿಗೆ ಸೇರಿದರೆ ಸರಿ. ನಾನು ಸತ್ತ ಸಮಾಚಾರ ವನ್ನು ನೀವು ಕೇಳಿದ ಮೇಲಾದರೂ ಹಣವನ್ನೂ ಅದಕ್ಕೆ ಬಡ್ಡಿಯಾಗಿ ಹೆಚ್ಚು ಒಂದು ಮೊಹರೆಯನ್ನೂ ದೇವರ ಸೇವೆಯಲ್ಲಿ ವೆಚ್ಚಮಾಡಬೇಕು.

ವ್ರಜ—ನನ್ನನ್ನೇ ವೆಚ್ಚಮಾಡುವುದಕ್ಕೆ ಬಿಟ್ಟರೆ ತಮುಗೆ ಮೋಸಮಾಡುವೆ ನೇನೊ ? ನಾನದಕ್ಕೊಪ್ಪಲಾರೆನು.

ದೇವಿ—ತಮ್ಮ ಇಷ್ಟವು ಹೇಗೋ ಹಾಗೆ ಸಾಲವನ್ನು ಹರಿಸಬಹುದು.

ವ್ರಜ—ನನಗೆ ಹಣವು ಒದಗುತ್ತಲೇ ತಮಗದನ್ನು ಕಳುಹುವೆನು.

ದೇವಿ—ನಿಮ್ಮ ಜನರಾರೂ ನಾನಿರುವಲ್ಲಿಗೆ ಬರಲಾರರು.

ವ್ರಜ—ನಾನೇ ಹಣವನ್ನು ತೆಗೆದುಕೊಂಡು ಬರುವೆನು.

ದೇವಿ—ಎಲ್ಲಿಗೆ ಬರುವಿರಿ ? ನಾನು ಒಂದು ಸ್ಥಳದಲ್ಲಿರತಕ್ಕವಳಲ್ಲ.

ವ್ರಜ—ಇಂತಹ ಸ್ಥಳವೆಂದರೆ ನಾನಲ್ಲಿಗೆ ಬರುವೆನು.

ದೇವಿ—ಇಂತಹ ದಿವಸವೆಂದು ಗೊತ್ತು ಹೇಳಿದರೆ ನಾನಾ ಸ್ಥಳವನ್ನು ಗೊತ್ತುಮಾಡಿ ಹೇಳುವೆನು.

ವ್ರಜ—ನಾನು ಮಾಘ ಫಾಲ್ಗುಣ ಮಾಸಗಳಲ್ಲಿ ಹಣವನ್ನು ಒದಗಿಸ ಲ್ಲೆನು. ಆದರೆ ಸ್ವಲ್ಪಹೆಚ್ಚಾದ ಕಾಲವಿದ್ದರೆ ಒಳ್ಳೆಯದು. ವೈಶಾಖಮಾಸ ದಲ್ಲಿ ಹಣವನ್ನು ಕೊಡುವೆನು.

ದೇವಿ—ಹಾಗಾದರೆ ವೈಶಾಖಮಾಸದ ಶುಕ್ಲಪಕ್ಷ ಸಪ್ತಮಿಯಾ ರಾತ್ರಿ ಇದೇ ಘಾಟಿಗೆ ಹಣವನ್ನು ತರೋಣಾಗಲಿ. ಸಪ್ತಮಿಯಾ ಚಂದ್ರಾಸ್ತ ಪರ್ಯಂತ ನಾನಿಲ್ಲಿರುವೆನು. ಚಂದ್ರಾಸ್ತವಾದ ಬಳಿಕ ನೀವೆನ್ನನ್ನು ನೋಡಲಾರಿರಿ.

ವ್ರಜೇಶ್ವರನದಕ್ಕೊಪ್ಪಿಕೊಂಡನು. ಅನಂತರ ದೇವಿಯು ಪರಿಚಾರಕರಿಗೆ

ಕೊಡವನ್ನು ಆತನ ಹಡಗಿನಲ್ಲಿಟ್ಟು ಬರುವಂತೆ ಅಪ್ಪಣೆಮಾಡಿದಳು. ಪರಿಚಾರಕರು ಕೊಡವನ್ನು ಹಡಗಿಗೆ ಕೊಂಡೊಯ್ದರು. ವ್ರಜೇಶ್ವರನು ದೇವಿಗೆ ಆಶೀರ್ವದಿಸಿ ಹಡಗಿಗೆ ಹೊರಟನು. ದೇವಿಯು ನಿಷೇಧಿಸಿ ನಿಲ್ಲಿಸಿಕೊಂಡು, 'ಮತ್ತೊಂದು ಮಾತು ಹೇಳುವುದು ಉಳಿಯಿತು. ಹಣವನ್ನೇನೋ ಸಾಲವಾಗಿ ಕೊಟ್ಟಂತಾಯಿತು. ಮರ್ಯಾದೆಯೇನೂ ಮಾಡಲಿಲ್ಲ'ವೆಂದಳು.

ವ್ರಜ—ಕೊಡವೇ ಮರ್ಯಾದೆ.

ದೇವಿ—ಕೊಡವನ್ನು ಕೊಂಡೊಯ್ದೆನೆಂಬುದು ತಮಗೆ ತಕ್ಕ ಮರ್ಯಾದೆಯಲ್ಲ. ಯಥಾಶಕ್ತಿ ಮರ್ಯಾದೆಯನ್ನು ಮಾಡುವೆನು.

ಹೀಗೆಂದು ಹೇಳಿ ದೇವಿಯು ತನ್ನ ಕೈಬೆರಳಿನಿಂದೊಂದುಂಗುರವನ್ನು ತೆಗೆದು ನಗುಮುಖಿಯಾಗಿ ವ್ರಜೇಶ್ವರನಿಗೆ ಕೊಡಲು ಕೈನೀಡಿದಳು. ಕೈನೀಡಿ ಉಂಗುರವನ್ನು ಕೊಡದೆ, ಅದನ್ನವನ ಬೆರಳಿಗೆ ತೊಡಿಸಲು ಕೈಯನ್ನು ಹಿಡಿದುಕೊಂಡಳು.

ವ್ರಜೇಶ್ವರನು ಜಿತೇಂದ್ರಿಯನು. ಆದರೆ ಮನಸ್ಸಿನಲ್ಲಾವದೋ ಒಂದು ವಿಧವಾದ ಕಳವಳದ ಗದ್ದಲವು ಹತ್ತಿದ್ದಿತು. ಜಿತೇಂದ್ರಿಯನಾದಾ ವ್ರಜೇಶ್ವರನು ಅದನ್ನು ತಿಳಿದುಕೊಳ್ಳಲಾರದೆ ಹೋದನು. ಶರೀರದಲ್ಲಿ ಮುಳ್ಳು ಚುಚ್ಚಿದಂತಾಯಿತು—ಶರೀರದೊಳಗೆ ಅಮೃತಮಯವಾದೊಂದು ಪ್ರವಾಹವು ಹುಟ್ಟಿದಂತೆ ಅನುಭವಮಾಡಿದನು. ಜಿತೇಂದ್ರಿಯನಾದಾ ವ್ರಜೇಶ್ವರನು ತನ್ನ ಕೈಯನ್ನು ಹಿಂದಕ್ಕೆ ತೆಗೆದುಕೊಳ್ಳುವುದಕ್ಕೆ ಮರೆತುಹೋದನು. ದೇವರು ಹೀಗೇವೇ ಒಂದೊಂದು ತಡವೆ ಮನುಷ್ಯನು ತಾನು ಮಾಡಬೇಕಾದ ಕೆಲಸವನ್ನು ಮಾಡದಿರುವಂತೆ ಮರುವನ್ನು ತಂದಿಡುತ್ತಾನೆ.

ಅದುಕಾರಣ, ದೇವಿಯು ಆತನ ಮಾನಸಿಕವಾದ ಕಳವಳದ ಗಲಭೆಯಲ್ಲಿ ವ್ರಜೇಶ್ವರನ ಬೆರಳಿಗೆ ಮೆಲ್ಲಮೆಲ್ಲಗೆ ಉಂಗುರವನ್ನು ತೊಡಿಸಿದಳು. ಆ ಸಮಯದಲ್ಲಿ ಎರಡು ಬೊಟ್ಟು ಉಷ್ಣೋದಕವು ವ್ರಜೇಶ್ವರನ ಕೈಮೇಲೆ ಬಿದ್ದಿತು. ವ್ರಜೇಶ್ವರನು ನೋಡಲಾಗಿ ದೇವಿಯ ಕಣ್ಣುಗಳಿಂದ ನೀರು ಧಾರೆಯಾಗಿ ಸುರಿಯುತಿದ್ದಿತು. ಆವ ಪ್ರಕಾರ ಏನಾಯಿತೋ ಅದನ್ನು ಹೇಳಲಾರೆವು ವ್ರಜೇಶ್ವರನೇನೋ ಜಿತೇಂದ್ರಿಯನೇ ಅಹುದು, ಆದರೆ ಮನಸ್ಸಿನಲ್ಲಿ ಆವುದೋ ಒಂದು ಗಲಭೆಯು ಹತ್ತಿದ್ದಿತು. ಅದೇ ಮಾದರಿಯ ಮಾಧುರ್ಯವಾದ ಮತ್ತೊಂದು ಮುಖವು ಜ್ಞಾಪಕಕ್ಕೆ ಬಂದಿತು. ಆ ಮುಖದಲ್ಲಿ ಆ ಕಣ್ಣುಗಳಿಂದ ಹೀಗೇವೇ ನೀರು ಬೀಳುತಿದ್ದಿತೆಂದು ತೋರುತ್ತದೆ. ಇದೇ ಅದು. ಅದೇ ಇದು, ಎಂದೇನೋ ಒಂದು ಭ್ರಮೆಯು ಅವನ ಮನಸ್ಸಿನಲ್ಲಿ ಹತ್ತಿದ್ದಂತೆ ತೋರುತ್ತದೆ. ವ್ರಜೇಶ್ವರನು ಏನನ್ನೂ ಯೋಚಿಸದೆ, ಆವುದನ್ನೂ ತಿಳಿಯದೆ ದೇವಿಯ ಭುಜದಮೇಲೆ ಕೈಯಿಟ್ಟನು. ಮತ್ತೊಂದು ಕೈಯಿಂದವಳ ಗಲ್ಲವನ್ನು ಹಿಡಿದು ಮುಖವನ್ನೆತ್ತಿ—ಪ್ರಫುಲ್ಲೆಯ ಮುಖವೆಂದು ತಿಳಿದುಕೊಂಡನೆಂದು

ತೋರುತ್ತದೆ—ವಿವಶನಾಗಿ, ವಿಹ್ವಲನಾಗಿ ಆ ಕಣ್ಣೀರಿನಿಂದ ತೊಯಿದಾ ಬಿಂಬಾ ಧರವನ್ನು—ಆಹ! ಛೀ! ಛೀ! ವ್ರಜೇಶ್ವರ! ಪುನಃ!—

ಆಗ ವ್ರಜೇಶ್ವರನ ತಲೆಯಮೇಲೆ ಆಕಾಶವೇ ಕಳಚಿ ಬಿದ್ದಂತಾಯಿತು. 'ಏನನ್ನು ಮಾಡಿಬಿಟ್ಟೆನು! ಇವಳೇನು, ಪ್ರಫುಲ್ಲೆಯೆ! ಪ್ರಫುಲ್ಲೆಯು ಸತ್ತು ಹತ್ತು ವರ್ಷವಾಗಿ ಹೋಯಿತು!' ಎಂದಂದುಕೊಂಡು ಊರ್ಧ್ವಶ್ವಾಸದಿಂದ ಪಲಾಯನವಾಗಿ ಒಂದೇ ಉಸಿರಿಗೆ ಓಡಿಹೋಗಿ ತನ್ನ ಹಡಗಿನಮೇಲೆ ಹತ್ತಿದನು. ಸಾಗರೆಯನ್ನು ಸಂಗಡ ಕರೆದುಕೊಂಡು ಹೋಗಲಿಲ್ಲ. ಅವಳು, 'ಹಿಡಿಕೊ! ಹಿಡಿಕೊ! ಆಸಾಮಿ ಓಡಿಹೋಗುತ್ತಾನೆ!' ಎಂದು ಹೇಳಿಕೊಂಡು ಹಿಂದೆ ಹಿಂದೆ ಓಡಿಹೋಗಿ ಅವನ ಹಡಗನ್ನೇರಿದಳು.

ವ್ರಜೇಶ್ವರನೂ ವ್ರಜೇಶ್ವರನ ಎರಡು ರತ್ನಾಧಾರಗಳೂ, ಎಂದರೆ, ಒಂದು ಸಾಗರೆ, ಮತ್ತೊಂದು ಬೆಳ್ಳಿಯ ಕೊಡ. ಅವನ ಹಡಗಿಗೆ ಸೇರಿದ ಬಳಿಕ ಕಟ್ಟಿದ್ದ ಹಡಗು ಬಿಚ್ಚಲ್ಪಟ್ಟಿತು.

ಇತ್ತಲಾಗಿ ನಿಶಿಯು ದೇವಿಯ ಶಯ್ಯಾಗೃಹಕ್ಕೆ ಹೋಗಿ ನೋಡಿದಳು. ದೇವಿಯು ನೆಲದಮೇಲೆ ಬಿದ್ದು ಉರುಳಾಡುತ್ತ ಅಳುತಿದ್ದಳು. ನಿಶಿಯು ಅವಳನ್ನೆಬ್ಬಿಸಿ ಕುಳ್ಳಿರಿಸಿ, ಕಣ್ಣೀರನ್ನು ಒರಸಿ, 'ತಾಯಿ! ಇದೇನು, ಇದೇ ನಿನ್ನ ನಿಷ್ಕಾಮ ಧರ್ಮ! ಇದೇ ಸನ್ಯಾಸ? ಆ ಭಗವದ್ವಾಕ್ಯವು ಎಲ್ಲಿ ಹೋಯಿತು?' ಎಂದಳು.

ದೇವಿಯು ಸುಮ್ಮನಿದ್ದಳು. ನಿಶಿಯು, 'ಆ ವ್ರತನಿಯಮಗಳೆಲ್ಲಾ ಹೆಂಗಸರಿಗೇಕೆ? ಅವರಿಂದದಾಗತಕ್ಕುದಲ್ಲ. ಹಾಗಾ ವ್ರತಗಳನ್ನೆಲ್ಲಾ ನೆರವೇರಿಸಬೇಕಾದರೆ ನನ್ನಂತಾಗಬೇಕು. ನನ್ನನ್ನು ಅಳುಸುವುದಕ್ಕೆ ಸಲವಾಗಿ ನನಗೆ ವ್ರಜೇಶ್ವರನಿಲ್ಲ; ನನಗೆ ವೈಕುಂಠೇಶ್ವರನೊಬ್ಬನೇ ವ್ರಜೇಶ್ವರ' ಎಂದು ಹೇಳಿದಳು.

ದೇವಿಯು ಕಣ್ಣೊರಸಿಕೊಂಡು, 'ನೀನು ಯಮಾಲಯಕ್ಕೆ ಹೋಗು!' ಎಂದಳು.

ನಿಶಿ—ಆಕ್ಷೇಪಣೆಯಿಲ್ಲ. ಆದರೆ ನನ್ನ ಮೇಲೆ ಯಮನ ಅಧಿಕಾರವಿಲ್ಲ. ನೀನು ಸನ್ಯಾಸವನ್ನು ತ್ಯಾಗ ಮಾಡಿಬಿಟ್ಟು ಮನೆಗೆ ಹೋಗು.

ದೇವಿ—ಆ ಮಾರ್ಗವು ಸರಿಯಾಗಿದ್ದಿದ್ದರೆ ನಾನೀ ಮಾರ್ಗಕ್ಕೆ ಬರುತ್ತಿರಲಿಲ್ಲ. ಈಗ ಹಡಗನ್ನು ಬಿಚ್ಚಿಬಿಡೆಂದು ಹೇಳು, ನಾಲ್ಕು ಪಟಗಳನ್ನೂ ಏರಿಸಿಬಿಡಲಿ.

ಆಗ ಹಡಗು ನಾಲ್ಕೂ ಪಟಗಳು ಹಾರುತ್ತ ಪಕ್ಷಿಯು ಎದ್ದುಹಾರುವಂತೆ ಹೊರಟುಹೋಯಿತು.

# ಒಂಭತ್ತನೆಯ ಪರಿಚ್ಛೇದ

ವ್ರಜೇಶ್ವರನು ತನ್ನ ಹಡಗಿಗೆ ಬಂದು ಗಂಭೀರಭಾವದಿಂದ ಕುಳಿತುಕೊಂಡನು. ಸಾಗರೆಯ ಸಂಗಡ ಮಾತಾಡಲಿಲ್ಲ. ದೇವಿಯ ಹಡಗು ಪಕ್ಷಿಯಹಾಗೆ ಹಾರಿಹೋಗುತಿದ್ದುದನ್ನು ನೋಡಿದನು. ಆಗ ವ್ರಜೇಶ್ವರನು ಸಾಗರೆಯನ್ನು ಕುರಿತು, 'ಆ ಹಡಗು ಎಲ್ಲಿಗೆ ಹೋಯಿತು?' ಎಂದು ಕೇಳಿದನು.

ಸಾಗರ—ಅದು ದೇವಿಗೆ ಹೊರ್ತು ಮತ್ತಾರಿಗೂ ಗೊತ್ತಿಲ್ಲ. ಅದನ್ನೆಲ್ಲಾ ದೇವಿಯು ಆರಿಗೂ ಹೇಳುವುದಿಲ್ಲ.

ವ್ರಜೇಶ್ವರ—ದೇವಿ ಯಾರು?

ಸಾಗರ— ದೇವಿಯು ದೇವಿಯೇ

ವ್ರಜೇಶ್ವರ—ನಿನಗೇನಾಗಬೇಕು?

ಸಾಗರ—ನನಗೆ ಅಕ್ಕನಾಗಬೇಕು.

ವ್ರಜೇಶ್ವರ—ಹೇಗೆ, ಎಂತಹ ಅಕ್ಕನಾಗಬೇಕು?

ಸಾಗರ—ಜ್ಞಾತಿ.

ವ್ರಜೇಶ್ವರನು ಸುಮ್ಮನಾದನು. ನಾವಿಕರನ್ನು ಕೂಗಿ, 'ನೀವು ಆ ಹಡಗಿನೊಂದಿಗೆ ನಡೆಯಿಸಬಲ್ಲಿರಾ?' ಎಂದು ಕೇಳಿದನು. ನಾವಿಕರು, 'ಸಾಧ್ಯವೆ? ಅದು ನಕ್ಷತ್ರದ ವೇಗದಿಂದೋಡುತ್ತದೆ!' ಎಂದರು. ವ್ರಜೇಶ್ವರನು ಸುಮ್ಮನಾದನು. ಸಾಗರೆಗೆ ನಿದ್ರೆ ಬಂತು.

ಪ್ರಭಾತವಾಯಿತು, ವ್ರಜೇಶ್ವರನ ಹಡಗು ಬೇಗನೆ ಹೋಗುತಿದ್ದಿತು. ಸೂರ್ಯೋದಯವಾದ ಬಳಿಕ ಸಾಗರೆಯು ಬಂದು ವ್ರಜೇಶ್ವರನ ಹತ್ತಿರ ಕುಳಿತುಕೊಂಡಳು.

ವ್ರಜೇಶ್ವರ—ದೇವಿಯು ಡಕಾಯಿತಿ ಮಾಡುತ್ತಾಳೆಯೆ?

ಸಾಗರ—ನಿನಗೆ ಹೇಗೆ ತೋರುತ್ತದೆ?

ವ್ರಜೇಶ್ವರ—ಡಕಾಯಿತಿಗಳಹಾಗೆ ಕಂಡಿತು—ಡಕಾಯಿತಿಯನ್ನು ಮಾಡಿದರೂ ಮಾಡಬಹುದು. ಆದರೆ ಡಕಾಯಿತಿಯನ್ನು ಮಾಡುತ್ತಾರೆಂದು ನಂಬಿಕೆಯುಂಟಾಗುವುದಿಲ್ಲ.

ಸಾಗರ—ನಂಬಿಕೆಯುಂಟಾಗುವುದಿಲ್ಲವೇಕೆ?

ವ್ರಜೇಶ್ವರ—ಡಕಾಯಿತಿ ಮಾಡದಿದ್ದರೆ ಅಷ್ಟೊಂದು ಐಶ್ವರ್ಯವು ಎಲ್ಲಿಯದು?

ಸಾಗರ—ಕೆಲವರು, ದೇವಿಗೆ ದೇವತಾ ವರದಿಂದ ಅಷ್ಟು ಬಂದಿತೆಂದು ಹೇಳುತ್ತಾರೆ; ಕೆಲವರು, ಭೂಮಿಯಲ್ಲಿ ಸಿಕ್ಕಿತೆಂದು ಹೇಳುತ್ತಾರೆ; ಮತ್ತೆ ಕೆಲವರು, ಅವಳಿಗೆ ಬಂಗಾರವನ್ನು ಮಾಡುವುದಕ್ಕೆ ಬರುವುದೆಂದು ಹೇಳುತ್ತಾರೆ.

ವ್ರಜೇಶ್ವರ—ದೇವಿಯು ಹೇಳುವುದೇನು?

ಸಾಗರ—ದೇವಿಯು ಒಂದು ಕಾಸೂ ತನ್ನದಲ್ಲ, ಅದೆಲ್ಲಾ ಕಂಡವರ ಹಣವೆನ್ನುತ್ತಾಳೆ.

ವ್ರಜೇಶ್ವರ—ಕಂಡವರ ಹಣವು ಅಷ್ಟೊಂದು ಸಿಕ್ಕಿದುದೆಲ್ಲಿ ?

ಸಾಗರ—ಅದೆನಗೆ ಹೇಗೆ ಗೊತ್ತು ?

ವ್ರಜೇಶ್ವರ—ಇತರರ ಹಣವಾದರೆ ಅಷ್ಟೊಂದು ದಾಂಧಲಿ ಮಾಡುವರೆ ? ಅವರೇನೂ ಹೇಳುವುದಿಲ್ಲವೆ ?

ಸಾಗರ—ದೇವಿಯು ದಾಂಧಲೆಮಾಡುವುದಿಲ್ಲ. ತಾನೇ ಅಡಿಗೆಮಾಡಿಕೊಂಡು ಊಟಮಾಡುತ್ತಾಳೆ. ನೆಲದ ಮೇಲೆ ಮಲಗುತ್ತಾಳೆ. ನಿನ್ನೆ ನೀವು ನೋಡಿದುದೆಲ್ಲಾ ನಿಮಗೋಸ್ಕರ ನನಗೋಸ್ಕರ ಮಾಡಿದುದು. ಕೇವಲ ಆಟ್ಟಹಾಸಕ್ಕೋಸ್ಕರವಾಗಿ ಮಾಡಿದಳು. ನಿನ್ನ ಕೈಲಿರುವುದೇನು ? ಹೊಸ ಉಂಗುರವಾಗಿ ಕಾಣುತ್ತದೆ !

ವ್ರಜೇಶ್ವರ—ನಿನ್ನೆ ಊಟವಾದ ಬಳಿಕ ದೇವಿಯು ನನಗದನ್ನು ಉಡುಗೆರೆಯಾಗಿ ಕೊಟ್ಟಳು.

ಸಾಗರ—ನೋಡೋಣ ?

ವ್ರಜೇಶ್ವರನು ಉಂಗುರವನ್ನು ತೆಗೆದುಕೊಟ್ಟನು. ಸಾಗರೆಯು ಕೈಗೆ ತೆಗೆದುಕೊಂಡದನ್ನು ತಿರುಗಿಸಿ ತಿರುಗಿಸಿ ನೋಡಿ, 'ಇದರಲ್ಲಿ ದೇವೀಚೌಧುರಾಣಿಯ ಹೆಸರು ಕೆತ್ತಿದೆ' ಎಂದಳು.

ವ್ರಜೇಶ್ವರ—ಎಲ್ಲಿ ?

ಸಾಗರ—ಒಳಗೆ—ಫಾರಸಿಯಲ್ಲಿ.

ವ್ರಜೇಶ್ವರ—(ಓದಿ) ಇದೇನು ? ಇದು ನನ್ನ ಹೆಸರು ! ನನ್ನ ಉಂಗುರವೆ ! ಸಾಗರ ! ನನ್ನ ಮೇಲಿನ ಆಣೆ ! ನಿಜವಾಗಿ ಹೇಳು—ದೇವಿ ಯಾರು ?

ಸಾಗರ—ನೀನು ತಿಳಿದುಕೊಳ್ಳದೆ ಹೋದರೆ ಅದೆನ್ನದೋಷವೆ? ನಾನೊಂದು ನಿಮಿಷದಲ್ಲಿ ಕಂಡುಹಿಡಿದೆನು.

ವ್ರಜೇಶ್ವರ—ಆರು ! ದೇವಿಯು ಆರು ?

ಸಾಗರ—ಪ್ರಫುಲ್ಲೆ !

ವ್ರಜೇಶ್ವರನು ಪುನಃ ಮಾತಾಡಲಿಲ್ಲ. ಸಾಗರೆಯು ನೋಡಲಾಗಿ, ಅವನು ಮೈಗೆ ಮುಳ್ಳು ಚುಚ್ಚಿ ಬಳಿಕ ಅನಿರ್ವಚನೀಯವಾದೊಂದು ಆಹ್ಲಾದದ ಚಿಹ್ನೆಯು ತೋರ್ಪಟ್ಟು ಉಕ್ಕಿ ಬರುತ್ತಿದ್ದ ಸುಖದ ತರಂಗವೆದ್ದು ಬಂದುದರ ಅನುಭವವುಳ್ಳವನಂತೆ ಕಂಡಿತು. ಮುಖವು ಕಾಂತಿಮಯವಾಗಿ ಕಣ್ಣುಗಳು ಉಜ್ವಲವಾಗಿ ನೀರಿನಲ್ಲಿ ತೇಲುತ್ತ ದೇಹವು ಉನ್ನತವಾಗಿ ಕಾಂತಿಯು ಸ್ಫೂರ್ತಿಗೊಂಡಿತು. ಕೂಡಲೇ ಅವೆಲ್ಲಾ ಅಡಗಿದಂತಾಯಿತು. ದೊಡ್ಡದಾದೊಂದು ಘೋರತರ ವಿಷಾದವು ಪ್ರಭಾಮಯವಾದಾ ಕಾಂತಿಯನ್ನು ಆವರಿಸಿಕೊಂಡಂ

ತಾಯಿತು. ವ್ರಜೇಶ್ವರನು ಮಾತಿಲ್ಲದವನಾಗಿ ಚಾಲನವಿಲ್ಲದವನಾಗಿ ನಿಮೇಷ ಶೂನ್ಯನಾದನು. ಕ್ರಮೇಣ ಸಾಗರೆಯನ್ನು ನೋಡಿ ಬಳಿಕ ಕಣ್ಣುಗಳನ್ನು ಮುಚ್ಚಿಕೊಂಡನು. ಕುಳಿತಿರಲಾರದೆ ತಲೆಯನ್ನು ಸಾಗರೆಯ ತೊಡೆಯ ಮೇಲಿಟ್ಟು ಮಲಗಿಕೊಂಡನು. ಸಾಗರೆಯು ಕಾತರೆಯಾಗಿ ಮಾತಾಡಿಸಿದಳು. ಉತ್ತರವು ಹೊರಡಲಿಲ್ಲ. ಒತ್ತಪವೆ ಮಾತ್ರ ಅವನು, 'ಪ್ರಫುಲ್ಲೆಯು ಡಕಾಯಿತಿಯಾಗುವಳೆ? ಛಿ!' ಎಂದನು.

---

# ಹತ್ತನೆಯ ಪರಿಚ್ಛೇದ

ವ್ರಜೇಶ್ವರನನ್ನೂ ಸಾಗರೆಯನ್ನೂ ಅಪ್ಪಣೆಕೊಟ್ಟು ಕಳುಹಿಸಿ, ಬಳಿಕ ದೇವೀಚೌಧುರಾಣಿ—ಆ! ಹೋದಳೆಲ್ಲಿಗೆ. ದೇವಿ? ಆ ವೇಷಭೂಷಣಗಳು, ಆ ಸೀರೆ, ಆ ನವರತ್ನಖಚಿತವಾದ ಆಭರಣ, ಎಲ್ಲಾ ಎಲ್ಲಿ ಹೋದುವು? ದೇವಿಯು ಎಲ್ಲವನ್ನೂ ತ್ಯಜಿಸಿಬಿಟ್ಟಳು. ಎಲ್ಲಾ ಅಂತರ್ಧಾನವಾಗಿ ಹೋದುವು. ದೇವಿಯು ಒಂದು ಒರಟು ಬಟ್ಟೆಯ ಸೀರೆಯನ್ನುಟ್ಟಿದ್ದಾಳೆ. ಕೈಯಲ್ಲಿ ಒಂದು ಬಳೆ ದೇವಿಯು ಹಡಗಿನಲ್ಲೊತ್ತಟ್ಟು ಒಂದು ಚಾಪೆಯನ್ನು ಹಾಸಿಕೊಂಡು ಶಯನ ಮಾಡಿದ್ದಾಳೆ. ನಿಪ್ರೆಯು ಬಂದಿದ್ದಿತೋ ಇಲ್ಲವೋ ನಮಗದು ಗೊತ್ತಿಲ್ಲ.

ಹಡಗು ಗೊತ್ತಾಗಿದ್ದ ಸ್ಥಳಕ್ಕೆ ಬಂದು ನಿಲ್ಲುತ್ತಲೇ ಪ್ರಭಾತದಲ್ಲಿ ದೇವಿಯು ನೀರಿನಲ್ಲಿಳಿದು ಸ್ನಾನವನ್ನು ಮಾಡಿದಳು. ಸ್ನಾನಮಾಡಿ ಒದ್ದೇಬಟ್ಟೆಯಲ್ಲಿದ್ದಳು. ಅದೊಂದೇ ಸೀರೆ. ಮುಖದಲ್ಲಿಯೂ ಎನೆಯಲ್ಲಿಯೂ ಗಂಗಾ ಮೃತ್ತಿಕೆಯನ್ನು ಹಚ್ಚಿಕೊಂಡಳು. ಒದ್ದೆಯಾಗಿ ಬಿಚ್ಚಿದ ಕೇಶವು ಹರಡಿಕೊಂಡಿದ್ದಿತು, ಆಗವಳಾ ಸೌಂದರ್ಯವು ಕಂಡುಬಂದಂತೆ ಹಿಂದಿನ ರಾತ್ರಿ ವೇಷ ಭೂಷಣಗಳಿಂದಲೂ ವಜ್ರವೈಡೂರ್ಯ ಮುಂತಾದ ನವರತ್ನಗಳಿಂದಲೂ ಆಲಂಕೃತವಾದಾ ರಾಣೀಗಿರಿಯಲ್ಲಿ ಕಂಡುಬರಲಿಲ್ಲ. ನಿನ್ನೆನರಾತ್ರಿ ದೇವಿಯು ರತ್ನಾಭರಣಗಳಿಂದ ರಾಜರಾಣಿಯಾಗಿ ಕಾಣುತ್ತಿದ್ದಳು ಇಂದು ಗಂಗಾಮೃತ್ತಿಗೆಯಿಂದ ದೇವತಾಸ್ವರೂಪಳಾಗಿ ಕಂಡುಬಂದಳು. ಆ ಸೌಂದರ್ಯವು ಮೃತ್ತಿಕೆಯನ್ನು ಬಿಟ್ಟು ವಜ್ರ ಮುಂತಾದ ರತ್ನಗಳಿಂದ ಬಂದೀತೆ?

ದೇವಿಯು ಸಮನಲ್ಲದಾ ಉಡುಪಿನಿಂದೊಬ್ಬಳೇ ಹೆಂಗಸೊಬ್ಬಳನ್ನು ಸಂಗಡ ಕರೆದುಕೊಂಡು ನದಿಯ ದಡದಲ್ಲಿಯೇ ನಡೆದುಹೋದಳು, ಹಡಗಿನ ಮೇಲೆ ಹತ್ತಲಿಲ್ಲ. ಬಹಳ ದೂರ ಹೋಗಿ ಒಂದು ಅರಣ್ಯವನ್ನು ಪ್ರವೇಶ ಮಾಡಿದಳು. ನಾವು ಮಾತು ಮಾತಿಗೂ ಅರಣ್ಯದ ವಿಚಾರವನ್ನೇ ಹೇಳುತ್ತಿರುವೆವು; ಮಾತು ಮಾತಿಗೂ ಡಕಾಯಿತಿಗಳನ್ನೇ ಹೇಳುತ್ತಿದ್ದೇವೆ. ಅದರಿಂದ ಪಾಠಕ ಮಹಾಶಯರು ನಾವು ಕೇವಲ ಅತ್ಯುಕ್ತಿಯನ್ನು ಹೇಳುತ್ತೇವೆಂತಾಗಲಿ, ಅಥವಾ

ನಾವು ಡಕಾಯಿತಿಯಲ್ಲಿ ಇಷ್ಟವುಳ್ಳವರೆಂತಾಗಲಿ ತಿಳಿಯಕೂಡದು. ನಾವಾವ ಕಾಲದ ಸಮಾಚಾರವನ್ನು ಹೇಳುತ್ತೇವೋ ಆ ಕಾಲದಲ್ಲಿ ದೇಶವೆಲ್ಲಾ ಅರಣ್ಯಮಯವಾಗಿದ್ದಿತು. ಈಗಲೂ ಅಲ್ಲಿ ಅನೇಕ ಸ್ಥಳಗಳಲ್ಲಿ ಭಯಂಕರವಾದ ಅರಣ್ಯಗಳಿವೆ. ಕೆಲವನ್ನು ನಾವು ಪ್ರತ್ಯಕ್ಷವಾಗಿ ನೋಡಿದ್ದೇವೆ. ಈಗ ಅಂತಹ ಡಕಾಯಿತಿಗಳ ಮಾತು ಹೋಯಿತು. ಪಾಠಕಮಹಾಶಯರು ಭಾರತವರ್ಷದಲ್ಲಿ ಮೊದಲು ಡಕಾಯಿತಿಗಳನ್ನು ಅಡಗಿಸುವುದಕ್ಕೆ ಸಲವಾಗಿ ಗೌರ್ನರ್ ಜನರಲ್ ಆಗಿದ್ದ ಮಾರ್ಕ್ವಿಸ್ ಆಫ್ ಹೇಸ್ಟಿಂಗ್ಸನು (Marquis of Hastings) ಮಾಡಿದಷ್ಟು ಯುದ್ಧೋದ್ಯಮಗಳು ಪಂಜಾಬದೇಶದಲ್ಲಿ ನಡೆದ ಯುದ್ಧಕ್ಕೆ ಮೊದಲಾವಾಗಲೂ ಮಾಡಿರಲಿಲ್ಲ. ಅರಾಜಿಕವಾದಾ ಕಾಲದಲ್ಲಿ ಡಕಾಯಿತಿಗಳನ್ನು ಮಾಡುವುದೇ ಎಲ್ಲರಿಗೂ ಕೆಲಸವಾಗಿದ್ದಿತು; ಆ ಕಾಲದಲ್ಲಿ ದುರ್ಬಲನಾದ ಮೂರ್ಖನೇ ದೊಡ್ಡ ಮನುಷ್ಯನಾಗಿದ್ದನು. ಡಕಾಯಿತಿ ಮಾಡುವುದು ನಿಂದೆಯಾಗಿಯೂ ಲಜ್ಜಾಸ್ಪದವಾದುದಾಗಿಯೂ ಆರೂ ತಿಳಿದಿರಲಿಲ್ಲ.

ದೇವಿಯು ಅರಣ್ಯದೊಳಗೆ ಪ್ರವೇಶಮಾಡಿ ಮತ್ತೂ ಬಹಳ ದೂರ ನಡೆದು ಹೋದಳು. ಒಂದು ಮರದಬಳಿ ಹೋಗಿ ಜತೆಯಲ್ಲಿ ಬರುತ್ತಿದ್ದವಳನ್ನು ಕುರಿತು, 'ದಿವಾ! ನೀನಿಲ್ಲಿ ಕುಳಿತಿರು, ನಾನು ಬರುವೆನು. ಈ ಅರಣ್ಯದಲ್ಲಿ ಹುಲಿ ಕರಡಿಗಳು ಬಹಳವಿಲ್ಲ. ಅದು ಬಂದರೂ ನಿನಗೇನನ್ನೂ ಮಾಡದು. ಭಯವಿಲ್ಲ. ನೋಡಿಕೊಳ್ಳುವವರು ಬಹಳ ಮಂದಿ ಇದ್ದಾರೆ' ಎಂದು ಹೇಳಿ, ದೇವಿಯು ಮತ್ತೂ ಹೆಚ್ಚಾಗಿದ್ದ ಅರಣ್ಯದೊಳಗೆ ಹೋದಳು. ನಿಬಿಡವಾಗಿದ್ದಾ ಅರಣ್ಯದಲ್ಲಿ ಒಂದು ನೆಲಮಾಳಿಗೆಯು ಇದ್ದಿತು. ಅದಕ್ಕೆ ಇಳಿಯುವುದಕ್ಕೆ ಕಲ್ಲು ಮೆಟ್ಲುಗಳಿದ್ದುವು. ಇಳಿಯುವ ಸ್ಥಳದಲ್ಲಿ ಅತ್ಯಂತ ಅಂಧಕಾರಮಯವಾದೊಂದು ಮಂಟಪ. ಪೂರ್ವಕಾಲದಲ್ಲಿ ಅದು ದೇವಾಲಯವಾಗಿದ್ದಿತೆಂದು ತೋರುತ್ತದೆ. ಈಗ ನಾಲ್ಕು ಕಡೆಗಳಲ್ಲಿ ಮಣ್ಣುರಾಶಿಯು ಬಿದ್ದಿದೆ. ಆದುದರಿಂದ ಅಲ್ಲಿ ಮೆಟ್ಲುಗಳನ್ನಿಳಿದು ಹೋಗಬೇಕು. ದೇವಿಯು ಅಂಧಕಾರದಲ್ಲಾ ಮೆಟ್ಲುಗಳನ್ನಿಳಿದಳು.

ಭೂಗರ್ಭಸ್ಥವಾಗಿದ್ದಾ ದೇವಮಂದಿರದಲ್ಲಿ ಮಿಣಿಮಿಣಿ ಎಂದೊಂದು ದೀಪವು ಮಿಣಗುತಿದ್ದಿತು. ಆ ಬೆಳಕಿನಿಂದೊಂದು ಶಿವಲಿಂಗವು ಕಾಣುವುದು. ಬ್ರಾಹ್ಮಣನೊಬ್ಬನಾ ಶಿವಲಿಂಗದ ಮುಂದೆ ಕುಳಿತು ಶಿವಪೂಜೆಯನ್ನು ಮಾಡುತಿದ್ದನು. ದೇವಿಯು ಶಿವಲಿಂಗಕ್ಕೆ ಪ್ರಣಾಮವನ್ನು ಮಾಡಿ ಬ್ರಾಹ್ಮಣನು ಕುಳಿತಿದ್ದ ಸ್ಥಳದಿಂದ ಸ್ವಲ್ಪ ದೂರ ಕುಳಿತುಕೊಂಡಳು. ಬ್ರಾಹ್ಮಣನು ಪೂಜೆಯನ್ನು ಪೂರೈಸಿ ಆಚಮನವನ್ನು ಮಾಡಿ ದೇವಿಯೊಂದಿಗೆ ಮಾತಾಡಲು ಪ್ರವೃತ್ತನಾದನು.

ಬ್ರಾಹ್ಮಣ—ತಾಯಿ! ನಿನ್ನೆ ರಾತ್ರಿ ನೀನೇನನ್ನು ಮಾಡಿದೆ? ಡಕಾಯಿತಿಯನ್ನು ಮಾಡಿದಿಯಲ್ಲವೆ?

ದೇವಿ—ತಮಗಾವದು ನಂಬುಗೆ?

ಬ್ರಾಹ್ಮಣ— ನನಗೆ ಹೇಗೆ ಗೊತ್ತು ?

ಬ್ರಾಹ್ಮಣನು ಮತ್ತಾರೂ ಅಲ್ಲ. ನಮ್ಮ ಪೂರ್ವಪರಿಚಿತನಾದ ಭವಾನಿ ಠಾಕೂರ.

ದೇವಿ—ಇದೇನು, ಠಾಕೂರ! "ನನಗೆ ಹೇಗೆ ಗೊತ್ತು" ಎಂದು ಹೇಳೋಣಾಗುತ್ತದೆ ? ತಾವು ನನ್ನನ್ನು ಕಾಣಿರಾ? ಈಗ್ಗೆ ಹತ್ತುವರ್ಷದಿಂದೀ ಕಳ್ಳರ ದಳದೊಂದಿಗೆ ರಾತ್ರಿ ಹಗಲು ಅಲದಿದ್ದೇನೆ. ನಡೆದ ಡಕಾಯಿತಿಗಳನ್ನೆಲ್ಲಾ ನಾನೇ ಮಾಡಿದವಳೆಂದು ಜನರು ಹೇಳುತ್ತಾರೆ. ಆದರೂ ಒಂದು ದಿನವಾದರೂ ನಾನಾ ಕೆಲಸವನ್ನು ಮಾಡಿದವಳಲ್ಲ. ತಮಗದು ಚೆನ್ನಾಗಿ ಗೊತ್ತುಂಟು. ಆದರೂ 'ನನಗೆ ಹೇಗೆ ಗೊತ್ತು ?' ಎಂದು ಹೇಳೋಣಾಯಿತು ?

ಭವಾನಿ—ಕೋಪಮಾಡುವುದೇಕೆ ? ನಾನಾವ ಅಭಿಪ್ರಾಯದಿಂದ ಡಕಾಯಿತಿಗಳನ್ನು ನಡೆಯಿಸುತ್ತೇನೋ ಅದು ಕೆಟ್ಟ ಕೆಲಸವೆಂದು ತಿಳಿದಿಲ್ಲ, ಕೆಟ್ಟಕೆಲಸವೆಂದು ತಿಳಿದಿದ್ದರೆ ಒಂದು ದಿನವಾದರೂ ಅಂತಹ ಕೆಲಸವನ್ನು ಮಾಡುತ್ತಿರಲಿಲ್ಲ. ನೀನದನ್ನು ಕೆಟ್ಟಕೆಲಸವೆಂದು ತಿಳಿದಿಲ್ಲವೆಂದು ತೋರುತ್ತದೆ. ಹಾಗೆ ತಿಳಿದಿದ್ದರೆ ಈ ಹತ್ತುವರ್ಷ—

ದೇವಿ—ಆ ವಿಷಯದಲ್ಲಿ ನನ್ನ ಅಭಿಪ್ರಾಯವು ಭಿನ್ನಿಸುತ್ತದೆ. ತಾವು ಹೇಳಿದುದರಮೇಲೆ ನಾನದನ್ನು ಮರೆತ್ತಿದ್ದೆನು. ನನಗೀಗಾ ಅಭಿಪ್ರಾಯವಿಲ್ಲ. ಪರರ ದ್ರವ್ಯವನ್ನು ತೆಗೆದುಕೊಳ್ಳುವುದು ಕೆಟ್ಟಕೆಲಸವಲ್ಲವೆ, ಮಹಾಪಾತಕವಲ್ಲವೆ? ನಾನಿನ್ನು ತಮ್ಮೊಂದಿಗಾವ ಸಂಪರ್ಕವನ್ನೂ ಮಾಡೆನು.

ಭವಾನಿ—'ಅದೇಕೆ? ನಾನಿದುವರೆಗೆ ಹೇಳಿದುದನ್ನೇ ಪುನಃ ತಿಳಿಯಹೇಳಬೇಕೆ? ಡಕಾಯಿತಿಗಳಲ್ಲಿ ಲೂಟಿಮಾಡಿದುದರಲ್ಲಿ ನಾನೊಂದು ಕಾಸನ್ನು ಮುಟ್ಟಿದ್ದರೂ ಆಗದು ಮಹಾಪಾತಕವೇ ಅಹುದು. ಆದರೆ ನೀನೇ ಬಲ್ಲೆ, ಅನ್ಯರಿಗೆ ಕೊಡುವುದಕ್ಕೆ ಸಲವಾಗಿ ಡಕಾಯಿತಿಮಾಡುತಿದ್ದುದು. ಆವನು ಧಾರ್ಮಿಕನಾಗಿ ಸನ್ಮಾರ್ಗದಲ್ಲಿದ್ದು ಹಣ ಸಂಪಾದಿಸಿಕೊಂಡಿರುವನೋ, ಆವ ಮನುಷ್ಯನು ಧನ ಹಾನಿಯಾಗಿ ಕುಟುಂಬಭರಣೆ ಪೋಷಣೆಮಾಡಲಸಮರ್ಥನಾಗುವನೋ ಅಂತಹವನ ಒಂದು ಕಾಸನ್ನಾದರೂ ನಾನಾಗಲಿ ರಂಗರಾಜನಾಗಲಿ ಮುಟ್ಟಿಲ್ಲ. ಆವನು ದಗಾಖೋರನಾಗಿ ವಂಚನೆಯಿಂದ ಪರರ ಧನವನ್ನು ಕಸರಿಕೊಂಡಿರುವನೋ ಅಂತಹವನ ಮೇಲೆ ನಾವು ಡಕಾಯಿತಿ ನಡೆಯಿಸುತ್ತೇವೆ. ಡಕಾಯಿತಿ ಮಾಡಿದುದನ್ನು ನಾವು ತೆಗೆದುಕೊಳ್ಳುವುದಿಲ್ಲ. ವಂಚಕರಾರ ಹಣವನ್ನು ತೆಗೆದುಕೊಂಡಿದ್ದರೋ ಅವರನ್ನು ಕರೆದು ಅವರ ಧನವನ್ನು ಅವರಿಗೆ ಕೊಡುವೆವು. ನೀನದನ್ನು ಬಲ್ಲೆ. ದೇಶವು ಅರಾಜಕವಾಗಿ ಹೋಗಿದೆ; ದೇಶದಲ್ಲಿ ರಾಜಶಾಸನವಿಲ್ಲ; ದುಷ್ಟರ ದಮನವಾಗುವುದಿಲ್ಲ. ಎಲ್ಲರೂ ಪರರ ದ್ರವ್ಯವನ್ನು ಕಸರಿಕೊಳ್ಳುವವರಾಗಿದ್ದಾರೆ. ಅದುಕಾರಣ ನಿನ್ನನ್ನು ರಾಣಿಯನ್ನಾಗಿ ಮಾಡಿ ರಾಜ್ಯಶಾಸನ

ವನ್ನು ನಡೆಯಿಸುತಿದ್ದೇನೆ. ನಿನ್ನ ಹೆಸರಿನಿಂದೀಗ ನಾವು ದುಷ್ಟರ ದಮನವನ್ನು ಮಾಡುತಿದ್ದೇವೆ. ಶಿಷ್ಟರ ಪರಿಪಾಲನೆಯನ್ನು ಮಾಡುತ್ತಿದ್ದೇವೆ. ಹೀಗೆ ಮಾಡು ತ್ತಿರುವುದು ಅಧರ್ಮವೆ?'

ದೇವಿ—ಆರನ್ನು ರಾಜರಾಣಿಯನ್ನಾಗಿ ಮಾಡಿದರೂ, ಅವರು ಆಗ ಬಲ್ಲರು. ನನಗೀ ತೊಂದರೆಯಿಲ್ಲದಂತೆ ಮಾಡೋಣಾಗಲಿ, ನನಗೀ ರಾಣಿಗಿರಿಯಲ್ಲಿ ಮನಸ್ಸಿಲ್ಲ.

ಭವಾನಿ—ನಾನೀ ಪದವಿಗೆ ಮತ್ತಾರನ್ನೂ ತಿದ್ದಿ ಪಳಕಮಾಡಿಲ್ಲ. ಮತ್ತಾ ರಿಗೂ ಅಷ್ಟೊಂದು ಅತುಳೈಶ್ವರ್ಯವಿಲ್ಲ. ನೀನು ಮಾಡುವ ದಾನದಿಂದ ಎಲ್ಲರೂ ನಿನ್ನ ವಶರಾಗಿದ್ದಾರೆ.

ದೇವಿ—ನನಗಿರುವ ಧನವನ್ನೆಲ್ಲಾ ನಿಮಗೆ ಕೊಟ್ಟುಬಿಡುವೆನು. ನಾನಾ ಹಣವನ್ನು ಹೇಗೆ ವೆಚ್ಚಮಾಡುತಿದ್ದೆನೋ, ತಾವೂ ಹಾಗೇಯೇ ವೆಚ್ಚಮಾಡೋ ಣಾಗಲಿ. ನಾನು ಹೋಗಿ ಕಾಶಿಯಲ್ಲಿ ವಾಸಮಾಡಬೇಕೆಂದಿದ್ದೇನೆ.

ಭವಾನಿ—ಕೇವಲ ಹಣದಿಂದಲೇ ಎಲ್ಲರೂ ನಿನ್ನ ವಶರಾಗಿದ್ದಾರೆಯೆ? ಹಾಗಿಲ್ಲ. ನೀನು ರೂಪದಲ್ಲಿಯೂ ರಾಜರಾಣಿಯಾಗಿರುತ್ತಿ. ಗುಣದಲ್ಲಿಯೂ ಯಥಾರ್ಥವಾದ ರಾಜರಾಣಿಯಾಗಿರುತ್ತಿ. ಅನೇಕರು ನಿನ್ನನ್ನು ಸಾಕ್ಷಾತ್ತು ಭಗವತಿಯ ಅವತಾರವೆಂದು ತಿಳಿದುಕೊಂಡಿದ್ದಾರೆ. ನೀನು ಸನ್ಯಾಸಿನಿ, ಸಾಕ್ಷಾತ್ತು ಪಾರ್ವತಿಯಂತೆ ಇತರರ ಮಂಗಳ ಸಾಧನೆಯನ್ನು ಮಾಡುತ್ತಿ, ಕಾತರಗೊಳ್ಳದೆ ದಾನಧರ್ಮವನ್ನು ಮಾಡುತ್ತಿ. ಹಾಗೂ ಪಾರ್ವತಿಯಂತೆ ರೂಪವತಿ. ಆದುದರಿಂದ ನಾವು ನಿನ್ನ ಹೆಸರಿನಲ್ಲೀ ರಾಜ್ಯಶಾಸನವನ್ನು ಮಾಡು ತ್ತೇವೆ. ನೀನಿಲ್ಲದೆ ನಿನ್ನ ಹೆಸರಿನಲ್ಲಿ ರಾಜ್ಯವನ್ನಾಳಿದ್ದರೆ ನಮ್ಮನ್ನಾರು ಕೇಳು ತ್ತಿದ್ದರು? ನಮ್ಮನ್ನಾರೂ ಲಕ್ಷ್ಯಮಾಡುತ್ತಿರಲಿಲ್ಲ

ದೇವಿ—ಆದುದರಿಂದಲೇ ಜನರೆಲ್ಲರೂ ನನ್ನನ್ನು ಡಕಾಯಿತಿ ಮಾಡುವ ಳೆಂದು ಹೇಳುತ್ತಾರೆ. ಆ ಅಪಖ್ಯಾತಿಯು ಸತ್ತರೂ ಹೋಗದು.

ಭವಾನಿ....ಅಪಖ್ಯಾತಿಯೇನು? ವೀರೇಂದ್ರಭೂಮಿಯಲ್ಲಾರುತಾನೇ ಅಂ ತಹ ಹೆಸರಿನಿಂದ ಲಜ್ಜಿತರಾಗುವರು? ಎಲ್ಲರೂ ದರೋಡೆಗಳನ್ನು ಮಾಡುವವರಾ ಗಿದ್ದಾರೆ. ಅದರದು ಹಾಗಿರಲಿ. ಧರ್ಮಾಚರಣೆಯಲ್ಲಿ ಖ್ಯಾತಿ ಅಪಖ್ಯಾತಿಗಳನ್ನು ನೋಡಕೂಡದು. ನೋಡುವ ಆವಶ್ಯಕವೇನು? ಅಪಖ್ಯಾತಿಯುಂಟಾಗಲೆಂದು ಕರ್ಮಮಾಡಿದರೂ ಅದು ಪಾರಮಾರ್ಥಿಕವಾದ ನಿಷ್ಕಾಮ ಕರ್ಮವಾಗಲಾರದೆ? ನೀನು ಅಪಖ್ಯಾತಿಗೆ ಭಯಪಟ್ಟು ಸುಮ್ಮನಿರುವುದು ಹೇಗೆ? ಆತ್ಮವಿಸರ್ಜನೆ ಯಾಗುವ ಬಗೆ ಹೇಗೆ?

ದೇವಿ—ತಮ್ಮ ಸಂಗಡ ತರ್ಕಿಸುವುದಕ್ಕೆನಗೆ ಶಕ್ತಿಯಿಲ್ಲ. ತಾವು ಮಹಾ ಮಹೋಪಾಧ್ಯಾಯರು. ನನ್ನ ಸ್ತ್ರೀಬುದ್ಧಿಗೆ ತೋಚಿದುದನ್ನು ಹೇಳುತ್ತೇನೆ.

ನಾನೀ ರಾಣಿಗಿರಿಗೆ ರಾಜೀನಾಮೆಯನ್ನು ಕೊಡಲಿಷ್ಟವುಳ್ಳವಳಾಗಿದ್ದೇನೆ, ನನಗದು ಚೆನ್ನಾಗಿ ಕಾಣುವುದಿಲ್ಲ.

ಭವಾನಿ—ಹಾಗೆ ಚೆನ್ನಾಗಿಲ್ಲದಿದ್ದರೆ ನಿನ್ನಿನ ರಾತ್ರಿ ರಂಗರಾಜನನ್ನು ಡಕಾಯಿತಿ ಮಾಡುವುದಕ್ಕೆ ಕಳುಹಿದುದೇಕೆ ನನಗದು ಗೊತ್ತಾಗದೆ ಇಲ್ಲ.

ದೇವಿ—ಹಾಗೆ ಗೊತ್ತಿದ್ದರೆ, ರಂಗರಾಜನು ಡಕಾಯಿತಿಯನ್ನು ಮಾಡಿದನೋ ಇಲ್ಲವೋ ಅದೂ ಗೊತ್ತಾಗಿರಬೇಕು. ಡಕಾಯಿತಿಯಂತೆ ವೇಷವನ್ನು ತಾಳ್ದುದು.

ಭವಾನಿ—ಏಕೆ? ಅದೆನಗೆ ಗೊತ್ತಿಲ್ಲ. ಅದುಕಾರಣ ಕೇಳಿದೆನು.

ದೇವಿ—ಒಬ್ಬ ಮನುಷ್ಯನನ್ನು ಹಿಡಿದುತರಲು ಹಾಗೆ ಮಾಡಿದೆವು.

ಭವಾನಿ—ಆ ಮನುಷ್ಯನಾರು ?

ದೇವಿಯು ಹೆಸರನ್ನು ಹೇಳುವುದಕ್ಕೆ ಹಿಂಜರಿದಳು. ಆದರೆ ಹೆಸರನ್ನು ಹೇಳದಿದ್ದರೆ ಸಾಗದು. ಭವಾನೀಠಾಕೂರನಿಗೆ ವಂಚಿಸಕೂಡದು. ಆದುಕಾರಣ ಯನ್ನಬಾರಿ ದೇವಿಯು, ಆತನ ಹೆಸರು ವ್ರಜೇಶ್ವರರಾಯನೆಂದು ಹೇಳಿದಳು.

ಭವಾನಿ—ನಾನವನನ್ನು ಚೆನ್ನಾಗಿ ಬಲ್ಲೆನು. ನಿನಗೆ ಅವನಿಂದೇನಾಗ ಬೇಕಾಗಿದ್ದಿತು ?

ದೇವಿ—ಆತನಿಗೇನನ್ನಾದರೂ ಕೊಡೋಣವೆಂದು ಹಿಡಿಸಿ ಕರೆಯಿಸಿದೆನು. ಅವರ ತಂದೆಯನ್ನು ಇಜಾರದಾರನು ಕೈದಿನಲ್ಲಿಡಿಸಬೇಕೆಂದು ಇದ್ದನಂತೆ. ಸ್ವಲ್ಪ ಹಣವನ್ನು ಕೊಟ್ಟು ಬ್ರಾಹ್ಮಣನ ಜಾತಿಯನ್ನುಳಿಸಿದನು.

ಭವಾನಿ—ಒಳ್ಳೆಯ ಕೆಲಸವನ್ನು ಮಾಡಿದಂತಾಗಲಿಲ್ಲ. ಅವನ ತಂದೆ ಹರವಲ್ಲಭನು ಒತ್ತಡವೆ ಸ್ವಂತ ನೆಂಟಳಿಗೆ ಜಾತಿಯನ್ನು ಹೋಗಲಾಡಿಸಿದ್ದನು. ಆದುದರಿಂದ ಅವನಿಗೆ ಜಾತಿಯು ಹೋಗುವುದೇ ಒಳ್ಳೆಯದಾಗಿದ್ದಿತು.

ದೇವಿಯು ಮೈನಡುಗಿದವಳಾಗಿ, 'ಆವಾಗ ? ಹೇಗೆ ಮಾಡಿದನು ?' ಎಂದು ಕೇಳಿದಳು.

ಭವಾನಿ—ಅವನೊಬ್ಬಳ ಸೊಸೆಗಾರೂ ದಿಕ್ಕಿರಲಿಲ್ಲ. ಕೇವಲ ಆಕೆಯ ತಾಯಿ ಮಾತ್ರ ಇದ್ದಳು. ಹರವಲ್ಲಭನಾ ಬಡವಳಮೇಲೆ ಬಹಿಷ್ಕೃತಳೆಂಬ ಅಪವಾದವನ್ನು ಹುಟ್ಟಿಸಿ ಸೊಸೆಯನ್ನು ಮನೆಯಿಂದಟ್ಟಿದನು. ಸೊಸೆಯ ತಾಯಿಯು ಆ ದುಃಖದಿಂದ ಸತ್ತು ಹೋದಳು.

ದೇವಿ—ಸೊಸೆಯೊ ?

ಭವಾನಿ—ಆ ಸೊಸೆಯೂ ಹೊಟ್ಟೆಗೆ ಅನ್ನವಿಲ್ಲದೆ ಸತ್ತುಹೋದಳೆಂದು ಕೇಳಿದೆನು.

ದೇವಿ—ನಮಗಾ ಸಮಾಚಾರದಿಂದೆಲ್ಲಾ ಪ್ರಯೋಜನವೇನು ? ನಾವು ಪರರಿಗೆ ಹಿತವನ್ನು ಮಾಡುವ ವ್ರತವನ್ನು ಹಿಡಿದಿದ್ದೇವೆ. ಅಂಗೆ ದುಃಖವು ಬಂದರೂ ಅದನ್ನು ಶಮನಮಾಡಬೇಕು.

ಭವಾನಿ—ಅದೇನು ಕೆಟ್ಟುದಲ್ಲ. ಆದರೆ ಅನೇಕ ಜನರೀಗ ದಾರಿದ್ರ್ಯದಿಂದ ಪೀಡಿತರಾಗಿದ್ದಾರೆ. ಇಜಾರದಾರನ ದೌರಾತ್ಮ್ಯದಿಂದ ಸರ್ವಸ್ವವೂ ಹೋಗಿದೆ. ಈಗ ಸ್ವಲ್ಪವಾದರೂ ಅವರ ಕೈಸೇರಿದರೆ ಊಟಮಾಡಿ ಬದುಕಿಕೊಳ್ಳುವರು. ವೈಗೆ ಸ್ವಲ್ಪ ಬಲವು ಕೂಡಿದರೆ ತಮ್ಮ ತಮ್ಮ ಸ್ವತ್ತನ್ನು ಕಾಪಾಡಿಕೊಳ್ಳುವರು. ಜಾಗ್ರತೆಯಾಗಿ ನೀನೊಂದು ದರಬಾರನ್ನು ಮಾಡಿ ಅವರನ್ನು ರಕ್ಷಿಸಬೇಕು.

ದೇವಿ—ಹಾಗಾದರೆ ಇದೇ ಸ್ಥಳದಲ್ಲಿ ಮುಂದಿನ ಸೋಮವಾರ ರಾತ್ರಿ ದರಬಾರಾಗುವುದೆಂದು ಪ್ರಚಾರಪಡಿಸೋಣಾಗಲಿ.

ಭವಾನಿ—ಬೇಡ. ನೀನಿಲ್ಲಿರಲಾಗದು. ಇಂಗ್ಲೀಷರಿಗೆ ನೀನಿಲ್ಲಿರುವುದು ಗೊತ್ತಾಗಿದೆ. ಈ ತಡವೆ ಐನೂರು ಸಿಪಾಯಿಗಳ ಸಮೇತವಾಗಿ ನಿನ್ನನ್ನು ಪತ್ತೆ ಮಾಡುವುದರಲ್ಲಿದ್ದಾರೆ. ಆದುಕಾರಣ ಇಲ್ಲಿ ದರಬಾರು ಮಾಡುವುದು ಸರಿಯಲ್ಲ. ವೈಕುಂಠಪುರದ ಅರಣ್ಯದಲ್ಲಿ ದರಬಾರಾಗುವುದಾಗಿ ಪ್ರಚಾರಪಡಿಸಿದ್ದೇನೆ. ಸೋಮವಾರವೇ ನಿಷ್ಕರ್ಷೆಯಾಗಿದೆ. ಆ ಅರಣ್ಯದೊಳಗೆ ಹೋಗುವುದಕ್ಕೆ ಸಿಪಾಯಿಗಳಿಗೆ ಧೈರ್ಯವಿಲ್ಲ. ಹೊಕ್ಕರೆ ಹೊಡಿದುಹಾಕಲ್ಪಡುತ್ತಾರೆ. ಇಷ್ಟು ಬಂದಷ್ಟು ದ್ರವ್ಯವನ್ನು ಕೊಂಡೊಯ್ದು ಇಂದು ವೈಕುಂಠಪುರದ ಅರಣ್ಯಕ್ಕೆ ಯಾತ್ರೆ ಮಾಡು.

ದೇವಿ—ಇದೋ ಹೊರಟೆನು. ಆದರೆ ನಾನೀ ಕೆಲಸವನ್ನು ಪುನಃ ಮಾಡು ವೆನೋ ಅಥವಾ ಇಲ್ಲವೋ ಸಂದೇಹ. ಅದರಲ್ಲೆನಗೆ ಮನಸ್ಸಿಲ್ಲ.

ಹೀಗೆಂದು ಹೇಳಿ ದೇವಿಯು ಎದ್ದಳು. ಪುನಃ ಅರಣ್ಯವನ್ನು ಹೊಕ್ಕು ಬಂದು ಹಡಗನ್ನೇರಿದಳು. ಹಡಗನ್ನೇರಿ ರಂಗರಾಜನನ್ನು ಕರೆದು ಅವನ ಕಿವಿ ಯಲ್ಲೊಂದು ಏಕಾಂತವನ್ನು ಹೇಳಿ, ಕಡೆಗೆ, 'ಮುಂದಿನ ಸೋಮವಾರ ವೈಕುಂಠಪುರದ ಅಡವಿಯಲ್ಲಿ ದರಬಾರಾಗುವುದು ; ಕೂಡ್ಲೆ ಹಡಗಳನ್ನು ಬಿಚ್ಚಿಸು; ಅಲ್ಲಿಗೆ ಹೋಗಬೇಕು; ಬರುವ ಜನರಿಗೆಲ್ಲಾ ಸಮಾಚಾರವನ್ನು ಕೊಡು; ದೇವೀಗಡದ ಮಾರ್ಗವಾಗಿ ಹೋಗು ; ಹೆಚ್ಚುದ್ರವ್ಯವನ್ನು ತೆಗೆದುಕೊಂಡು ಹೋಗು ; ನನ್ನಲ್ಲಿ ಹೆಚ್ಚು ದ್ರವ್ಯವಿಲ್ಲ!' ವೆಂದು ಹೇಳಿದಳು.

ಬಳಿಕ ಒಂದು ಮುಹೂರ್ತದಲ್ಲಿ ಪಟಗಳೆಲ್ಲಾ ಏರಿಸಲ್ಪಟ್ಟುವು. ಚಿಕ್ಕ ಚಿಕ್ಕ ದೋಣಿಗಳು ಹಡಗಿಗೆ ತಗಲಿಸಲ್ಪಟ್ಟುವು. ಅದರಲ್ಲಿ ಅರವತ್ತು ಮಂದಿ ಬಲಿಷ್ಠರಾದ ಆಳುಗಳಿದ್ದರು; 'ರಾಣಿಗೆ ಜಯವಾಗಲಿ!' ಎಂದು ಕೂಗುತ್ತ ಹಡಗು ಹೊರಟಿತು. ಇತ್ತಲಾಗಿ ನದಿಯ ತೀರದಲ್ಲಿ ಬಹುಸಂಖ್ಯೆಯುಳ್ಳ ಪಥಿಕರು ಅರಣ್ಯಮಾರ್ಗವಾಗಿ ಹಡಗು ಹೋದಹಾಗೆ ಅದರ ಹಿಂದೆ ಓಡುತ್ತಾರೆ. ಅವರು ಕೈಯಲ್ಲಿ ಒಂದೊಂದು ದೊಣ್ಣೆಯನ್ನು ಹಿಡಿದಿದ್ದಾರೆ. ಹಡಗಿನಲ್ಲಿ ಅನೇಕ ಕತ್ತಿ ಕಠಾರಿ ಬಂದೂಕು ಮುಂತಾದ ಆಯುಧಗಳಿವೆ. ಅವರೆಲ್ಲರೂ ದೇವಿಯ 'ಬರಕಂದಾಜ' ಸೈನ್ಯದ ಜನರು.

ಎಲ್ಲವನ್ನೂ ನೋಡಿ ಬಳಿಕ ದೇವಿಯು ಹಡಗಿನಲ್ಲಿ ತನ್ನ ಪಾಕಶಾಲೆಯೊಳಗೆ ಸ್ವಂತವಾಗಿ ಅಡಿಗೆಯನ್ನು ಮಾಡಿಕೊಳ್ಳುವುದಕ್ಕೆ ಹೋದಳು. ಹಾ! ದೇವಿ! ನಿನ್ನ ಸನ್ಯಾಸ! ಅದೆಂತಹದುದು!

---

## ಹನ್ನೊಂದನೆಯ ಪರಿಚ್ಛೇದ.

ಸೋಮವಾರ ಪ್ರಾತಃಸೂರ್ಯನು ಪ್ರಕಾಶಿಸುತ್ತಾನೆ. ನಿಬಿಡ ಅರಣ್ಯದೊಳಗೆ ದೇವೀರಾಣಿಯ ದರಬಾರು. ದರಬಾರಿನಲ್ಲಿ ಮೊಕದ್ದಮೆಗಳಾವವೂ ವಿಚಾರಣೆಯಾಗತಕ್ಕುದಿಲ್ಲ. ರಾಜಕಾರ್ಯಗಳಲ್ಲಿ ಒಂದಾದ ಕಾರ್ಯವು ಮಾತ್ರ ನಡೆಯತಕ್ಕದು—ಕೈಹಿಡಿಯದೆ ದಾನಮಾಡುವುದು!

ನಿಬಿಡ ಅರಣ್ಯ. ಅದರೊಳಗೆ ಮುನ್ನೂರು ಎಕರೆಯ ವಿಸ್ತೀರ್ಣದ ಮೈದಾನ. ಅದರಲ್ಲಿದ್ದ ದೊಡ್ಡ ದೊಡ್ಡ ಮರಗಳನ್ನು ಕಡಿದಿರಲಿಲ್ಲ. ಅವುಗಳ ನೆರಳಿನಲ್ಲಿ ಜನರು ಬಂದು ನಿಲ್ಲುವುದಕ್ಕೆ ಸಲವಾಗಿ ಕಡಿಯದೆ ಬಿಡಲ್ಪಟ್ಟಿದ್ದುವು. ಪರಿಷ್ಕಾರವಾದಾ ಪ್ರದೇಶದಲ್ಲಿ ಹತ್ತುಸಾವಿರದ ಮೇಲೆ ಪ್ರಜೆಯು ಸೇರಿದೆ. ದೊಡ್ಡದಾದೊಂದು ಡೇರೆಯು ಹಾಕಿ ಅದರ ಹಗ್ಗವನ್ನು ಮರಗಳಿಗೆ ಕಟ್ಟಿದೆ. ಅದರೊಳಗೆ ದೇವಿಯ ದರಬಾರು. ಅದರಲ್ಲಿ ಬೆಳ್ಳಿ ಬಂಗಾರದ ಸಿಂಹಾಸನ. ಅದರ ಮೇಲೆ ಕಿನ್‌ಕಾಬಿನ ಬಟ್ಟೆ. ಅದಕ್ಕೆ ಮುತ್ತಿನ ಝಾಲರೆ—ಒಳಗೆ ದಿವ್ಯ ದಿವ್ಯ ರತ್ನಗಂಬಳಿಗಳು ಹಾಸಿವೆ. ಡೇರೆಗೆ ಬಹುಮೂಲ್ಯದ ಅಲಂಕಾರ. ಇಂದು ದೇವಿಯು ರತ್ನಾಭರಣಗಳಿಂದಲಂಕೃತೆಯಾಗಿರುವಳು. ಬಹುಮೂಲ್ಯದ ಸೀತಾಂಬರವನ್ನುಟ್ಟಿದ್ದಾಳೆ. ಸೀರೆಯಲ್ಲಿದ್ದ ಹೂವುಗಳ ಮಧ್ಯದಲ್ಲಿ ನಕ್ಷತ್ರದಂತೆ ಒಂದೊಂದು ವಜ್ರವು ಮಿನುಗುತ್ತದೆ. ಅಂಗಾಂಗವೂ ರತ್ನಾಲಂಕಾರದಿಂದಲಂಕೃತವಾಗಿದೆ. ಮಧ್ಯೆ ಮಧ್ಯೆ ದೇಹದ ಕಾಂತಿಯು ಹೊಳೆಯುವುದು. ಗೌರವರ್ಣ. ಕಂಠದಲ್ಲಿ ಮುಕ್ತಾದಿ ಹಾರಗಳಿಂದ ಬಟ್ಟೆಯು ಮುಚ್ಚಿಹೋಗಿದೆ. ತಲೆಯಲ್ಲಿ ರತ್ನಮಯವಾದ ಕಿರೀಟ. ದೇವಿಯು ಶರತ್ಕಾಲದ ನಿಜವಾದದೇವಿಯ ಪ್ರತಿಮೆಯಂತೆ ಅಲಂಕೃತೆಯಾಗಿದ್ದಾಳೆ! ಅವೆಲ್ಲಾ ದೇವಿಯ ರಾಣಿಗಿರಿಯ ಆಟ್ಟಹಾಸ. ಉಭಯಪಾರ್ಶ್ವಗಳಲ್ಲಿಯೂ ನಾಲ್ಕುಮಂದಿ ಯುವತಿಯರು ಸುವರ್ಣದ ಹಿಡಿಯುಳ್ಳಚಾಮರಗಳನ್ನು ಹಿಡಿದು ಬೀಸುತ್ತಾರೆ. ಮುಂದುಗಡೆ ಅನೇಕ ಚೋಪದಾರರೂ ಆಸಬದಾರರೂ ತಮ್ಮ ತಮ್ಮ ಯೋಗ್ಯವಾದ ಉಡುಪು ತೊಡಗೆಗಳಿಂದ ಸಜ್ಜಿತರಾಗಿ ನಿಂತಿದ್ದಾರೆ. ಎಲ್ಲದರಗಿಂತ ಹೆಚ್ಚು ಪ್ರಕಾಶಗೊಂಡಿದ್ದ ರಾಣಿಯ ಬರಕಂದಾಜಿನ ಸೈನ್ಯವು ಕಣ್ಗೊಳಿಸುತಿದೆ. ಐನೂರು ಜನರ ಮೇಲೆ ಬರಕಂದಾಜದ ಸೈನ್ಯವು ಎರಡು ಕಡೆಗಳಲ್ಲಿಯೂ ಸಾಲಿಟ್ಟು ನಿಂತಿದೆ. ನಾಲ್ಕೂಕಡೆಗಳಲ್ಲಿ ಬಾವುಟಗಳು ಹಾರುತಿವೆ.

ದೇವಿಯು ಸಿಂಹಾಸನದ ಮೇಲೆ ಕುಳಿತಳು! ಆಗಾ ಹತ್ತುಸಾವಿರ ಕಂಠದಿಂದಲೂ 'ರಾಣಿಗೆ ಜಯವಾಗಲಿ!' ಎಂದು ಜಯಧ್ವನಿಯು ಹೊರಟಿತು. ಅನಂತರ ಹತ್ತುಮಂದಿ ಸುಸಜ್ಜಿತರಾದ ಯುವಕರು ಬಂದು ದೇವಿಯನ್ನು ಮಧುರ ಕಂಠದಿಂದ ಸ್ತೋತ್ರಮಾಡಿದರು. ಅನಂತರ ರಂಗರಾಜನಾ ಹತ್ತು ಸಾವಿರ ಜನರಲ್ಲಿ ಒಬ್ಬೊಬ್ಬನನ್ನಾಗಿ ಕರೆತಂದು ದೇವಿಯ ಇದಿರಿಗೆ ನಿಲ್ಲಿಸುವನು. ಬಂದವನು ಭಕ್ತಿಭಾವದಿಂದ ದೇವಿಗೆ ನಮಸ್ಕಾರವನ್ನು ಮಾಡುವನು. ವಯೋಜ್ಯೇಷ್ಠರಾದ ಬ್ರಾಹ್ಮಣರೂ ಪ್ರಣಾಮವನ್ನು ಮಾಡಿದರು. ಏಕೆಂದರೆ, ದೇವಿಯು ಭಗವತಿಯ ಅಂಶಳಾಗಿ ಜನರ ಉದ್ಧಾರಕ್ಕೆ ಸಲವಾಗಿ ಬಂದಿದ್ದಳೆಂದು ನಂಬಿದ್ದರು. ಅದುಕಾರಣ ಅವಳಿರುವ ಸ್ಥಳವನ್ನು ಕುರಿತು, ಇಂಗ್ಲಿಷರಿಗೆ ಆರೂ ವರ್ತಮಾನವನ್ನು ಕೊಡರು. ಅವಳನ್ನು ಹಿಡಿಯುವುದಕ್ಕಾರೂ ಸಹಾಯವನ್ನು ಮಾಡರು. ದೇವಿಯು ಮಧುರವಾಹ ಮಾತುಗಳಿಂದ ಪ್ರತಿಯೊಬ್ಬನ ಸ್ಥಿತಿಯನ್ನೂ ತಿಳಿದು ಅವನವನ ಸ್ಥಿತಿಗೆ ತಕ್ಕಂತೆ ದಾನವನ್ನು ಮಾಡುವಳು. ಹತ್ತಿರ ಕೊಡ ಕೊಡಗಳಲ್ಲಿ ಮೊಹರೆಗಳು ತುಂಬಿ ಸಿದ್ಧವಾಗಿದ್ದುವು.

ಈ ಪ್ರಕಾರ ದೇವಿಯು ಪ್ರಾತಃಕಾಲದಿಂದ ಸಂಧ್ಯಾಕಾಲ ಪರ್ಯಂತ ದರಿದ್ರರಿಗೆ ದಾನವನ್ನು ಮಾಡಿದಳು. ಸಂಜೆಯಾಗಿ ಒಂದು ಘಂಟೆಗೆ ಮೇಲಾಯಿತು. ಕೊಡವುದಾಗ ಮುಗಿಯಿತು. ಅದುವರೆಗೂ ದೇವಿಯು ಊಟವನ್ನು ಮಾಡಿರಲಿಲ್ಲ. ದೇವಿಯು ಮಾಡುವ ಡಕಾಯಿತಿಗಳು ಇವು! ಬೇರೆಯಲ್ಲ.

ಸ್ವಲ್ಪ ದಿವಸದಲ್ಲಿ ವೈಕುಂಠಪುರದ ಅರಣ್ಯದೊಳಗೆ ದೇವೀಚೌಧುರಾಣಿಯು ಡಕಾಯಿತಿ ದಳದವರಿಂದ ಸೇರಿದ್ದಳೆಂತಲೂ, ಅವರು ಅಸಂಖ್ಯಾತರಾಗಿದ್ದರೆಂತಲೂ ಅನೇಕ ಕಳ್ಳರು ಲೂಟಿಮಾಡಿದ ದ್ರವ್ಯವನ್ನು ಹೊರೆ ಹೊರೆಯಾಗಿ ಮನೆಗೊಯ್ದರೆಂತಲೂ ವರ್ತಮಾನವು ಹುಟ್ಟಿ, ಸಮಾಚಾರವು ರಂಗಪುರದಲ್ಲಿ ಕಲೆಕ್ಟರ ಸಾಹೆಬನಿಗೆ ತಲಪಿತು. ದೇವಿಯಿಂದ ದಾನವನ್ನು ಪಡೆದವರು ಬಾಯಿ ಬಿಡಲಿಲ್ಲ. ಕೇಳಿದರೆ ತಮಗೆ ಹಣವನ್ನು ಕೊಟ್ಟವರಾರು? ಎನ್ನುವರು. ಒಪ್ಪಿಕೊಂಡರೆ ಭಯ. ಇಜಾರದಾರನಿಗೆ ತಿಳಿದರೆ ಒಂದು ಕಾಸನ್ನೂ ಬಿಡದೆ ದೋಚಿಕೊಂಡು ಹೋಗುವನು. ಕಡೆಗೆ ದೇವೀಚೌಧುರಾಣಿಯು ಭಾರಿ ಲೂಟಿಯನ್ನು ಮಾಡಿದ್ದಳೆಂಬ ಸುದ್ದಿಯೇ ಸ್ಥಿರವಾಯಿತು!

---

## ಹನ್ನೆರಡನೆಯ ಪರಿಚ್ಛೇದ

ವ್ರಜೇಶ್ವರನು ಯಥಾಕಾಲದಲ್ಲಿ ಊರನ್ನು ಸೇರಿ, ತಂದೆಗೆರಗಿದನು.

ಹರವಲ್ಲಭನು ಜೇರೆ ಮಾತುಗಳಾದ ಬಳಿಕ, 'ಮುಖ್ಯವಾದುದನ್ನು ಹೇಳು, ಹಣದ ಸಮಾಚಾರವೇನಾಯಿತು?' ಎಂದನು. ವ್ರಜೇಶ್ವರನು ತನ್ನ

ಮಾವನು ಹಣವನ್ನು ಕೊಡಲಿಲ್ಲವೆಂದನು. ಹರವಲ್ಲಭನಿಗೆ ತಲೆಯ ಮೇಲೆ ಕಲ್ಲುಬಿದ್ದಂತಾಯಿತು—ಅವನು ಗಟ್ಟಿಯಾಗಿ ಕೂಗುತ್ತ, 'ಹಾಗಾದರೆ ಹಣವು ಸಿಗಲಿಲ್ಲ?' ಎಂದನು.

ವ್ರಜೇಶ್ವರ—ನಮ್ಮ ಮಾವನು ಹಣವನ್ನು ಕೊಡದಿದ್ದರೂ, ಬೇರೆ ಸ್ಥಳದಲ್ಲಿ ನನಗೆ ಹಣವು ದೊರಕಿತು.

ಹರವಲ್ಲಭ—ಒದಗಿತೆ? ಮೊದಲೇಕೆ ಹೇಳಲಿಲ್ಲ? ದುರ್ಗಾದೇವಿಯು ಬದುಕಿಸಿದಳು!

ವ್ರಜೇಶ್ವರ—ನನಗೆ ಹಣವು ಬಂದ ರೀತಿಯನ್ನು ನೋಡಿದರೆ ಅದನ್ನು ಗ್ರಹಣ ಮಾಡಬಹುದೋ ಇಲ್ಲವೋ ಹೇಳುವುದಕ್ಕಾಗುವುದಿಲ್ಲ.

ಹರವಲ್ಲಭ—ಕೊಟ್ಟವರಾರು?

ವ್ರಜೇಶ್ವರನು ಮುಖ ತಗ್ಗಿದವನಾಗಿ, ಮಾತನ್ನು ನುಂಗುತ್ತಾ, 'ಆ ಹೆಸರು ಜ್ಞಾಪಕಕ್ಕೆ ಬರುವುದಿಲ್ಲ. ದರೋಡೆ ಮಾಡುವ ಹೆಂಗಸೊಬ್ಬಳಿದ್ದಾಳಷ್ಟೆ?' ಎಂದನು.

ಹರವಲ್ಲಭ—ಆರು ದೇವೀಚೌಧುರಾಣಿಯೆ?

ವ್ರಜೇಶ್ವರ—ಅವಳೇ—

ಹರವಲ್ಲಭ—ಅವಳಲ್ಲಿ ಹಣವು ಹೇಗೆ ಬಂದಿತು?

ವ್ರಜೇಶ್ವರನು ಅವನ ಪ್ರಾಚೀನ ನೀತಿಶಾಸ್ತ್ರದಲ್ಲಿ ಅಂತಹ ಸಂದರ್ಭದಲ್ಲಿ ತಂದೆಗೆ ಸುಳ್ಳನ್ನು ಹೇಳಿದರೆ ದೋಷವಿಲ್ಲವೆಂದು ತಿಳಿದಿದ್ದನಾಗಿ, 'ಹಣವು ಒಂದನುಕೂಲವಾದ ಸಂದರ್ಭದಲ್ಲಿ ಕೈಗೆ ಬಂದಿದೆ' ಎಂದನು.

ಹರವಲ್ಲಭ—ಕೆಟ್ಟ ಜನರ ಹಣವೆ! ಏನಾದರೂ ಕಾಗದ ಪತ್ರವನ್ನು ಬರೆದು ಕೊಟ್ಟಿರುವಿಯಾ?

ವ್ರಜ—ಅನುಕೂಲವಾದೊಂದು ಸಂದರ್ಭದಲ್ಲಿ ಕೈಗೆ ಬಂದಿರುವುದಕ್ಕೆ ಕಾಗದಪತ್ರವುಂಟೆ!

ತಂದೆಯು ಆ ವಿಷಯದಲ್ಲಿ ಹೆಚ್ಚು ಚರ್ಚೆಯನ್ನು ಮಾಡದಿರುವುದಕ್ಕೆ ಸಲವಾಗಿ, 'ಪಾಪಕಾರ್ಯದಿಂದ ಸಂಪಾದಿಸಿದ ದ್ರವ್ಯವನ್ನು ತೆಗೆದುಕೊಂಡರೆ ನಾವೂ ಪಾಪಕ್ಕೆ ಭಾಗಿಗಳಾಗುವೆವು. ಆದುಕಾರಣ ಆ ಹಣವನ್ನು ತೆಗೆದು ಕೊಳ್ಳುವುದಕ್ಕೆನಗೆ ಇಷ್ಟವಿಲ್ಲ'ವೆಂದನು.

ಹರವಲ್ಲಭನು ಕೋಪಗೊಂಡು, 'ಹಣವನ್ನು ತೆಗೆದುಕೊಳ್ಳದಿದ್ದರೆ ಜೈಲಿಗೆ ಹೋಗಬೇಕು, ಹಣವನ್ನು ಸಾಲವಾಗಿ ತೆಗೆದುಕೊಳ್ಳುವೆನು. ಹಾಗೆ ಮಾಡಿದರೆ ಪಾಪದಿಂದ ಬಂದ ಹಣ, ಪುಣ್ಯದಿಂದ ಬಂದುದು ಎಂಬ ಶಂಕೆಯು ಹುಟ್ಟದು. ಪುಣ್ಯಾರ್ಜನೆಯಾದ ಹಣವಾರಲ್ಲಿದ್ದೀತು? ಅಂತಹ ಆಕ್ಷೇಪಣೆಯಿಂದೇನೂ ಪ್ರಯೋಜನವಿಲ್ಲ. ಮುಖ್ಯವೇನೆಂದರೆ, ಅದು ಕಳ್ಳರ ಹಣ, ಅದಕ್ಕೆ ಕಾಗದ

ಪತ್ರವಿಲ್ಲ. ಕೊಡುವುದು ಸಾವಕಾಶವಾದರೆ ಮನೆಯನ್ನು ಲೂಟಿ ಮಾಡುವರು ಎಂದನು. ವ್ರಜೇಶ್ವರನು ಸುಮ್ಮನಿದ್ದನು.

ಹರವಲ್ಲಭ—ಎಷ್ಟು ದಿನದ ಗಡವು ? ಗಡವಿಟ್ಟದ್ದಾಳೆಯೆ ?

ವ್ರಜೇಶ್ವರ—ಮುಂದಿನ ವೈಶಾಖಮಾಸದ ಶುಕ್ಲಪಕ್ಷದ ಸಪ್ತಮೀ ರಾತ್ರಿ ಚಂದ್ರಾಸ್ತದವರೆಗೆ.

ಹರವಲ್ಲಭ—ಅವಳೇನೋ ಡಕಾಯಿತಿ; ಹಣವನ್ನು ಕೊಡುವುದಕ್ಕೆ ಅವಳ ನ್ನೆಲ್ಲಿ ಕಂಡುಹಿಡಿಯಬೇಕು ?

ವ್ರಜೇಶ್ವರ—ಅಂದು ಸಾಯಂಕಾಲವಾದ ಬಳಿಕ ಸಂಧಾನಪುರದ ಕಾಲ ಸಾಜಿ ಘಾಟಿನಲ್ಲಿ ಹಡಗಿನಲ್ಲಿರುವಳು. ಅಲ್ಲಿಗೆ ಹಣವನ್ನು ಕೊಂಡೊಯ್ದು ಕೊಡಬೇಕು.

ಹೀಗೆಂದು ಹೇಳಿ ವ್ರಜೇಶ್ವರನು ಹೊರಟುಹೋದನು. ಹರವಲ್ಲಭನು ಮನಸ್ಸಿನಲ್ಲಿ ಅವನ ಬುದ್ಧಿಯನ್ನೆಲ್ಲಾ ವೆಚ್ಚಮಾಡಿ, ಯೋಚಿಸಿ, ಕಡೆಗೆ ಸ್ಥಿರಮಾಡಿ ಕೊಂಡನೇನೆಂದರೆ:—'ಅಹಾ! ಅವಳಿಗೆ ಹಣವನ್ನು ಕೊಂಡೊಯ್ದು ಕೊಡಬೇ ಕಲ್ಲವೆ ? ರಂಡೆಯನ್ನು ಸಿಪಾಯಿಗಳಿಂದ ಹಿಡಿಸಿಬಿಟ್ಟರೆ ರಗಳೆಯೆಲ್ಲಾ ಮುಗಿದು ಹೋಗುವುದು, ವೈಶಾಖ ಶುದ್ಧ ಸಪ್ತಮೀ ದಿನ ರಾತ್ರಿ ಕೆಪ್ಟನ್ ಸಾಹೇಬನು ನಾಲ್ಕು ಪಲ್ಟನ್ ಸಿಪಾಯಿಗಳ ಸಮೇತವಾಗಿ ಅವಳ ಹಡಗಿನಲ್ಲಿ ಹತ್ತದಿದ್ದರೆ ನನ್ನ ಹೆಸರು ಹರವಲ್ಲಭನಲ್ಲ. ಅವಳು ಪುನಃ ನನ್ನಿಂದ ಹಣವನ್ನು ತೆಗೆದುಕೊಳ್ಳು ವುದು ನೋಡುವೆನು' ಎಂದು ಸಂಕಲ್ಪ ಮಾಡಿಕೊಂಡನು.

ಹರವಲ್ಲಭನು ಮನಸ್ಸಿನಲ್ಲೇ ಪುಣ್ಯಮಯವಾದ ಅಭಿಸಂಧಿಯನ್ನು ಮಾಡಿ ಕೊಂಡು, ವ್ರಜೇಶ್ವರನಲ್ಲಿ ನಂಬುಗೆಯಿಲ್ಲದೆ ಅವನಿಗದನ್ನು ಹೇಳಲಿಲ್ಲ. ತನ್ನ ಮನಸ್ಸಿನಲ್ಲಿಟ್ಟುಕೊಂಡನು.

ಇತ್ತಲಾಗಿ ಸಾಗರೆಯು ಮನೆಗೆ ಬಂದು ಬ್ರಹ್ಮಠಾಕುರಾಣಿಯ ಬಳಿ, ವ್ರಜೇಶ್ವರನೊಬ್ಬ ರಾಜರಾಣಿಯ ಹಡಗಿಗೆ ಹೋಗಿ ಅವಳನ್ನು ವಿವಾಹ ಮಾಡಿ ಕೊಂಡು ಬಂದನೆಂತಲೂ, ತಾನು ಎಷ್ಟೊಂದು ವಿಧವಾಗಿ ಬೇಡವೆಂದರೂ ಕೇಳ ಲಿಲ್ಲವೆಂತಲೂ, ಆ ಹೆಂಗಸು ಕೈವರ್ತಜಾತಿಯವಳೆಂತಲೂ, ಅವಳಿಗೆ ಮೊದಲು ಮತ್ತೆರಡು ವಿವಾಹವಾಗಿದ್ದಿತೆಂತಲೂ, ಅದುಕಾರಣ ವ್ರಜೇಶ್ವರನು ಊಟಮಾಡಿದ ಪಾತ್ರಾವಶಿಷ್ಟದಲ್ಲಿ ಕುಳಿತು ತಾನು ಭೋಜನವನ್ನು ಮಾಡುವುದಿಲ್ಲವೆಂತಲೂ ಒಂದು ಸುಳ್ಳು ಸುದ್ದಿಯನ್ನು ಹುಟ್ಟಿಸಿದಳು. ಬ್ರಹ್ಮಠಾಕುರಾಣಿಯು ಬಂದು ವ್ರಜೇಶ್ವರನನ್ನು ಕೇಳಿದುದಕ್ಕೆ, ವ್ರಜೇಶ್ವರನು ತಪ್ಪಿತವನ್ನೊಪ್ಪಿಕೊಂಡು, ರಾಣಿಯು ಜಾತಿಯ ವಿಚಾರದಲ್ಲಿ ಉತ್ಕೃಷ್ಟೆಯೆಂತಲೂ, ತನ್ನ ತಂದೆಗೆ ಸೋದರ ಸಂಬಂಧದವಳೆಂತಲೂ, ತನ್ನ ತಂದೆಯಂತೆ ತನಗೂ ಮೂರು ಮದುವೆಯೆಂತಲೂ ಹೇಳಿದನು.

ಬ್ರಹ್ಮಠಾಕುರಾಣಿಯು ಅದನ್ನು ಸುಳ್ಳೆಂದು ತಿಳಿದುಕೊಂಡಳು, ಆದರೆ ಸಾಗರೆಯು ನಯನತಾರೆಗದು ತಿಳಿಯಲೆಂದು ಹೇಳಿದಳು. ಆ ವಿಷಯದಲ್ಲೊಂದು ತಿಲಾರ್ಧವೂ ಸಾವಕಾಶವಾಗಲಿಲ್ಲ. ನಯನತಾರೆಯು ಮೊದಲೇ ಸಾಗರೆಯನ್ನು ಕಂಡರೆ ಸಿಡಿದು ಬೀಳುವಳು. ಗಂಡನು ಮತ್ತೊಬ್ಬ ಮುದಿ ಹೆಂಗಸನ್ನು ಮದುವೆ ಮಾಡಿಕೊಂಡನೆಂದು ಕೇಳಿ ಬೆಂಕಿ ಬೆಂಕಿಯಾಗಿ ಉರಿಯಲಾರಂಭಿಸಿದಳು. ವ್ರಜೇಶ್ವರನಿಗೆ ಕೆಲವುದಿನ ಅವಳೊಂದಿಗೆ ಹೋರಾಡುವುದು ಬಹಳ ಕಷ್ಟವಾಯಿತು. ಆದರೆ ಸಾಗರೆಗೆ ಆಗ ಪೂರಾ ಇಜಾರೆಯಾಗಿದ್ದಿತು!

ಸಾಗರೆಯ ಇಷ್ಟವು ಕೈಗೂಡಿತು. ಆದರೆ ನಯನತಾರೆಯು ಬಹಳ ಗದ್ದಲವನ್ನು ಹಚ್ಚಿದಳು; ಹೋಗಿ ಯಜಮಾನಿಗೆ ಫಿರ್ಯಾದನ್ನು ಮಾಡಿದಳು. ಯಜಮಾನಿಯು, 'ನೀನು ಹುಡುಗಿ, ಹುಚ್ಚಿ, ಬ್ರಾಹ್ಮಣರ ಹುಡುಗನು ಕೈವರ್ತ ಜಾತಿಯವಳನ್ನು ಮದುವೆಮಾಡಿಕೊಳ್ಳುವನೆ? ನಿನಗೆ ಸುಳ್ಳನ್ನು ಹೇಳಿದಾರೆ; ನೀನದನ್ನು ನಂಬುವುದೆ?' ಎಂದಳು.

ನಯನೆಯು ತಿಳಿದುಕೊಳ್ಳದೆ, 'ಒಂದುವೇಳೆ ನಿಜವಾಗಿಯೂ ಮದುವೆಯನ್ನು ಮಾಡಿಕೊಂಡಿದ್ದರೆ?' ಎಂದಳು. ಯಜಮಾನಿಯು 'ಮದುವೆಯನ್ನು ಮಾಡಿಕೊಂಡಿದ್ದರೆ ಸೊಸೆಯು ಬಂದು ಮನೆಯಲ್ಲಿ ಸಂಸಾರವನ್ನು ಮಾಡುವಳು; ಮಗನ ಹೆಂಡತಿಯನ್ನು ಮನೆಯಿಂದ ಹೊರಡಿಸುವುದಕ್ಕಾದೀತೆ?' ಎಂದಳು.

ಆ ಸಮಯದಲ್ಲಿ ವ್ರಜೇಶ್ವರನಲ್ಲಿಗೆ ಬಂದನು. ನಯನತಾರೆಯು ಓಡಿ ಹೋದಳು.

ವ್ರಜೇಶ್ವರ—ಅಮ್ಮ! ಏನನ್ನು ಹೇಳುತಿದ್ದಿಯೆ?

ಯಜಮಾನಿ—ನೀನು ಮತ್ತೊಂದು ಮದುವೆಯನ್ನು ಮಾಡಿಕೊಂಡಿದ್ದರೆ ಆ ಸೊಸೆಯನ್ನೂ ಮನೆಗೆ ಕರೆತರಬೇಕೆಂದು ಹೇಳುತ್ತಿದ್ದೆನು.

ವ್ರಜೇಶ್ವರನು ಅನ್ಯಮನನಾಗಿ ಏನೊಂದುತ್ತರವನ್ನೂ ಕೊಡದೆ ಹೊರಟು ಹೋದನು.

ಸಾಯಂಕಾಲ ಯಜಮಾನಿಯು ಯಜಮಾನರಿಗೆ ಬೀಸಣಿಕೆಯಿಂದ ಗಾಳಿಯನ್ನು ಬೀಸುತ್ತಿರುವಾಗ ಆ ಸುದ್ದಿಯನ್ನು ಅರಿಕೆಮಾಡಿದಳು. ಯಜಮಾನನು 'ನಿನ್ನ ಅಭಿಪ್ರಾಯವೇನು?' ಎಂದನು.

ಯಜಮಾನಿ—ಸಾಗರೆಯು ಮನೆಯಲ್ಲಿದ್ದು ಸಂಸಾರವನ್ನು ಮಾಡುವವಳಲ್ಲ. ನಯನೆಯು ಹುಡುಗನಿಗೆ ಯೋಗ್ಯೆಯಲ್ಲ. ವ್ರಜನು ಚಂದವುಳ್ಳ ಚಲುವಿಯನ್ನು ಮದುವೆಮಾಡಿಕೊಂಡಿದ್ದರೆ ಸಂಸಾರ ಧರ್ಮವು ನಡೆಯುವುದು! ನನಗೂ ಸುಖ.

ಯಜಮಾನ—ಹುಡುಗನಿಗೆ ಹಾಗೆ ಅಭಿಪ್ರಾಯವಿದ್ದರೆ ತಿಳಿದು ಹೇಳು. ನಾನು ಘಟಕರನ್ನು ಕರೆಯಿಸಿ ಒಳ್ಳೆಯದಾದ ಸಂಬಂಧವನ್ನು ಮಾಡುವೆನು.

ಯಜಮಾನಿ—ಆಗಲಿ, ವಿಚಾರಿಸಿ ನೋಡುವೆನು.

ಮನಸ್ಸನ್ನು ತಿಳಿದುಕೊಳ್ಳುವ ಭಾರವು ಬ್ರಹ್ಮಠಾಕುರಾಣಿಯ ಮೇಲೆ ಬಿದ್ದಿತು. ಅವಳು ವ್ರಜನಿಗೆ ವಿರಹದಿಂದ ಸಂಪತ್ತರಾದ ಹಾಗೂ ವಿವಾಹಕ್ಕೋಸ್ಕರ ಪ್ರಯಾಸಪಟ್ಟ ಅನೇಕ ರಾಜಪುತ್ರರ ಉಪಕಥೆಗಳನ್ನು ಹೇಳಿದಳು. ಅದರಿಂದ ವ್ರಜನ ಮನಸ್ಸು ಹೊರಪಡಲಿಲ್ಲ. ಆಗ ಬ್ರಹ್ಮಠಾಕುರಾಣಿಯು ಸ್ಪಷ್ಟವಾಗಿ ಕೇಳಿದಳು. ಆದರಿಂದಲೂ ಹೆಚ್ಚೇನೂ ಹೊರಡಲಿಲ್ಲ. ವ್ರಜೇಶ್ವರನು, 'ತಂದೆತಾಯಿಗಳು ಹೇಳುವಂತೆ ನಡಿಯುವೆನು' ಎಂದನು.

ಮುಂದೆ ಹೆಚ್ಚು ಮಾತುಕಥೆಗಳು ನಡೆಯಲಿಲ್ಲ.

---

# ಮೂರನೆಯ ಭಾಗ

## ಮೊದಲನೆಯ ಪರಿಚ್ಛೇದ.

ವೈಶಾಖ ಶುದ್ಧ ಸಪ್ತಮಿಯು ಬಂದಿತು. ದೇವೀರಾಣಿಯ ಸಾಲವನ್ನು ಹರಿಸುವುದಕ್ಕೆ ಪ್ರಯತ್ನವೇನೂ ನಡೆಯಲಿಲ್ಲ. ಹರವಲ್ಲಭನು ಋಣಮುಕ್ತನಾಗಬೇಕೆಂದಿಷ್ಟವುಳ್ಳವನಾಗಿದ್ದರೆ ಹಣವನ್ನು ಸೇರಿಸಿ ದೇವಿಯ ಸಾಲವನ್ನು ತೀರಿಸಬಹುದಾಗಿದ್ದಿತು. ಅತ್ತವನ ಮನಸ್ಸು ಹೋಗಲಿಲ್ಲ. ಆ ವಿಚಾರದಲ್ಲೇನೇನೂ ಪ್ರಯತ್ನವಿಲ್ಲದಿದ್ದುದನ್ನು ಕಂಡು ವ್ರಜೇಶ್ವರನು ಮೂರು ನಾಲ್ಕು ತಡವೆ ಪ್ರಸ್ತಾಪಿಸಿದನು. ಹರವಲ್ಲಭನದನ್ನು ಕಿವಿಯಮೇಲೆ ಹಾಕಿಕೊಳ್ಳಲಿಲ್ಲ. ವೈಶಾಖ ಶುದ್ಧಸಪ್ತಮಿಗೆ ಮೂರು ನಾಲ್ಕು ದಿನಗಳುಳಿದಿದ್ದುವು. ವ್ರಜೇಶ್ವರನಾಗ ತಂದೆಗೆ ಹಣದ ವಿಚಾರವಾಗಿ ಹೇಳಿದನು. ಹರವಲ್ಲಭನು, ಹಣಕ್ಕೆ ಸಲವಾಗಿ ಹೋಗುವುದಾಗಿಯೂ ಷಷ್ಠಿಯ ದಿನ ಹಿಂದಿರುಗಿ ಬರುವುದಾಗಿಯೂ ಹೇಳಿ ಪಾಲ್ಕಿಯನ್ನು ಹತ್ತಿ ಪರಿಚಾರಕ ಮುಂತಾದವರ ಸಮೇತನಾಗಿ ಮನೆಯಿಂದ ಹೊರಟನು.

ಹರವಲ್ಲಭನು ಹಣಕ್ಕೆ ಸಲವಾಗಿಯೇ ಹೊರಟನು. ಆದರದು ಬೇರೆ ವಿಧವಾದ ಶೇಖರಕ್ಕೆ ಹೊರಟುದುದು. ಅವನು ನೆಟ್ಟಗೆ ರಂಗಪುರಕ್ಕೆ ಹೋಗಿ ಕಲೆಕ್ಟರನ್ನು ನೋಡಿದನು. ಆಗ ಕಲೆಕ್ಟರನೇ ದೇಶದ ಶಾಂತಿರಕ್ಷಕನಾಗಿದ್ದನು. ಹರವಲ್ಲಭನು ಕಲೆಕ್ಟರನನ್ನು ಕುರಿತು, 'ಸಿಪಾಯಿಗಳ ಸಹಾಯವನ್ನು ಕೊಟ್ಟರೆ, ದೇವೀಚೌಧುರಾಣಿಯನ್ನು ಹಿಡಿದುಕೊಡುವೆನು: ಹಿಡಿದು ಕೊಟ್ಟರೇನು ಇನಾಮನ್ನು ಕೊಡಿಸೋಣಾಗುತ್ತದೆ?' ಎಂದನು.

ಅದನ್ನು ಕೇಳಿ ಕಲೆಕ್ಟರು ಪರಮಾನಂದಿತನಾದನು. ಅವನು ದೇವೀಚೌಧುರಾಣಿಯು ಕಳ್ಳರಿಗೆಲ್ಲಾ ಯಜಮಾನಿಯೆಂತಲೂ, ಅವಳು ಸಿಕ್ಕರೆ ಮಿಕ್ಕವರೆಲ್ಲರೂ ಸಿಕ್ಕುವರೆಂತಲೂ ತಿಳಿದಿದ್ದನು. ದೇವಿಯನ್ನು ಹಿಡಿಯಲವನೂ ಅನೇಕ ದಂಡನ್ನು ಕೊಂಡೊಯ್ದು ಪ್ರಯತ್ನಗಳನ್ನು ಮಾಡಿದನು; ಫಲವಾಗಲಿಲ್ಲ. ಅದುಕಾರಣ, ಹರವಲ್ಲಭನಾ ಭಯಂಕರೀ ರಾಕ್ಷಸಿಯನ್ನು ಹಿಡಿದುಕೊಡುವೆನೆಂದು ಹೇಳಿದ ಮಾತನ್ನು ಕೇಳಿ ಸಾಹೆಬನು ಬಹಳ ಸಂತುಷ್ಟನಾಗಿ, ವಿಶೇಷ ಇನಾಮನ್ನು ಕೊಡಿಸುವುದಾಗಿ ಹೇಳಿದನು. ಹರವಲ್ಲಭನು ಐನೂರು ಮಂದಿ ಸಿಪಾಯಿಗಳನ್ನು ಕಳುಹಬೇಕೆಂದು ಬೇಡಿದನು. ಸಾಹೆಬನು ಅದೇಪ್ರಕಾರ ಲೆಫಟನೆಂಟ್ ಬ್ರಾನನ್ ಸಾಹೆಬನನ್ನು ಜತೆಮಾಡಿ ಸಿಪಾಯಿಗಳನ್ನು ಕಳುಹಿದನು.

ವ್ರಜೇಶ್ವರನು ಹರವಲ್ಲಭನಿಗೆ ದೇವಿಯು ಬಂದು ಕಾದಿರುವ ಘಾಟಿಯ ಹೆಸರನ್ನು ವಿವರವಾಗಿ ಹೇಳಿದ್ದನು. ದೇವಿಯು ಹಡಗಿನಲ್ಲಿರುವ ಸಂಭವ ಆದುದರಿಂದ ಲೆಫಟನೆಂಟ್ ಬ್ರ್ಯಾನನ್ ಸಾಹೆಬನು ಕೆಲವು ಸೈನ್ಯವನ್ನು ಹಡಗಿನಲ್ಲಿ ತೆಗೆದುಕೊಂಡು ಹೋದನು. ದೇವಿಯ ಹಡಗನ್ನು ಹಿಡಿಯಲು ಐದು ಯುದ್ಧ ನಾವೆಗಳು ಹೊರಟವು. ಕೆಲವು ಸೈನ್ಯವು ಅರಣ್ಯದಲ್ಲಿ ಔತುಕೊಂಡಿರಲು ಹೋದುವು. ದೇವಿಯ ಹಡಗು ಬಂದು ನಿಲ್ಲುವ ಸ್ಥಳವನ್ನು ಹರವಲ್ಲಭನು ಹೇಳಿದ್ದನು. ಹಡಗಿಗೆ ಮುತ್ತಿಗೆ ಹಾಕುತ್ತಲೇ ದೇವಿಯು ಹಡಗಿನಿಂದಿಳಿದು ಅರಣ್ಯಮಾರ್ಗವಾಗಿ ಹೋಗುವ ಸಂಭವದಲ್ಲಿ ಅವಳನ್ನಲ್ಲಿ ಸುತ್ತುಗಟ್ಟಲು ತೀರದಲ್ಲಿ ಕೆಲವು ಸೈನ್ಯವು ನಿಂತವು. ಇಂಗ್ಲೀಷರ ಹಡಗನ್ನು ದೂರದಿಂದ ನೋಡಿ ತಪ್ಪಿಸಿಕೊಂಡು ಹೋಗುವಳೆಂಬ ಭಯದಿಂದ ಸಾಹೆಬನು ಎರಡು ಹರಿದಾರಿಯ ದೂರ ನದಿಯಲ್ಲಿ ಮಿಕ್ಕ ಸಿಪಾಯಿಗಳು ಹಡಗಿನಲ್ಲಿದ್ದು ಕಾದಿರಲು ಹೇಳಿಟ್ಟದ್ದನು.

ಸನ್ಯಾಸಿನಿಯಾದಾ ಹೆಂಗಸನ್ನು ಹಿಡಿಯಲು ಅಷ್ಟೊಂದು ಆಡಂಬರ; ಅಸಾಧ್ಯವಾದ ಏರ್ಪಾಡು! ದೇವಿಯು ಸನ್ಯಾಸಿನಿಯೇ ಅಹುದೋ ಅಲ್ಲವೋ, ಅವಳ ಆಜ್ಞಾಧಾರಿಗಳಾದ ಸಾವಿರಾರುಮಂದಿ ಯೋಧೃಗಳಿರುವರೆಂದು ಸಾಹೆಬ ಜನರು ತಿಳಿದಿದ್ದರು. ಆ ಯೋಧೃಗಳಿಗೆ ‘ ಬರಕಂದಾಜ ’ ಸೈನ್ಯವೆಂದು ಹೆಸರು. ಅನೇಕ ಸಮಯದಲ್ಲಿ ಬರಕಂದಾಜ ಸೈನ್ಯದ ದೊಣ್ಣೆಯ ಪೆಟ್ಟಿಗೆ ಕುಂಪಣಿಯ ಸಿಪಾಯಿಗಳು ತಡೆಯಲಾರದೆ ಓಡಿಹೋದರೆಂದು ಪ್ರವಾದವಿದೆ. ಹಾ! ದೊಣ್ಣೆ! ನಿನ್ನ ದಿನವು ಕಳೆದುಹೋಯಿತು! ನೀನು ಸಾಮಾನ್ಯವಾದ ವಂಶದವನೇನೋ ನಿಜ. ಆದರೆ ನೀನು ಪಳಗಿದ ಕೈಯಲ್ಲಿ ಬಿದ್ದರೆ, ನೀನು ಮಾಡದಿರುವ ಕೆಲಸವು ಪ್ರಪಂಚದಲ್ಲಿ ಉಂಟೆ? ನೀನು ಎಷ್ಟೊಂದು ಕತ್ತಿಗಳನ್ನು ಎರಡೆರಡು ತುಂಡಾಗಿ ಒಡಿದಿಲ್ಲ! ಎಷ್ಟೊಂದು ಗುರಾಣಿಗಳನ್ನು ಚೂರು ಮಾಡಿಲ್ಲ! ಏನೆಂದು ಬಣ್ಣಿಸಲಿ! ಆಹಾ! ಎಷ್ಟೊಂದು ಬಂದೂಕುಗಳೂ ಸನೀನುಗಳೂ ನಿನ್ನ ಹೊಡತಕ್ಕೆ ತಾಳಲಾರದೆ ಯೋಧನ ಕೈಯಿಂದ ಸರಿದು ಬಿದ್ದುಹೋಗಿಲ್ಲ! ನಿನ್ನ ಪೆಟ್ಟನಿಂದ ಎಷ್ಟೊಂದು ಯೋಧನು ಕೈಮುರಿದುಕೊಂಡು ಹೋಗಿಲ್ಲ! ದೊಣ್ಣೆ! ನೀನು ಹೆಂಗಸರ ಗೋಷೆಯ ಮರ್ಯಾದೆಯನ್ನು ಕಾಪಾಡಿರುತ್ತಿ. ಮಾನವನ್ನು ಕಾಪಾಡಿದೆ. ಹೊಲದಲ್ಲಿ ಒಕ್ಕಿ ಹಾಕಿದ ರಾಶಿಯನ್ನು ಭದ್ರಪಡಿಸುತ್ತಿ. ಹಣವನ್ನು ರಕ್ಷಿಸುತ್ತಿರುವೆ. ಜನರನ್ನು ಕಾಪಾಡಿರುತ್ತಿ. ಎಲ್ಲರ ಮಾನವನ್ನೂ ಕಾಪಾಡಿರುವೆ. ಮುಸಲ್ಮಾನರು ನಿನ್ನ ಭಯಕ್ಕೆ ಹೆದರುತಿದ್ದರು. ಕಳ್ಳರು ನಿನ್ನ ಭಯಕ್ಕೆ ನಡುಗುತಿದ್ದರು. ನಿನ್ನ ಭಯದಿಂದ ನೀಲಿಯ ತೋಟದವರು ಸೊಲ್ಲಡಗಿ ಕುಳಿತರು. ನೀನಾ ಕಾಲದ ಪೀನಲಕೋಡಾಗಿದ್ದೆ. ನೀನು ಪೀನಲಕೋಡಿನಂತೆ ದುಷ್ಟರ ದಮನವನ್ನೂ ಶಿಷ್ಟರ ಶಮನವನ್ನೂ ಮಾಡುತಿದ್ದೆ. ಹಾಗೂ ಪೀನಲಕೋಡಿನಂತೆ ರಾಮನ ಅಪರಾಧಕ್ಕೆ ಶಾಮನ ತಲೆಯನ್ನು ಒಡೆಯುತಿದ್ದೆ. ಆಗ ಪೀನಲಕೋಡಿಗಿಂತಲೂ ನಿನ್ನ

ಅಧಿಕಾರವು ಹೆಚ್ಚಾಗಿದ್ದಿತು. ಏಕೆಂದರೆ, ಸೀನಲಕೋಡಿನಮೇಲೆ ಅಪ್ಪೀಲುಂಟು. ನಿನ್ನ ಮೇಲೆ ಅಪ್ಪೀಲೇ ಇಲ್ಲ. ಹಾ! ಈಗ ನಿನ್ನಾ ಮಹಿಮೆಯು ಹೋಯಿತು! ಸೀನಲಕೋಡು ಬಂದು ನಿನ್ನನ್ನೋಡಿಸಿ, ನಿನ್ನ ಸ್ಥಾನವನ್ನು ಆಕ್ರಮಿಸಿಕೊಂಡಿದೆ. ಸೀನಲಕೋಡು ಸಮಾಜವನ್ನೂ ಶಾಸನಮಾಡುವ ಭಾರವನ್ನೂ ನಿನ್ನ ಕೈಯಿಂದ ಅಪಹರಿಸಿಕೊಂಡಿತು. ದೊಣ್ಣೆ! ನೀನೀಗ ದೊಣ್ಣೆಯಲ್ಲ! ಕೇವಲ ಒಂದು ಗಳುವಿನ ತುಂಡು! ನೀನು ಕೃಶವಾಗಿ ಹೋಗಿ ಕಡ್ಡಿ ಅಥವಾ ಸಣ್ಣ ಬೆತ್ತದ ಕೋಲಿನ ಭಾವವನ್ನು ಹೊಂದಿ ನರಿ ನಾಯಿಗಳನ್ನು ಕಂಡರೆ ಹೆದರುವ ದೊಡ್ಡಮನುಷ್ಯರ ಕೈಯನ್ನಲಂಕರಿಸುತ್ತೀಯೆ. ನಾಯಿ ಕೂಗಿದರಾ ಭಯಕ್ಕೆ ಕೋಮಲವಾದಾ ಕೈಯಿಂದ ಜರಿದು ಬಿದ್ದುಹೋಗುತ್ತೀಯೆ. ನಿನ್ನಾ ಮಹಿಮೆಯು ಹೋಯಿತು! ನೀನಾ ಕಾಲದಲ್ಲಿ ಮಹದೌಷಧವಾಗಿದ್ದೆಯೆಂದು ಕೇಳಿದ್ದೆವು. ಉತ್ತಮರಾದ ವೈದ್ಯರ ಬಾಯಿಂದ ಮಾನಸಿಕವಾದ ರೋಗಕ್ಕೆ "ಮೂರ್ಖಸ್ಯ ದೊಣ್ಣ್ಯೌಷಧಂ" ಎಂದು ಕೇಳಿದ್ದೇವೆ. ಈಗಿನ ಕಾಲದಲ್ಲಿ ಮೂರ್ಖನಿಗೆ 'ಅಣ್ಣಾ!' 'ಅಪ್ಪಾ!' ಎಂಬುದು ಔಷಧವಾಗಿದೆ. ಅದರಿಂದಲೂ ರೋಗವು ಚನ್ನಾಗಿ ಆರೋಗ್ಯವಾಗುವಂತಿಲ್ಲ. ನಿನ್ನ ಸಗೋತ್ರ ಸಾಪಿಂಡರಾದ ಕೋಲು, ಎಷ್ಟಿ, ಕಟ್ಟಿಗೆ ತುಂಡು ಇವೇ ಮುಂತಾದುವುಗಳಿಗೂ ಅದೇ ಗುಣ ಬಂದುಹೋಗಿದೆ. ಮೊದಲಿನಿಂದಲೂ ಶ್ರೀನಂದನಂದನ ಮೋಹಕರಿಯಾದ ವಂಶವೇಣುವನ್ನು ಕೇಳಿಯೇ ಇದ್ದೇವೆ. ಎಲ್ಲಾ ಅಷ್ಟಕ್ಕೇವೇ ಬಂದಿತು. ಆದರೆ ದೊಣ್ಣೆ! ನಿನ್ನಂತಾರೂ ಇರಲಿಲ್ಲ. ನೀನು ಈಗಿಲ್ಲ. ಹೋಗಿಬಿಟ್ಟೆ! ನಿನಗೆ ಅಕ್ಷಯವಾದ ಸ್ವರ್ಗಪ್ರಾಪ್ತಿಯುಂಟಾಗಿರಬೇಕೆಂದು ತೋರುತ್ತದೆ. ನೀನು ಇಂದ್ರಲೋಕಕ್ಕೆ ಹೋಗಿ ನಂದನಕಾನನದಲ್ಲಿ ಪುಷ್ಪಭಾರದಿಂದ ಬೊಗ್ಗಿರುವ ಪಾರಿಜಾತವೃಕ್ಷದೊಂದು ಕೋಂಬೆಗೆ .ಊರುಗೋಲಾಗಿಯೂ ದೋಟಿಗೋಲಾಗಿಯೂ ಇರುವಂತೆ ತೋರುತ್ತದೆ. ದೇವಕನ್ಯೆಯರು ನಿನ್ನನ್ನು ಹಿಡಿದು ಕಲ್ಪವೃಕ್ಷದಿಂದ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಫಲಗಳನ್ನು ಉದುರಿಸುತ್ತಾರಲ್ಲವೆ? ಅವುಗಳಲ್ಲಾವದಾದರೂ ಒಂದು ಹಣ್ಣು ಭೂಮಿಯ ಮೇಲೆ ಬೀಳುವಂತೆ ಮಾಡಬಾರದೆ?

---

# ಎರಡನೆಯ ಪರಿಚ್ಛೇದ.

ಆವ ದೊಣ್ಣೆಯ ಭಯಕ್ಕೆ ಸಲವಾಗಿ ಅಷ್ಟುಮಂದಿ ಸಿಪಾಯಿಗಳು ಬಂದು ಕೂಡಿದ್ದರೋ ಆ ಸಿಪಾಯಿಗಳಲ್ಲೊಬ್ಬನಲ್ಲಾದರೂ ಒಂದು ದೊಣ್ಣೆ ಇರಲಿಲ್ಲ. ದೊಣ್ಣೆಯವರೊಬ್ಬರೂ ಇರಲಿಲ್ಲ. ದೇವಿಯು ಅದೇ ಘಾಟಿಯಲ್ಲಿ— ಆವ ಘಾಟಿಯಲ್ಲಿ ವ್ರಜೇಶ್ವರನನ್ನು ಬಂದಿಯಾಗಿ ಹಡಗಿನಲ್ಲಿಟ್ಟುಕೊಂಡಿದ್ದಳೋ— ಆ ಘಾಟಿಯಲ್ಲಿ ಹಡಗಿನೊಳಗಿದ್ದಳು. ಸಾಯಂಕಾಲವಾಯಿತು. ಹಡಗು

ಮೊದಲಿನಂತೆ ಅಲಂಕೃತವಾಗಿದ್ದಿತು. ಎಲ್ಲವೂ ಹಾಗಿದ್ದಿತೆಂದು ತಿಳಿಯಕೂಡದು. ದೊಡ್ಡ ಹಡಗು ಅಲ್ಲಿರಲಿಲ್ಲ. ಅದರಲ್ಲಿದ್ದ ಐವತ್ತು ಜನರೂ ಇರಲಿಲ್ಲ. ದೇವಿಯ ಹಡಗಿನಮೇಲೆ ಪುರುಷನೊಬ್ಬನೂ ಇರಲಿಲ್ಲ. ಹಡಗು ನಡಿಸುವವರಾಗಲಿ, ರಂಗರಾಜನಾಗಲಿ ಆರೂ ಇರಲಿಲ್ಲ. ಹಡಗಿನ ಪಟಗಳೆಲ್ಲಾ ಇಳಿಸಲ್ಪಟ್ಟದ್ದುವು. ಗಾಳಿಯಿಲ್ಲದ ಕಾರಣ ಪಟಗಳು ಅಲ್ಲಾಡುತ್ತಿರಲಿಲ್ಲ. ಲಂಗರು ಬಿಟ್ಟರಲಿಲ್ಲ. ಹಡಗಿನೊಂದೆರಡು ಹಗ್ಗಗಳು ಮಾತ್ರ ಮರಕ್ಕೆ ಕಟ್ಟಿದ್ದುವು.

ದೇವಿಯು ಮೊದಲಿನ ಹಾಗೆ ರತ್ನಾಭರಣಭೂಷಿತೆಯಾಗಿ ಮಹಾರ್ಘ ವಸ್ತ್ರ ಧಾರಣೆಮಾಡಿರಲಿಲ್ಲವಾದರೂ ಬೇರೆ ವಿಧವಾಗಿ ಪ್ರಕಾಶಿಸುತಿದ್ದಳು. ಲಲಾಟ, ಗಂಡ ಸ್ಥಳ, ಬಾಹು, ಹೃದಯ ಸರ್ವಾಂಗಗಳಲ್ಲಿಯೂ ಸುಗಂಧ ಚಂದನವನ್ನು ಲೇಪನ ಮಾಡಿಕೊಂಡಿದ್ದಳು. ಚಂದನದಿಂದಲಂಕೃತೆಯಾಗಿ ತಲೆಗೆ ಸುತ್ತು ಒಂದು ಪುಷ್ಪ ಮಾಲೆಯನ್ನು ಸುತ್ತಿಕೊಂಡಿದ್ದಳು. ಕೈಗಳಿಗೆ ಆಭರಣಕ್ಕೆ ಬದುಲಾಗಿ ಪುಷ್ಪದಿಂದ ರಚಿಸಲ್ಪಟ್ಟ ಬಳೆಯನ್ನು ತೊಟ್ಟದ್ದಳು. ಉಟ್ಟದ್ದುದು ಸಾಮಾನ್ಯವಾದ ಗಾಡಾಸೀರೆ.

ಹಡಗಿನ ಮೇಲುಭಾಗದಲ್ಲಿ ದೇವಿಯೂ ಮತ್ತಿಬ್ಬರು ಹೆಂಗಸರೂ ಕುಳಿತಿದ್ದರು. ಅವರಲ್ಲೊಬ್ಬಳು ನಿಶಿ. ಮತ್ತೊಬ್ಬಳು ದಿವಾ. ಅವರವರು ಮಾತಾಡುತಿದ್ದ ಪ್ರಸ್ತಾಪದ ಮಧ್ಯಭಾಗದಿಂದ ಕೆಲವು ಅಂಶಗಳನ್ನು ತಿಳಿಸಿದರೆ ಬಾಧಕವೇನೂ ಇರದು.

ದಿವಾ ಅಶಿಕ್ಷಿತೆ; ಓದಿದವಳಲ್ಲ. ಪಾಠಕರನದನ್ನು ಜ್ಞಾಪಕದಲ್ಲಿಟ್ಟರಬೇಕು.

ದಿವಾ—ಅಹುದು, ಪರಮೇಶ್ವರನನ್ನು ಪ್ರತ್ಯಕ್ಷವಾಗಿ ನೋಡುವುದಕ್ಕಾಗುವುದಿಲ್ಲವೆ ?

ಪ್ರಫುಲ್ಲ—ಇಲ್ಲ. ಪ್ರತ್ಯಕ್ಷವಾಗಿ ನೋಡುವುದಕ್ಕಾಗುವುದಿಲ್ಲ. ನಾನು ಪ್ರತ್ಯಕ್ಷವಾಗಿ ನೋಡುವ ವಿಚಾರವನ್ನು ಹೇಳುತ್ತಿರಲಿಲ್ಲ—ನಾನು ಹೇಳುತಿದ್ದುದು ಪ್ರತ್ಯಕ್ಷ ಮಾಡಿಕೊಳ್ಳುವ ವಿಚಾರ—ಪ್ರತ್ಯಕ್ಷವೆಂಬುದು ಎರಡು ವಿಧ. ನೀನು ನೋಡಬೇಕೆಂದು ಹೇಳುವುದು ಚಾಕ್ಷುಷ ಪ್ರತ್ಯಕ್ಷ, ಎಂದರೆ, ಕಣ್ಣಿನಿಂದ ನೋಡುವುದು—ನನ್ನ ಧ್ವನಿಯನ್ನು ನೀನು ನೋಡುವುದಿಲ್ಲ, ಕೇಳಬಲ್ಲೆ, ಎಂದರೆ ಅದು ಕಿವಿಗೆ ಪ್ರತ್ಯಕ್ಷ ವಿಷಯವಾದುದು. ನನ್ನ ಕೈಯಲ್ಲಿರುವ ಪುಷ್ಪದ ಗಂಧವು ನಿನಗೆ ಬರುವುದಲ್ಲವೆ ?

ದಿವಾ—ಮೂಗಿಗೆ ವಾಸನೆ ಬರುತ್ತದೆ.

ದೇವಿ—ಅದು ನಿನಗೆ ಘ್ರಾಣೇಂದ್ರಿಯದಿಂದ ಉಂಟಾಗುವ ಪ್ರತ್ಯಕ್ಷ—ನಾನು ನಿನ್ನ ಕುತ್ತಿಗೆಯ ಮೇಲೊಂದು ಪೆಟ್ಟನ್ನು ಕೊಟ್ಟರೆ, ಅದು ನಿನಗೆ ತ್ವಗಿಂದ್ರಿಯ ಪ್ರತ್ಯಕ್ಷವಾಗುವುದು, ಏನನ್ನಾದರೂ ತಿಂದರೆ ನಾಲಿಗೆಯಿಂದ ರುಚಿಯು ಗೊತ್ತಾಗುತ್ತದೆ.

ದಿವಾ—ತಿಂದರೆ ಸಾಮಾನ್ಯ ಪ್ರತ್ಯಕ್ಷವಲ್ಲ ; ಪೂರಾ ಪ್ರತ್ಯಕ್ಷವಾಗುವುದು !

ಆದರೆ ಈಶ್ವರನನ್ನು ಎಲ್ಲಿಯೂ ನೋಡುವುದಕ್ಕಾಗುವುದಿಲ್ಲ, ಮುಟ್ಟುವುದಕ್ಕಾಗುವುದಿಲ್ಲ, ಕೇಳುವುದಕ್ಕಾಗುವುದಿಲ್ಲ, ಘ್ರಾಣಮಾಡುವುದಕ್ಕಾಗುವುದಿಲ್ಲ, ರುಚಿ ನೋಡುವುದಕ್ಕೆ ಮೊದಲೇ ಇಲ್ಲ.

ನಿಶಿ—ಆಯಿತು, ಪ್ರತ್ಯಕ್ಷ ಐದು ವಿಧವೆಂದು ಹೇಳಿದ ಹಾಗಾಯಿತು. ಪ್ರತ್ಯಕ್ಷ ಆರು ವಿಧವೆಂದು ಹೇಳಿದ್ದೆನಲ್ಲವೆ? ಚಕ್ಷು, ಕರ್ಣ, ನಾಸಿಕಾ, ರಸನಾ, ತ್ವಕು—ಮತ್ತೊಂದು ಜ್ಞಾನೇಂದ್ರಿಯವಲ್ಲವೆ?

ದಿವಾ—ಅದಾವದು? ಹಲ್ಲುಗಳೆ?

ನಿಶಿ—ದೂರ ಹೋಗು. ಕೆಟ್ಟ ಮೋರೆಯವಳೆ! ರೇಗಿಸಿದರೆ ನಿನ್ನಾ ಇಂದ್ರಿಯವನ್ನು ಒಡಿದು ಹಾಕುವೆನು.

ದೇವಿ—(ನಗುತ ನಗುತ) ಚಕ್ಷುರಾದ ಪಂಚ ಜ್ಞಾನೇಂದ್ರಿಯಗಳು. ಹಸ್ತ ಪಾದಾದಿ ಪಂಚ ಕರ್ಮೇಂದ್ರಿಯಗಳು. ಮತ್ತು ಇಂದ್ರಿಯಾಧಿಪತಿ ಮನಸ್ಸು, ಉಭಯೇಂದ್ರಿಯ, ಎಂದರೆ, ಮನಸ್ಸೂ ಜ್ಞಾನೇಂದ್ರಿಯವೂ ಆಹುದು, ಕರ್ಮೇಂದ್ರಿಯವೂ ಆಹುದು. ಮನಸ್ಸು ಜ್ಞಾನೇಂದ್ರಿಯವಾಗಿಯೂ ಇರುವ ಕಾರಣ ಮನಸ್ಸಿನಿಂದಲೂ ಪ್ರತ್ಯಕ್ಷವಾಗುತ್ತದೆ. ಅದಕ್ಕೆ ಮಾನಸ ಪ್ರತ್ಯಕ್ಷವೆಂದು ಹೆಸರು. ಈಶ್ವರನು ಮಾನಸ ಪ್ರತ್ಯಕ್ಷ ವಿಷಯನು.

ನಿಶಿ—'ಈಶ್ವರಾಸಿದ್ಧೇಃ-ಪ್ರಮಾಣಾಭಾವತ್" (ಅರ್ಥ—ಈಶ್ವರ ಅಸಿದ್ಧ, ಪ್ರಮಾಣದ ಅಭಾವದ ದೆಸೆಯಿಂದ.)

ಸಾಂಖ್ಯಪ್ರವಚನದೀ ಸೂತ್ರವನ್ನೂ ಅದರ ಭಾಷ್ಯವನ್ನೂ ಆರೋದಿರುವರೋ, ನಿಶಿಯು ಹೇಳಿದಾ ವ್ಯಂಗ್ಯೋಕ್ತಿಯ ಮರ್ಮವನ್ನವರು ಚೆನ್ನಾಗಿ ಅರಿಯುವರು. ನಿಶಿಯು ಪ್ರಫುಲ್ಲೆಯ ಸಹಾಧ್ಯಾಯಿನಿಯಾಗಿದ್ದಳು.

ಪ್ರಫುಲ್ಲೆಯು ಮೇಲಿನ ಸೂತ್ರಕ್ಕೆ ಉತ್ತರವಾಗಿ, 'ಸೂತ್ರಕಾರಸ್ಯೋಭಯೇಂದ್ರಿಯ ಶೂನ್ಯತ್ವಾತ್—ನತು ಪ್ರಮಾಣಾಭಾವಾತ್— (ಅರ್ಥ—ಸೂತ್ರಕಾರರಿಂಗೆ ಉಭಯೇಂದ್ರಿಯವು ಶೂನ್ಯವಾಗಿರುವುದರ ದೆಸೆಯಿಂದ—ಪ್ರಮಾಣದ ಅಭಾವದ ದೆಸೆಯಿಂದಲ್ಲ)' ಎಂದು ಹೇಳಿದಳು.

ದಿವಾ—ನಿಮ್ಮ "ಹಾವಾತ್," "ಮಾವಾತ್," ಹಾಗಿರಲಿ, ನನಗೆ ಮನಸ್ಸಿಗೆ ದೇವರು ಕಾಣುವುದಿಲ್ಲ.

ಪ್ರಫುಲ್ಲ—ಮತ್ತು, ನೋಡುವುದೆಂದರೆ, ಚಾಕ್ಷುಷವೇ ಪ್ರತ್ಯಕ್ಷವಾಗಿ ನೋಡುವುದೆನ್ನುವುದು. ಬೇರೆ ಪ್ರತ್ಯಕ್ಷವಾವದೂ ನೋಡುವುದಲ್ಲ. ಮಾನಸ ಪ್ರತ್ಯಕ್ಷವು ಕಣ್ಣಿಗೆ ಕಾಣತಕ್ಕುದಲ್ಲ. ಚಾಕ್ಷುಷ ಪ್ರತ್ಯಕ್ಷ ವಿಷಯವೆಲ್ಲಾ ರೂಪ ಎಂದರೆ ಬಹಿರ್ವಿಷಯಗಳು. ಮಾನಸಿಕ ಪ್ರತ್ಯಕ್ಷವೆಂಬುದು ಅಂತರ್ವಿಷಯ. ಮನಸ್ಸಿನದ್ವಾರಾ ಈಶ್ವರನು ಪ್ರತ್ಯಕ್ಷವಾಗಲಾಪನು. ಈಶ್ವರನನ್ನು ಕಣ್ಣಿನಿಂದ ನೋಡುವುದಕ್ಕಾಗಲಾರದು.

ದಿವಾ—ಅದು ಹೇಗೆ? ನಾನು ಈಶ್ವರನನ್ನಾವಾಗಲೂ ಆವಪ್ರಕಾರದಿಂದಲೂ ಪ್ರತ್ಯಕ್ಷಮಾಡಿಕೊಂಡಿಲ್ಲ.

ಪ್ರಫುಲ್ಲ - ಮನುಷ್ಯನಿಗೆ ಸ್ವಭಾವವಾಗಿ ಪ್ರತ್ಯಕ್ಷ ಶಕ್ತಿಯು ಅಲ್ಪವಾದುದು. ಬೇರೆ ಸಹಾಯ ಅಥವಾ ಅವಲಂಬನವಿಲ್ಲದಿದ್ದರೆ ಎಲ್ಲಾವಸ್ತುಗಳೂ ಅವನಿಗೆ ಸುಲಭವಾಗಿ ಪ್ರತ್ಯಕ್ಷವಾಗುವುದಿಲ್ಲ.

ದಿವಾ—ಪ್ರತ್ಯಕ್ಷವಾಗುವುದಕ್ಕೆ ಬೇರೆ ಸಹಾಯವೇನು ಬೇಕು? ನದಿ, ನೀರು, ಮರ, ಸೇತುವೆ, ನಕ್ಷತ್ರ ಇವುಗಳನ್ನಾವ ಸಹಾಯವೂ ಇಲ್ಲದೆ ನೋಡಬಲ್ಲೆನು.

ಪ್ರಫುಲ್ಲ—ಎಲ್ಲವನ್ನೂ ನೋಡಲಾರೆ. ಅದಕ್ಕೊಂದು ಉದಾಹರಣೆಯನ್ನು ಕೊಡುವೆನು.

ಹೀಗೆಂದು ಹೇಳಿ ಸ್ವಲ್ಪ ನಕ್ಕಳು.

ಆ ನಗುವಿನ ರೀತಿಯನ್ನು ನೋಡಿ, 'ನಿಶಿಯು ಏನಾಯಿತು?' ಎಂದು ಗಾಬರಿಯಿಂದ ಕೇಳಿದಳು

ಪ್ರಫುಲ್ಲೆಯು, 'ಇಂಗ್ಲಿಷರ ಸಿಪಾಯಿಗಳು ಇಂದೆನ್ನನ್ನು ಹಿಡಿಯುವುದಕ್ಕೆ ಸಲವಾಗಿ ಬರುವರೆಂಬುದು ಗೊತ್ತುಂಟೆ?' ಎಂದಳು.

ದಿವಾ—ದೀರ್ಘನಿಶ್ವಾಸವನ್ನು ಬಿಟ್ಟು, 'ಅವನ್ನು ಬಲ್ಲೆನು' ಎಂದಳು.

ಪ್ರಫುಲ್ಲ—ಸಿಪಾಯಿಗಳನ್ನು ಪ್ರತ್ಯಕ್ಷ್ಯವಾಗಿ ನೋಡಿದಿಯಾ?

ದಿವಾ—ಇಲ್ಲ, ಆದರೆ ಬಂದರೆ ಪ್ರತ್ಯಕ್ಷವಾಗುವರು.

ಪ್ರಫುಲ್ಲ—ಈಗ ಹೇಳುತ್ತೇನೆ, ನೋಡು, ಅವರು ಬಂದಿದ್ದಾರೆ. ಅಂದರೆ ಸಹಾಯವಿಲ್ಲದೆ ನೀನು ಪ್ರತ್ಯಕ್ಷವಾಗಿ ನೋಡಲಾರೆ. ಈ ಸಹಾಯವನ್ನು ತೆಗೆದುಕೊ.

ಹೀಗೆಂದು ಹೇಳಿ ಪ್ರಫುಲ್ಲೆಯು ದಿವಿಗೆ ಅಲ್ಲಿದ್ದೊಂದು ದೂರವೀಕ್ಷಣ (Telescope) ವನ್ನು ಕೊಟ್ಟು ನೋಡಬೇಕಾದ ದಿಕ್ಕಿಗದನ್ನು ತಿರುಗಿಸಿ ನೋಡೆಂದು ಹೇಳಿದ ಮೇರೆಗೆ ದಿವಿಯು ನೋಡಿದಳು.

ದೇವಿ—ಏನನ್ನು ನೋಡಿದೆ?

ದಿವಾ—ಒಂದು ಹಡಗು ಕಾಣುತ್ತದೆ, ಅದರಲ್ಲಿ ಅನೇಕ ಜನರಿರುವಂತಿದೆ.

ದೇವಿ—ಅದರಲ್ಲಿ ಸಿಪಾಯಿಗಳಿದ್ದಾರೆ. ಇತ್ತ ಮತ್ತೊಂದನ್ನು ನೋಡು. ಹೀಗೆ ತೋರುತ್ತ ಬೇರೆ ಬೇರೆ ಸ್ಥಳಗಳಲ್ಲಿ ಐದು ಹಡಗನ್ನು ತೋರಿದಳು. ನಿಶಿಯೂ ನೋಡಿ, 'ಹಡಗುಗಳನ್ನೆಲ್ಲಾ ದಡಕ್ಕೆ ಕಟ್ಟಿದ್ದಾರೆ, ನಮ್ಮನ್ನು ಹಿಡಿಯಲು ಬರುವುದಾದರೆ ಅಲ್ಲೇಕೆ ಕಟ್ಟಿರಬೇಕು? ಹಿಂದಟ್ಟಿಬರಲಿಲ್ಲವೇಕೆ?' ಎಂದು ಕೇಳಿದಳು.

ದೇವಿ—ಒಳಮಾರ್ಗದಿಂದ ಬರಬೇಕಾದ ಸಿಪಾಯಿಗಳು ಬಂದು ಸೇರಿಲ್ಲ

ವೆಂದು ತೋರುತ್ತದೆ; ಅವರಿಗೆ ಸಲವಾಗಿ ಕಾದಿರಬಹುದು; ಅವರು ಬರುವುದಕ್ಕೆ ಮುಂಚಾಗಿ ನಾವಿಕ ಸೈನ್ಯವು ಬಂದಿರಬೇಕು. ನಾವಿಕ ಸೈನ್ಯವು ಬರುವುದರೊಳಗೆ ನಾವು ಕಾಡುಬಿದ್ದು ಪಲಾಯನರಾಗುವೆವೆಂಬ ಭಯದಿಂದ ಒಳಮಾರ್ಗದಿಂದಲೂ ಸೈನ್ಯವನ್ನು ಕಳುಹಿಪ್ಪಾರೆ.

ದಿವಾ—ಅವರು ಬಂದಿರುವುದನ್ನು ನಾವೀಗ ನೋಡಿದೆವಷ್ಟೆ. ಕೂಡಲೆ ಓಡಿಹೋಗಬಹುದಲ್ಲವೆ?

ದೇವಿ—ನಮ್ಮಲ್ಲಿ ದುರ್ಬೀನಿರುವುದವರಿಗೆ ಗೊತ್ತಿಲ್ಲ.

ನಿಶಿ—ಅಕ್ಕ! ಪ್ರಾಣವನ್ನುಳಿಸಿಕೊಂಡಿದ್ದರೆ ಎಂದಾದರೂ ಒಂದು ದಿನ ಸ್ವಾಮಿಯನ್ನು ನೋಡಬಹುದು. ಈಗಲೇ ಹಡಗಿನಿಂದಿಳಿದು ದಡದಮೇಲೆ ಹೋಗಿ ಪ್ರಾಣವನ್ನುಳಿಸಿಕೊಳ್ಳೋಣ, ನಡಿ. ಒಳಮಾರ್ಗದಿಂದ ಬರತಕ್ಕ ಸಿಪಾಯಿಗಳಿನ್ನೂ ಬಂದಿಲ್ಲವಾಗಿ ಪ್ರಾಣರಕ್ಷಣೆಗೆ ಅವಕಾಶವಿದೆ.

ದೇವಿ—ಹಾಗೆ ಪ್ರಾಣದಮೇಲಿನಾಶೆಯುಳ್ಳವಳಾಗಿದ್ದರೆ, ಸಮಾಚಾರಗಳನ್ನೆಲ್ಲಾ ಕೇಳಿ ತಿಳಿದು ಇಲ್ಲಿಗೇಕೆ ಬರುತಿದ್ದೆನು? ಬಂದುದಲ್ಲದೆ ಸಂಗಡ ಬಂದಿದ್ದ ಜನರನ್ನೆಲ್ಲಾ ಕಳುಹಿದೆನೇಕೆ? ನನ್ನ ಅಧಿಕಾರದಲ್ಲಿರುವ ಸಾವಿರಾರು ಬರಕಂದಾಜ ಸೈನ್ಯವನ್ನೂ ಬೇರೆ ಸ್ಥಳಕ್ಕೆ ಕಳುಹಿದೆನೇಕೆ? ಪ್ರಾಣದಮೇಲೆನಗೆ ಲೇಶವೂ ಆಶೆಯಿಲ್ಲ.

ದಿವಾ—ಮೊದಲೆನಗೆ ಗೊತ್ತಿದ್ದರೆ ನೀನು ಹೀಗೆ ಮಾಡುವುದಕ್ಕವಕಾಶವನ್ನು ಕೊಡುತ್ತಿರಲಿಲ್ಲ.

ದೇವಿ—ದಿವಾ! ನಿನಗದು ಸಾಧ್ಯವೆ? ನಾನೆಣಿಸುವುದು ತಪ್ಪದೆ ನಡೆಯುವುದು. ಇಂದಿನ್ನ ಸ್ವಾಮಿಯನ್ನು ನೋಡುವೆನು. ನೋಡಿ ಆತನ ಅಪ್ಪಣೆಯನ್ನು ಪಡೆದು ಜನ್ಮಜನ್ಮಾಂತರಕ್ಕೂ ಆತನೆನಗೆ ಸ್ವಾಮಿಯಾಗಬೇಕೆಂದು ಹಾರೈಸುತ್ತ ಪ್ರಾಣವನ್ನು ಸಮರ್ಪಣೆ ಮಾಡುವೆನು. ದಿವಾ! ನಿಶಿ! ನೀವಿಬ್ಬರೂ ನನ್ನ ಮಾತನ್ನು ಕೇಳಿರಿ. ನನ್ನ ಸ್ವಾಮಿಯು ಇಲ್ಲಿಂದ ಹಿಂದಿರುಗಿ ಹೋಗುವಾಗ ಆತನ ಹಡಗೇರಿ ಆತನೊಂದಿಗೆ ಹೊರಟುಹೋಗಿರಿ. ನಾನೊಬ್ಬಳೇ ಇಂಗ್ಲೀಷರಿಗೊಪ್ಪಿಸಿಕೊಳ್ಳುವೆನು. ನಾನೊಬ್ಬಳೇ ಗಲ್ಲಿಗೆ ನೇಣುಬೀಳುವೆನು. ಅದಕ್ಕೆ ಸಲವಾಗಿ ಹಡಗಿನಿಂದ ಎಲ್ಲರನ್ನೂ ಕಳುಹಿಸಿದ್ದೇನೆ. ನೀವೂ ಆಗಲೇ ಹೋಗಬೇಕಾಗಿದ್ದಿತು. ನಿಮ್ಮನ್ನೀಗ ಬೇಡುವೆನೇನೆಂದರೆ, ನೀವಿಬ್ಬರೂ ದಯವಿಟ್ಟು ನನ್ನ ಸ್ವಾಮಿಯ ನಾವೆಯನ್ನೇರಿ ಹೊರಟುಹೋಗಿರಿ, ಇದೆನ್ನ ಪ್ರಾರ್ಥನೆ.

ನಿಶಿ—ನನ್ನೀ ಶರೀರದಲ್ಲಿ ಪ್ರಾಣವಿರುವತನಕ ನಿನ್ನನ್ನು ಬಿಟ್ಟಗಲಿರೆನು. ಸಾಯಬೇಕಾಗಿದ್ದರೆ ಇಬ್ಬರೂ ಒಟ್ಟಿಗೆ ಸಾಯೋಣ.

ಪ್ರಫುಲ್ಲ—ಆ ಮಾತು ಹಾಗಿರಲಿ. ನಾನು ಹೇಳುತಿದ್ದುದನ್ನು ಪೂರೈಸುವೆನು. ಅವರು ಕಣ್ಣಿಗೆ ಕಾಣುತ್ತಿರಲಿಲ್ಲವೋ ದುರ್ಬೀನಿನ ಸಹಾಯದಿಂದ-

ಹೇಗೆ ಕಂಡುಬಂದಿತೋ ಹಾಗೆ ಈಶ್ವರನನ್ನು ಪ್ರತ್ಯಕ್ಷವಾಗಿ ನೋಡಬೇಕಾದರೆ ಮನಸ್ಸಿಗೂ ಒಂದು ದುರ್ಬೀನು ಬೇಕು.

ದಿವಾ—ಮನಸ್ಸಿಗೆ ದುರ್ಬೀನು ಎಂತಹುದುದು ?

ಪ್ರಫುಲ್ಲ—ಯೋಗ.

ದಿವಾ—ಅದಾವದು ? ಸನ್ಯಾಸ ಪ್ರಾಣಾಯಾಮ, ಕುಂಭಕ, ಧೇಲ್ಕಿ—ಮುಂತಾದುವುಗಳೆ ?

ಪ್ರಫುಲ್ಲ—ಅದಕ್ಕೆಲಾ ನಾನು ಯೋಗವೆಂದು ಹೇಳುವುದಿಲ್ಲ. ಅವು ಯೋಗಕ್ಕೆ ಅಭ್ಯಾಸಮಾತ್ರ. ಆದರೆ ಎಲ್ಲಾ ಅಭ್ಯಾಸಗಳೂ ಯೋಗವಲ್ಲ. ಹಾಲು ತುಪ್ಪಾ ಮುಂತಾದವುಗಳನ್ನು ತಿನ್ನುವ ಅಭ್ಯಾಸವು ಯೋಗವಾಗದು. ಮೂರು ಅಭ್ಯಾಸಕ್ಕೆ ಮಾತ್ರ ಯೋಗವೆಂದು ಹೆಸರು.

ದಿವಾ—ಆ ಮೂರು ಅಭ್ಯಾಸಗಳಾವವು ?

ಪ್ರಫುಲ್ಲ—ಜ್ಞಾನ, ಕರ್ಮ, ಭಕ್ತಿ—ಜ್ಞಾನಯೋಗ, ಕರ್ಮಯೋಗ, ಭಕ್ತಿಯೋಗ.

ಹೀಗೆಂದು ಹೇಳುತ್ತಿದ್ದ ಸಮಯದಲ್ಲಿ ನಿಶಿಯು ದುರ್ಬೀನನ್ನು ಹಿಡಿದು ಅತ್ತಿತ ನೋಡುತ್ತಿದ್ದವಳು, 'ಏನೋ ರಗಳೆಗೆ ಬಂತು!' ಎಂದಳು.

ಪ್ರಫುಲ್ಲ—ಅದೇನು ಬಂತು! ಮತ್ತೇನು ರಗಳೆ ?

ನಿಶಿ—ಸಣ್ಣದೊಂದು ಹಡಗು ಬರುತ್ತಿದೆ. ಇಂಗ್ಲಿಷರ ಹಡಗೆಂದು ತೋರುತ್ತದೆ. ಅವರ ಕಡೆ ಅನುಚರರೆಂದು ಕಾಣುತ್ತದೆ.

ಪ್ರಫುಲ್ಲೆಯು ನಿಶಿಯ ಕೈಯಿಂದ ದುರ್ಬೀನನ್ನು ತೆಗೆದುಕೊಂಡು ನೋಡಿ, 'ನನ್ನ ಅದೃಷ್ಟ—ಆತನೇ ಬರುತ್ತಾನೆ : ನೀವು ಕೆಳಗೆ ಹೋಗಿರಿ' ಎಂದಳು.

ದಿವಾ, ನಿಶಿ ಇಬ್ಬರೂ ಹಡಗಿನ ಮೇಲುಭಾಗದಿಂದಿಳಿದು ಕೊಠಡಿಯೊಳಗೆ ಹೋದರು. ಸಣ್ಣ ಹಡಗುಕ್ರಮವಾಗಿ ಬಂದು, ಪ್ರಫುಲ್ಲೆಯ ಹಡಗಿಗೆ ತಗಲಿತು. ಅದರಲ್ಲಿ ವ್ರಜೇಶ್ವರನಿದ್ದನು. ಆತನು ಹಡಗಿಗೆ ಹತ್ತಿ ಬಂದು ತನ್ನ ಹಡಗು ದೂರವಿರಲೆಂದು ಅಪ್ಪಣೆಯನ್ನು ಮಾಡಿದನು.

ವ್ರಜೇಶ್ವರನು ಹತ್ತರ ಬರುತ್ತಲೇ ಪ್ರಫುಲ್ಲೆಯು ಎದ್ದು ನಿಂತು, ಬಗ್ಗಿ, ಆತನ ಪಾದಧೂಳಿಯನ್ನು ತೆಗೆದುಕೊಂಡು ತಲೆಯಮೇಲದನ್ನಿಟ್ಟುಕೊಂಡಳು. ಅನಂತರ ಇಬ್ಬರೂ ಕುಳಿತುಕೊಂಡರು.

ವ್ರಜೇಶ್ವರ—ಇಂದು ಹಣವನ್ನು ತರುವುದಕ್ಕಾಗಲಿಲ್ಲ. ಎರಡು ಮೂರು ದಿನಗಳಲ್ಲಿ ತರುವೆನು. ಎರಡು ಮೂರು ದಿನಗಳಲ್ಲಿ ನಿನ್ನನ್ನೆಲ್ಲೆಷ್ಟು ಹೊತ್ತಿನಲ್ಲಿ ನೋಡಲಾಗುವುವೆಂಬುದನ್ನು ತಿಳಿದುಕೊಂಡು ಹೋಗಲು ಬಂದೆನು.

ಛೀ! ಛೀ! ಎಲೈ ವ್ರಜೇಶ್ವರ! ಛೀ! ಹತ್ತುವರ್ಷಗಳಾದ ಬಳಿಕ ಪ್ರಫುಲ್ಲೆಯೊಡನೆ ಇದೇ ಮಾತು ?

ದೇವಿಯು ವ್ರಜೇಶ್ವರನ ಪ್ರಶ್ನೆಗೆ ಉತ್ತರವಾಗಿ, 'ನೀವೆನ್ನನ್ನು ಪುನಃ ನೋಡಲಾರಿರಿ' ಎಂದು ಹೇಳುತ್ತಿದ್ದಹಾಗೆ ಅವಳ ಸ್ವರವು ಗದ್ಗದವಾಯಿತು. 'ನನ್ನನ್ನು ನೋಡಲಾರಿರಿ ; ಆದರೆನ್ನ ಸಾಲವನ್ನು ಹರಿಸಲೊಂದುಪಾಯವುಂಟು. ತಮಗೆ ಹಣವು ದೊರೆತಾಗ ತಾವದನ್ನು ಬಡವರಿಗೂ ದುಃಖಿಗಳಿಗೂ ದಾನಮಾಡಿದರೆ ನನಗದು ತಲಪುವುದು' ಎಂದು ಹೇಳಿದಳು.

ವ್ರಜೇಶ್ವರನವಳ ಕೈಯನ್ನು ಹಿಡಿದುಕೊಂಡನು. ಹಿಡಿದುಕೊಂಡು, 'ಪುಲ್ಲ! ನಿನ್ನ ಹಣ—'

ಹಾಳ ಹಣ! ಮಾತು ಪೂರೈಸಲಿಲ್ಲ. ಬಾಯಿನ ಮಾತು ಬಾಯಲ್ಲಿಯೇ ಉಳಿಯಿತು. ವ್ರಜೇಶ್ವರನು, "ಪ್ರಫುಲ್ಲ" ಎಂದು ಹೇಳಿ ಕೈಯನ್ನು ಹಿಡಿದುಕೊಳ್ಳುತ್ತಲೇ, ಹತ್ತುವರ್ಷ ಕಟ್ಟುಹಾಕಿ ಕಟ್ಟಿದ್ದ ಕಟ್ಟೆಯೊಡೆದು ಅವಳ ಕಣ್ಣಿನಿಂದ ನೀರಿನ ಪ್ರವಾಹವು ಹೊರಟಿತು. ವ್ರಜೇಶ್ವರನ ಹಾಳಾದ ಹಣದ ಮಾತು ಆ ಪ್ರವಾಹದಲ್ಲಿ ತೇಲಿಹೋಯಿತು. ತೇಜಸ್ವಿನಿಯಾದಾ ದೇವಿಯು ಚಿಕ್ಕ ಹುಡುಗಿಯಂತತ್ತಳು. ಆ ಅವಕಾಶದಲ್ಲಿ ವ್ರಜೇಶ್ವರನಾಗ ಕಷ್ಟಕ್ಕೊಳಗಾದನು. ಅವನ ಮನಸ್ಸಿನಲ್ಲಿ, ಆ ಪಾಪೀಯಸಿಯು ದರೋಡೆ ಮಾಡಿ ಹೊಟ್ಟೆಹೊರುವವಳಾದಕಾರಣ ಅವಳಿಗೆ ಸಲವಾಗೊಂದು ತೊಟ್ಟು ನೀರನ್ನೂ ಬಿಡಕೂಡದೆಂದು ಯೋಚಿಸಿಕೊಂಡಿದ್ದನು. ಆದರೆ ಕಣ್ಣೀರಾ ನಿಯಮವನ್ನು ಅರಿಯದೆ, ಅವನ ಅಪ್ಪಣೆಯನ್ನು ಕೇಳದೆ, ಬಂದು ಎರಡು ಕಣ್ಣುಗಳಲ್ಲಿಯೂ ತುಂಬಿತು. ಕೈಯಿಂದೊರೆಸಿ ಕಣ್ಣೀರನ್ನು ಹೊರಗೆ ಬಿಡಕೂಡದೆಂದು ಯೋಚಿಸಿಕೊಂಡನು. ಆದರೆ ಒರಸಿಕೊಳ್ಳಲಿಲ್ಲ. ಕಣ್ಣು ಒರಸಿಕೊಳ್ಳದಕಾರಣ ಪುಷ್ಕರವು ತುಂಬಿ ನೀರು ಹರಿದು ಬಂದು, ಪ್ರಫುಲ್ಲೆಯ ಕೈಮೇಲೆ ಬಿದ್ದಿತು.

ಆಗ ಮರಳಿನ ಕಟ್ಟು ಬಿಚ್ಚಿಹೋಯಿತು. ಪ್ರಫುಲ್ಲೆಯು ಡಕಾಯಿತಿ ಮಾಡುವವಳೆಂದವಳನ್ನು ಬಹಳವಾಗಿ ತಿರಸ್ಕರಿಸಬೇಕೆಂತಲೂ, ಪಾಪಿಷ್ಠೆಯೆಂದು ಬೈಬೇಕೆಂತಲೂ ಮತ್ತೂ ಹೆಚ್ಚು ಚಿಕ್ಕ ಚೌಕ ದೊಡ್ಡ ದೊಡ್ಡ ಬೈಗಳ ಮಾತುಗಳನ್ನು ಹೇಳಬೇಕೆಂತಲೂ ವ್ರಜೇಶ್ವರನು ಯೋಚಿಸಿಕೊಂಡು ಬಂದಿದ್ದನು. ಹಾಗೂ ಅವಳನ್ನೀ ಜನ್ಮದಲ್ಲಿ ಪುನಃ ನೋಡುವುದಿಲ್ಲವೆಂದು ಆಕೆಗೆ ತಿಳಿಸಬೇಕೆಂದಿದ್ದನು. ಆದರೆ ಅತ್ತು ಆರ ಕೈಯನ್ನು ತೋಯಿಸಿದನೋ ಅವಳ ಮೇಲೆ ಮತ್ತಾವ ಕ್ರೋಧದ ಮಾತು ಹೊರಡಲಾಪದು ?

ವ್ರಜೇಶ್ವರನು ಕಣ್ಣೊಗಸಿಕೊಂಡು, 'ನೋಡು, ಪ್ರಫುಲ್ಲ! ನಿನ್ನ ಹಣ—ನನ್ನ ಹಣ—ಅದನ್ನು ತೀರಿಸುವುದಕ್ಕೆ ನಾನು ಕಾತರನಾಗಬೇಕಾದುದೇಕೆ ? ಆದರೆ ನಾನು ಕಾತರನಾಗಿದ್ದೇನೆ. ಈ ಹತ್ತು ವರ್ಷಕಾಲವೂ ಮನಸ್ಸಿನಲ್ಲಿ ನಿನ್ನನ್ನೇ ಭಾವಿಸಿಕೊಂಡಿದ್ದೆನು. ನನಗೆ ಮತ್ತಿಬ್ಬರು ಹೆಂಡಂದಿರಿದ್ದಾರೆ. ಆದರವರನ್ನು ಹೆಂಡಂದಿರನ್ನಾಗಿ ಭಾವಿಸಿರಲಿಲ್ಲ. ನೀನೇ ಹೆಂಡತಿಯೆಂದು ತಿಳಿದಿದ್ದೇನೆ. ಹಾಗೇಕೆ

ತಿಳಿದಿದ್ದೆನೋ ಅದನ್ನು ತಿಳಿಯಹೇಳಲಾರೆನು. ನೀನು ಹೋದೆಯೆಂದು ಕೇಳಿದೆನು. ಆದರೆ ನನ್ನ ಪಾಲಿಗೆ ನೀನಿದ್ದಂತೆಯೇ ತಿಳಿದಿದ್ದೆನು. ನೀನು ಹೋದೆಯೆಂದು ಕೇಳಿದಮೇಲೂ ನೀನೇ ಹೆಂಡತಿಯೆಂದು ಭಾವಿಸಿಕೊಂಡಿದ್ದೆನು. ಮನಸ್ಸಿನಲ್ಲಿ ಮತ್ತಾರಿಗೂ ಸ್ಥಳವು ಸಿಗಲಿಲ್ಲ. ಹೇಳುವುದಕ್ಕೆ ಬಾಯಿ ಬರುವುದಿಲ್ಲ. ಆದರೂ ಹೇಳುವುದರಿಂದ ಬಾಧಕವೇನೂ ಇಲ್ಲ. ನೀನು ಸತ್ತುಹೋದೆಯೆಂದು ಕೇಳಿದೊಡನೆಯೇ ನಾನೂ ಸಾಯಬೇಕೆಂದಿದ್ದೆನು. ಸತ್ತಿದ್ದರೆ ಚೆನ್ನಾಗಿತ್ತೆಂದು ಈಗ ತೋರುತ್ತದೆ! ನೀನೂ ಸತ್ತುಹೋಗಿದ್ದರೆ ಚೆನ್ನಾಗಿದ್ದಿತು. ನೀನು ಸಾಯದೆ ನಾನೇ ಸತ್ತಿದ್ದರೂ ಚೆನ್ನಾಗಿದ್ದಿತು. ಈಗ ಏನನ್ನು ಕೇಳುತ್ತೇನೋ, ಏನನ್ನು ತಿಳಿಯುತ್ತೇನೋ ಅದನ್ನು ಕೇಳಲಾರೆನು; ತಿಳಿದುಕೊಳ್ಳಲಾರೆನು. ಹತ್ತು ವರ್ಷದಲ್ಲಿ ಕಳೆದುಕೊಂಡ ಧನವು ಇಂದು ಸಿಕ್ಕಿ ಸ್ವರ್ಗದ ಸುಖಕ್ಕಿಂತಲೂ ಹೆಚ್ಚಾದ ಸುಖವನ್ನು ಅನುಭವಿಸುತ್ತೇನೆ. ಆದರಾ ಸುಖವನ್ನನುಭವಿಸಲಾರೆನು. ನಿನ್ನನ್ನಿಂದು ಪುನಃ ಪಡೆದು ಮರ್ಮಾಂತಿಕವಾದ ಯಾತನೆಯುಂಟಾಗಿದೆ' ಎಂದು ಹೇಳಿ, ಸ್ವಲ್ಪ ಅವಕಾಶವನ್ನು ತೆಗೆದುಕೊಂಡು, ಉಗುಳು ನುಂಗಿ, ತಲೆಯನ್ನು ಕೈಯಿಂದ ಅದುಮಿ ಹಿಡಿದುಕೊಂಡು, ಪುನಃ ಹೇಳತೊಡಗಿದನು :— 'ನಾನು ಸುವರ್ಣದಲ್ಲಿ ಎರಕವೆರೆದ ವಿಗ್ರಹದಂತೆ ಮನಸ್ಸಿನಲ್ಲಿ ಧ್ಯಾನಿಸಿಕೊಂಡಿದ್ದ ನನ್ನಾ ಪ್ರಫುಲ್ಲೆ—ಬಾಯಲ್ಲಿ ಹೊರಡುವುದಿಲ್ಲ—ಆ ಪ್ರಫುಲ್ಲೆಯ ವೃತ್ತಿ ಎಂದು ಹೇಳುವುದರೊಳಗೆ, ಪ್ರಫುಲ್ಲೆಯು, 'ಏನು! ಡಕಾಯಿತಿಗಳನ್ನು ಮಾಡುತ್ತೇನೆಯೆ?' ಎಂದಳು.

ವ್ರಜ—ಮಾಡುವುದಿಲ್ಲವೇನು?

ಅದಕ್ಕೆ ಪ್ರಫುಲ್ಲೆಯು ಹೇಳಬೇಕಾಗಿದ್ದುದೊಂದೇ ಪ್ರತ್ಯುತ್ತರವಿದ್ದಿತು. ವ್ರಜೇಶ್ವರನ ತಂದೆಯು ಪ್ರಫುಲ್ಲೆಯನ್ನು ಕಟ್ಟಕಡೆಯಾಗಿ ಮನೆಯಿಂದ ಹೊರಡಿಸಿದಾಗವಳು ಕಾತರೆಯಾಗಿ ಮಾವನನ್ನು ಕುರಿತು, 'ತಾವು ಮನೆಯಿಂದ ಹೊರಡಿಸಿದರೆ ನಾನು ಹೇಗೆ ಹೊಟ್ಟೆಹೊರದುಕೊಳ್ಳಲಿ?' ಎಂದು ಕೇಳಿದುದಕ್ಕೆ ಮಾವನು 'ಕಳವು ದರೋಡೆ ಮಾಡಿ ತಿನ್ನು' ಎಂದು ಹೇಳಿದ್ದನು. ಪ್ರಫುಲ್ಲೆಯು ಬುದ್ಧಿಮತಿ. ಆ ಮಾತನ್ನು ಮರೆತಿರಲಿಲ್ಲ. ಮರೆಯತಕ್ಕ ಮಾತಾಗಿಯೂ ಇರಲಿಲ್ಲ. ವ್ರಜೇಶ್ವರನಿಂದು ಪ್ರಫುಲ್ಲೆಯನ್ನು ಡಕಾಯಿತಳೆಂದು ಭರ್ತ್ಸನೆ ಮಾಡಿದುದಕ್ಕೆ ಆಕೆ ಕೊಡಬೇಕಾಗಿದ್ದ ಉತ್ತರವು 'ನಾನು ಡಕಾಯಿತಿಯೇ ಅಹುದು; ಅದಕ್ಕೆ ಭರ್ತ್ಸನೆ ಮಾಡಲೇಕೆ? ನೀವೇ ಚೋರಿ ಡಕಾಯಿತಿ ಮಾಡಿ ಹೊಟ್ಟೆಹೊರಬೇಕೆಂದು ಹೇಳಿದ್ದಿರಿ; ಗುರುಜನರಾದ ನಿಮ್ಮ ಅಪ್ಪಣೆಯನ್ನು ನೆರವೇರಿಸಿದೆನು' ಎಂದು ಹೇಳತಕ್ಕುದೊಂದೇ ಉತ್ತರವಾಗಿದ್ದಿತು. ಆ ಪ್ರಕಾರ ಪ್ರತ್ಯುತ್ತರವನ್ನು ಹೇಳದಿರುವುದು ಯಥಾರ್ಥವಾದ ಪುಣ್ಯಕಾರ್ಯ. ಪ್ರಫುಲ್ಲೆಯು ಆ ಪುಣ್ಯಕಾರ್ಯವನ್ನು ಮಾಡಿದಳು. ಅವಳಾ ಪ್ರತ್ಯುತ್ತರವನ್ನು

ಹೇಳದೆ, ಸ್ವಾಮಿಯ ಮುಂದೆ ಕೈಮುಗಿದುಕೊಂಡು, 'ನಾನು ಡಕಾಯಿತಿಯಲ್ಲ ವೆಂದು ಶಪಥಮಾಡುವೆನು; ನಾನಾವಾಗಲೂ ದರೋಡೆ ಕಳವು ಮಾಡಿದವಳಲ್ಲ ವೆಂದು ಪ್ರಮಾಣ ಮಾಡುವೆನು; ನೀನೆನಗೆ ದೇವರು; ಬೇರೆ ದೇವರನ್ನು ಅರ್ಚಿಸು ವುದಕ್ಕೆ ಕಲಿಯುತಿದ್ದೆನು; ಆದರದನ್ನು ಕಲಿಯಲಾರದೆ ಹೋದೆನು. ನೀನೆನ್ನ ಪಾಲಿಗೆ ಎಲ್ಲಾ ದೇವರುಗಳಿಗಿಂತಲೂ ಹೆಚ್ಚು. ನೀನೆನಗೊಂದೇ ದೇವರು. ಅಂತಹ ಒಂದೇ ದೇವರಾದ ನಿನ್ನಿದಿರಿಗೆ ನಾನು ಡಕಾಯಿತಿಯಲ್ಲವೆಂದು ಶಪಥ ಮಾಡುವೆನು: ಆದರೆ ಜನರಲ್ಲಿ ನಾನು ಡಕಾಯಿತಿಯೆಂಬ ಪ್ರವಾದವೇನೋ ಉಂಟು. ಹಾಗೇಕೆ ಹೇಳುತ್ತಾರೆಂಬುದನ್ನೂ ಬಲ್ಲೆನು; ಅದನ್ನು ಹೇಳುವುದಕ್ಕೆ ಸಲವಾಗಿ ಇಂದು ನಾನಿಲ್ಲಿಗೆ ಬಂದೆನು; ಇಂದದನ್ನು ನನ್ನಿಂದ ಕೇಳದೆ ಹೋದರೆ ಪುನಃ ನೀನದನ್ನು ಕೇಳಿ ತಿಳಿಯುವುದಿಲ್ಲ; ಕೇಳು, ಹೇಳುವೆನು' ಎಂದಳು.

ಪ್ರಫುಲ್ಲೆಯು ಮಾವನ ಮನೆಯಿಂದ ಬಹಿಷ್ಕೃತೆಯಾಗಿ ಹೊರಟು ಬಂದ ದಿನದ ಮೊದಲ್ಗೊಂಡು ಅಂದಿನದವರೆಗೂ ತನ್ನ ಕಥೆಯನ್ನೆಲ್ಲಾ ಕಪಟವಿಲ್ಲದೆ ಹೇಳಿದಳು. ಕೇಳಿ ವ್ರಜೇಶ್ವರನು ವಿಸ್ಮಿತನಾಗಿ, ಲಜ್ಜಿತನಾಗಿ, ಅತಿಶಯ ಆಹ್ಲಾ ದಿತನಾಗಿ, ಮಹಾಮಹಿಮೆಯುಳ್ಳಾ ಹೆಂಗಸಿನ ಬಳಿ ನಿಂತು ಸ್ವಲ್ಪಭಯಪಟ್ಟ ವನೂ ಆದನು ಪ್ರಫುಲ್ಲೆಯು ತನ್ನ ಕಥೆಯನ್ನೆಲ್ಲಾ ಸಂಪೂರ್ಣವಾಗಿ ಹೇಳಿ, "ನಾನು ಹೇಳಿರುವುದನ್ನೆಲ್ಲಾ ನಂಬುವಿಯಾ?" ಎಂದು ಕೇಳಿದಳು.

ನಂಬದಿರುವುದಕ್ಕೆ ಅವಕಾಶವಿಲ್ಲ. ಪ್ರಫುಲ್ಲೆಯ ಪ್ರತಿಯೊಂದು ಮಾತೂ ವ್ರಜೇಶ್ವರನ ಮೂಳೆ ಮೂಳೆಯಲ್ಲಿಯೂ ಜಡಿತವಾಗಿ ನಾಟಿತು. ಅವನಿಗೆ ಪ್ರತ್ಯುತ್ತರವನ್ನು ಹೇಳತೋಚಲಿಲ್ಲ. ಆದರವನ ಆನಂದಪೂರ್ಣವಾದಾ ಕಾಂತಿ ಯನ್ನು ನೋಡಿ ಪ್ರಫುಲ್ಲೆಯು ಅವನು ತನ್ನ ಮಾತನ್ನು ನಂಬಿದನೆಂದು ತಿಳಿದಳು. ಪ್ರಫುಲ್ಲೆಯು ಪುನಃ ಹೇಳತೊಡಗಿದಳು:—

'ಈಗ ನಿನ್ನ ಪಾದಧೂಳಿಯನ್ನು ದಯೆಪಾಲಿಸಿ, ಈ ಜನ್ಮದಲ್ಲಿಯೇ ಕಟ್ಟ ಕಡೆಯ ಅಪ್ಪಣೆಯನ್ನು ಕೊಡು. ಇನ್ನಿಲ್ಲಿ ಸಾವಕಾಶಮಾಡಬೇಡ. ಮುಂದೆ ವಿಪ ತ್ತಿದೆ. ಹತ್ತುವರ್ಷವಾದ ಬಳಿಕ ನಿನ್ನನ್ನು ಪಡೆದು, ಕೂಡಲೆ ಉಪಚಾಯಿಕೆಯಾಗಿ ನಿನ್ನ ಅಪ್ಪಣೆಯನ್ನು ಬೇಡುತ್ತೇನೆ; ಹೋಗಿ ಬರಬಹುದು. ಈಗ ಒದಗಿರುವ ವಿಪತ್ತು ಸಾಮಾನ್ಯವಾದುದಲ್ಲ. ನನಗೆ ಇಲ್ಲಿಬ್ಬರು ಗೆಳತಿಯರಿದ್ದಾರೆ. ಅವರು ಬಹಳ ಗುಣವತಿಯರು. ನಾನವರನ್ನು ಬಹಳ ಪ್ರೀತಿಸುತ್ತೇನೆ. ಅವರನ್ನು ನಿನ್ನ ಹಡಗಿನಲ್ಲಿ ಕರೆದುಕೊಂಡು ಹೋಗು. ಮನೆಗೆ ತಲ್ಪಿದ ಬಳಿಕ ಅವರೆಲ್ಲಿಗೆ ಹೋಗ ಬೇಕೆನ್ನುವರೋ ಅಲ್ಲಿಗವರನ್ನು ಕಳುಹಿಸಿಕೊಡು. ನನ್ನಲ್ಲಿಟ್ಟಿರುವ ಪ್ರೀತಿ ವಿಶ್ವಾಸ ಗಳು ಒಂದೇ ರೀತಿಯಾಗಿರಲಿ. ಸಾಗರೆಯನ್ನು ಕೇಳಿದೆನೆಂದು ಆಕೆಗೆ ತಿಳಿಸ ಬೇಕು' ಎಂದು ಹೇಳಿದಳು.

ವ್ರಜೇಶ್ವರನು ಮೌನವಾಗಿ ಯೋಚಿಸುತಿದ್ದವನು ಕಡೆಗೆ, 'ನನಗಾವದೂ

ಗೊತ್ತಾಗುವುದಿಲ್ಲ, ಪ್ರಫುಲ್ಲ! ನನಗೆ ತಿಳಿಯಹೇಳು. ಅಷ್ಟೊಂದು ಮಂದಿ ನಿನ್ನ ಜನರೆಲ್ಲರೂ ಎಲ್ಲಿ? ಆರೂ ಕಾಣುವುದಿಲ್ಲ! ಹಡಗಿನಲ್ಲಿ ನಾವಿಕರೂ ಇಲ್ಲ! ಹೆಂಗಸರಿಬ್ಬರು ಮಾತ್ರ ಇದ್ದಾರೆ. ಅವರನ್ನೂ ಕಳುಹಿಸುವವಳಾಗಿದ್ದೀಯೆ. ಏನೋ ವಿಪತ್ತಿದೆಯೆಂದು ಹೇಳುತ್ತೀಯೆ. ನಾನಿಲ್ಲಿರಕೂಡದೆಂದು ಹೇಳುತ್ತಿ. ನನ್ನನ್ನೀ ಜನ್ಮದಲ್ಲಿ ಪುನಃ ನೋಡಲಾರೆಯೆಂದು ಹೇಳುತ್ತಿ. ಹಾಗೆಂದರೇನು? ಮುಂದಾವ ವಿಪತ್ತಿದೆಯೋ ಅದನ್ನು ಹೇಳಿದ ಹೊರ್ತು ನಾನಿಲ್ಲಿಂದ ಹೋಗುವುದಿಲ್ಲ. ವಿಪತ್ತು ಎಂತಹುದೋ ಅದನ್ನು ತಿಳಿದರೂ ಹೊರಟುಹೋಗುವೆನೋ ಇಲ್ಲವೋ ಅದನ್ನೂ ಹೇಳಲಾರೆನು' ಎಂದನು.

ಪ್ರಫುಲ್ಲ—ಆ ಸಂಗತಿಗಳನ್ನು ನೀನು ಕೇಳತಕ್ಕುದಲ್ಲ.

ವ್ರಜೇಶ್ವರ—ಹಾಗಾದರೆ ನಾನು ನಿನಗೇನೂ ಸಂಬಂಧವಾಗಬೇಡವೆ?

ಆ ಸಮಯದಲ್ಲಿ 'ಡಂ' ಎಂದು ಬಂದೂಕು ಹಾರಿದ ಶಬ್ದವಾಯಿತು.

---

## ಮೂರನೆಯ ಪರಿಚ್ಛೇದ

ಡಂ ಎಂದು ಬಂದೂಕಿನ ಶಬ್ದವಾಯಿತು. ವ್ರಜೇಶ್ವರನ ಮಾತು ಅವನ ಬಾಯಲ್ಲಿಯೇ ನಿಂತಿತು. ಇಬ್ಬರೂ ಚಮಕಿತರಾಗಿ ಮುಂದೆ ದೃಷ್ಟಿಸಿ ನೋಡಿದರು. ದೂರದಲ್ಲಿ ಐದು ಹಡಗುಗಳು ಬರುತಿದ್ದುವು. ಹಡಗುಗಳಲ್ಲಿ ಸಿಪಾಯಿಗಳು ತುಂಬಿದ್ದರು. ಕಾಡುಮಾರ್ಗವಾಗಿ ಒಂಹಾದಿಯಲ್ಲಿ ಬಂದ ಸಿಪಾಯಿಗಳು ತಾವು ಬಂದುದನ್ನು ತಿಳಿಸಲು ಹಾರಿಸಿದ ಬಂದೂಕಿನ ಶಬ್ದವಾಯಿತು. ಆ ಶಬ್ದವನ್ನು ಕೇಳಿ ಐದು ಹಡಗುಗಳೂ ನಿಂತಿದ್ದ ಸ್ಥಳದಿಂದ ಹೊರಟವು ಅವುಗಳನ್ನು ನೋಡಿ ಪ್ರಫುಲ್ಲೆಯು, 'ಇನ್ನೆಳ್ಳಷ್ಟೂ ಸಾವಕಾಶ ಮಾಡಕೂಡದು. ನಿನ್ನ ಹಡಗನ್ನೇರಿ ಹೊರಟುಹೋಗು' ಎಂದಳು.

ವ್ರಜೇಶ್ವರ—ಏಕೆ? ಹಡಗುಗಳಾರವು? ಬಂದೂಕನ್ನು ಹಾರಿಸಿದವರಾರು?

ಪ್ರಫುಲ್ಲ—ಹೇಳದಿದ್ದರೆ ಹೋಗುವುದಿಲ್ಲವೆ?

ವ್ರಜೇಶ್ವರ—ಏನುಮಾಡಿದರೂ ಹೋಗುವುದಿಲ್ಲ.

ಪ್ರಫುಲ್ಲ—ಹಡಗುಗಳಲ್ಲಿ ಕುಂಪಣಿಯ ಸಿಪಾಯಿಗಳಿದ್ದಾರೆ. ಕಾಡುಮಾರ್ಗವಾಗಿ ಬಂದ ಸಿಪಾಯಿಗಳು ಹಾರಿಸಿದ ಬಂದೂಕಿನ ಶಬ್ದ.

ವ್ರಜೇಶ್ವರ—ಅಷ್ಟೊಂದು ಮಂದಿ ಸಿಪಾಯಿಗಳು ಇತ್ತ ಬರುವುದೇಕೆ? ನಿನ್ನನ್ನು ಹಿಡಿಯುವುದಕ್ಕೋಸ್ಕರವೆ?

ಪ್ರಫುಲ್ಲೆಯು ಸುಮ್ಮನಿದ್ದಳು. ವ್ರಜೇಶ್ವರನು, 'ನಿನ್ನ ಮಾತುಗಳಿಂದಾ ಸಮಾಚಾರವೆಲ್ಲಾ ನಿನಗೆ ಮೊದಲು ಗೊತ್ತಿದ್ದಿತೆಂದು ತೋರುತ್ತದೆ!' ಎಂದು ಹೇಳಿದನು.

ಪ್ರಫುಲ್ಲ—ತಿಳಿದಿದ್ದೆನು. ನನಗೆಲ್ಲೆಲ್ಲಿಯೂ ಗೂಢಚಾರರಿದ್ದಾರೆ.

ವ್ರಜೇಶ್ವರ—ಈ ಘಾಟಿಗೆ ಬಂದ ಬಳಿಕ ಗೊತ್ತಾಯಿತೆ? ಅಥವಾ ಅದಕ್ಕೆ ಮೊದಲು ತಿಳಿದಿದ್ದಿತೊ?

ಪ್ರಫುಲ್ಲ – ಮೊದಲು ಮೊದಲು ತಿಳಿದಿದ್ದೆನು.

ವ್ರಜೇಶ್ವರ—ಹಾಗಾದರೆ ತಿಳಿದು ಇಲ್ಲಿಗೆ ಬಂದುದೇಕೆ?

ಪ್ರಫುಲ್ಲ—ಇಂದೊತ್ತಡವೆ ನಿನ್ನನ್ನು ನೋಡಬೇಕೆಂದು ಬಂದೆನು.

ವ್ರಜೇಶ್ವರ—ನಿನ್ನ ಸಿಬ್ಬಂದಿಯು ಜನರೆಲ್ಲಿ?

ಪ್ರಫುಲ್ಲ –ಎಲ್ಲರಿಗೂ ಅಪ್ಪಣೆಯನ್ನು ಕೊಟ್ಟು ಕಳುಹಿಸಿಬಿಟ್ಟೆನು. ಅವರೆಲ್ಲರೂ ನನಗೆ ಸಲವಾಗಿ ಸಾಯಲೇಕೆ?

ವ್ರಜೇಶ್ವರ—ದಸ್ತಗಿರಿಯಾಗಲು ಮನಸ್ಸನ್ನು ಸ್ಥಿರಮಾಡಿಕೊಂಡಿರುವಿಯಾ?

ಪ್ರಫುಲ್ಲ—ಬದುಕಿನ್ನೇನಾಗಬೇಕು? ನಿನ್ನನ್ನು ನೋಡಿದುದಾಯಿತು. ನನ್ನ ಮನಸ್ಸಿನಲ್ಲಿದ್ದುದನ್ನೆಲ್ಲಾ ನಿನಗೆ ತಿಳಿಸಿದುದಾಯಿತು. ನೀನು ನನ್ನನ್ನು ಪ್ರೀತಿಸುತ್ತಿಯೆಂದು ತಿಳಿದೆನು. ನನಗಿದ್ದ ಸಂಪತ್ತನ್ನೆಲ್ಲಾ ದಾನಮಾಡಿದೆನು. ಬದುಕಿನ್ನೇನು ಕೆಲಸವನ್ನು ಮಾಡಲಿ? ನನಗೆ ಮತ್ತಾವ ಆಶೆಯುಳಿಯಿತು? ಇನ್ನೇಕೆ ಬದುಕಿರಲಿ?

ವ್ರಜೇಶ್ವರ—ಬದುಕಿದ್ದು ಮನೆಗೆ ಬಂದು ಸಂಸಾರವನ್ನು ಮಾಡಿಕೊಂಡಿರು.

ಪ್ರಫುಲ್ಲ—ಅದು ನಿಜವಾಗಿ ಹೇಳುವ ಮಾತೆ?

ವ್ರಜೇಶ್ವರ—ನೀನೆನ್ನಲ್ಲಿ ಶಪಥಮಾಡಿದೆ. ನೀನಿಂದು ಪ್ರಾಣದಿಂದುಳಿದ ಕೊಂಡರೆ ನಿನ್ನನ್ನು ಮನೆಗೆ ಕರೆದುಕೊಂಡು ಹೋಗಿ ಮನೆಗೆ ಗೃಹಿಣಿಯಾಗಿ ಮಾಡುವೆನೆಂದು ನಾನೂ ಶಪಥಮಾಡುತ್ತೇನೆ.

ಪ್ರಫುಲ್ಲ—ಮಾನಂದಿರು ಏನನ್ನುವರೊ?

ವ್ರಜೇಶ್ವರ— ನಮ್ಮ ತಂದೆಗೆ ಚೆನ್ನಾಗಿ ತಿಳಿಯಹೇಳುವೆನು.

ಪ್ರಫುಲ್ಲ—ಅಯ್ಯೋ! ನಿನ್ನೆ ಈ ಮಾತನ್ನೇಕೆ ಹೇಳಲಿಲ್ಲ.

ವ್ರಜೇಶ್ವರ—ಹೇಳಿದ್ದರೆ ಏನಾಗುತಿದ್ದಿತು?

ಪ್ರಫುಲ್ಲ—ಆ ಮಾತು ನಿನ್ನೆ ತಿಳಿದಿದ್ದರೆ ನನ್ನನ್ನು ಹಿಡಿಯುವುದಾರಿಗೆ ಸಾಧ್ಯವಿದ್ದಿತು?

ವ್ರಜೇಶ್ವರ—ಈಗ?

ಪ್ರಫುಲ್ಲ—ಈಗ ಉಪಾಯವಿಲ್ಲ. ನೀನು ನಿನ್ನ ಹಡಗಿಗೆ ಹೋಗು. ನಿಶಿ, ದಿವಾ ಇಬ್ಬರನ್ನೂ ಜತೆಯಲ್ಲಿ ಕರೆದುಕೊಂಡು ಹೋಗು, ಸಾವಕಾಶ ಮಾಡಕೂಡದು.

ವ್ರಜೇಶ್ವರನು ತನ್ನ ಹಡಗಿನವರನ್ನು ಕೂಗಿದನು. ಹಡಗು ಹತ್ತರ

ಬಂತು. ಬಂದಕೂಡಲೇ ಹಡಗಿನವರಿಗೆ, 'ನೀವು ಬೇಗನೆ ಓಡಿಹೋಗಿರಿ. ಕುಂಪಣಿಯವರ ಹಡಗುಗಳು ಬರುತ್ತವೆ. ನಿಮ್ಮನ್ನೂ ಹಿಡಿಯುವರು. ಓಡಿ ಹೋಗಿರಿ, ನಾನಿಲ್ಲಿಯೇ ಇರುವೆನು' ಎಂದನು.

ಹಡಗಿನವರು ಬೇರೆ ಮಾತನ್ನುಸುರದೆ ಹೊರಟುಹೋದರು. ಅವರ ವ್ರಜೇಶ್ವರನನ್ನು ಕಂಡವರಾಗಿದ್ದ ಕಾರಣ ಸಾಮಾನು ಹೋಗುವುದೆಂಬ ಯೋಚನೆ ಇರಲಿಲ್ಲ.

ಹಡಗು ಹೊರಟುಹೋಯಿತು. ಪ್ರಫುಲ್ಲೆಯು, 'ಹೋಗಲಿಲ್ಲವೇಕೆ? ಎಂದಳು.

ವ್ರಜೇಶ್ವರ—ನಿನಗೆ ಸಾಯುವುದಕ್ಕೆ ಗೊತ್ತಿರಬಹುದಾದರೆ ನನಗೂ ಗೊತ್ತಿಲ್ಲವೆ? ನೀನೆನಗೆ ಹೆಂಡತಿ. ಎಷ್ಟೊಂದು ತಡವೆ ಬೇಕಾದರೂ ನಿನ್ನನು ತ್ಯಾಗಮಾಡಬಹುದು. ಆದರೆ ನಾನು ನಿನಗೆ ಸ್ವಾಮಿ. ವಿಪತ್ತಿನಲ್ಲಿ ಧರ್ಮತಃ ನಾನೇ ರಕ್ಷಕನಾಗಬೇಕು. ಮೊದಲೊತ್ತಡವೆ ರಕ್ಷಿಸಲಸಮರ್ಥನಾದೆನೆಂಬ ಮಾತ್ರಕ್ಕೆ ವಿಪತ್ಕಾಲದಲ್ಲಿ ನಿನ್ನನ್ನು ಬಿಟ್ಟುಹೋಗಬಹುದೆ? ಹಾಗೆ ಹೋಗ ವೆನೆ?

ಪ್ರಫುಲ್ಲೆಯು, ಹಾಗಾದರೆ ಪ್ರಾಣರಕ್ಷಣೆಗಾವದಾದರೂ ಉಪಾಯವಿದ್ದರೆ ಅದನ್ನು ನೋಡುವೆನೆಂದು ಹೇಳುತ್ತ ಆಕಾಶವನ್ನು ಕುರಿತು ನೋಡಿದಳು. ಆಕಾಶವನ್ನು ನೋಡಿದವಳು ಸ್ವಲ್ಪ ಭರವಸೆಯುಳ್ಳವಳಾದಳು. ಆದರೆ ಕೂಡಲೆ ಆ ಭರವಸೆಯು ತಪ್ಪಿಹೋಗಿ, 'ನಾನು ಪ್ರಾಣರಕ್ಷಣೆಯನ್ನು ಮಾಡಿಕೊಂಡರೆ ಮತ್ತೊಂದು ಅಮಂಗಳಕ್ಕೆ ಕಾರಣವಾಗುವುದು' ಎಂದಳು.

ವ್ರಜೇಶ್ವರ—ಏನು?

ಪ್ರಫುಲ್ಲ—ಆ ಮಾತನ್ನು ಹೇಳದಿರಬೇಕೆಂದಿದ್ದೆನು. ಈಗದನ್ನು ಹೇಳದಿರ ವುದಕ್ಕಾಗದು. ಆ ಸಿಪಾಯಿಗಳ ಸಂಗಡ ನಮ್ಮ ಮಾವಂದಿರು ಬಂದಿದ್ದಾರೆ! ನಾನು ಸಿಪಾಯಿಗಳಿಗೆ ಸಿಗದೆ ತಪ್ಪಿಸಿಕೊಂಡರೆ ಅವರಿಗೆ ವಿಪತ್ತುಂಟಾಗುವ ಸಂಭವವುಂಟು.

ವ್ರಜೇಶ್ವರನು ಮೈನಡುಗಿದವನಾಗಿ, 'ಅತನು ಸುದ್ದಿಯನ್ನು ಕೊಟ್ಟು ಹತ್ತೇದಾರನಾಗಿ ಸಿಪಾಯಿಗಳನ್ನು ಕರೆತಂದವನೆ?' ಎಂದು ಕೇಳಿದನು.

ಪ್ರಫುಲ್ಲೆಯು ಸುಮ್ಮನಿದ್ದಳು. ವ್ರಜೇಶ್ವರನಿಗೆ ಗೊತ್ತಾಯಿತು. ಅಂದು ರಾತ್ರಿ ಆ ಸ್ಥಳದಲ್ಲಿ ದೇವೀಚೌಧುರಾಣಿಯನ್ನು ನೋಡುವೆನೆಂದು ವ್ರಜೇಶ್ವರನು ತಂದೆಗೆ ಹೇಳಿದ್ದನು. ಅವನಾ ಮಾತನ್ನು ಮತ್ತಾರಿಗೂ ತಿಳಿಸಿರಲಿಲ್ಲ. ದೇವಿಯು ಗೂಢವಾದ ಯೋಚನೆಯು ಮತ್ತಾರಿಗೂ ಗೊತ್ತಿಲ್ಲ. ದೇವಿಯು ಅಲ್ಲಿಗೆ ಬರು ವುದಕ್ಕೆ ಮೊದಲು ಕುಂಪಣಿಯ ಸಿಪಾಯಿಗಳು ರಂಗಪುರದಿಂದ ಹೊರಟರಬೇಕು. ಅದಕ್ಕೆ ಸಂದೇಹವಿಲ್ಲ. ಇಲ್ಲದಿದ್ದರೆ, ಅಷ್ಟೊಂದು ಬೇಗನೆ ಅವರಲ್ಲಿಗೆ ಬಂದು

ಸೇರುವುದಕ್ಕೆ ಅವಕಾಶವಿರಲಿಲ್ಲ. ಅದಲ್ಲದೆ, ಹರವಲ್ಲಭನು ಮನೆಯಿಂದ ಹೊರಟು ಹೋದವನು ಮನೆಗೆ ಹಿಂದಿರುಗಿ ಬಂದಿರಲಿಲ್ಲ. ಅವರಿಂದ ವ್ರಜೇಶ್ವರನಿಗೆ ಸಂಗತಿಗಳನ್ನೆಲ್ಲಾ ತಿಳಿಯಲು ಸಾವಕಾಶವಾಗಲಿಲ್ಲ. ಅದುಕಾರಣವೇ ಹರವಲ್ಲಭನು ಸಾಲವನ್ನು ಹರಿಸುವ ಪ್ರಯತ್ನವನ್ನು ಜರಗಿಸಲಿಲ್ಲ. ಆದರೂ ವ್ರಜೇಶ್ವರನು—

ಪಿತಾ ಧರ್ಮಃ ಪಿತಾ ಸ್ವರ್ಗಃ ಪಿತಾಹಿ ಪರಮಂ ತಪಃ |
ಪಿತರಿಪ್ರೀತಿಮಾಪನ್ನೇ ಪ್ರೀಯಂತೆ ಸರ್ವದೇವತಾಃ ||

ಎಂಬ ಮಂತ್ರವನ್ನು ಮರೆಯಲಿಲ್ಲ.

ಅವನು ಪ್ರಫುಲ್ಲೆಯನ್ನು ಕುರಿತು, 'ನಾನು ಸತ್ತರೆ ನಷ್ಟವಿಲ್ಲ. ನೀನು ಸತ್ತರೆ ನಾನು ಸತ್ತುದಕ್ಕಿಂತ ಹೆಚ್ಚು. ನಾನದನ್ನು ನೋಡುವುದಕ್ಕೆ ಬರುವುದಿಲ್ಲ. ನಿನ್ನ ಆತ್ಮರಕ್ಷಣೆಗೆ ಮೊದಲು, ನನ್ನೀ ಪ್ರಾಣವನ್ನು ರಕ್ಷಿಸಿಕೊಳ್ಳುವುದಕ್ಕೆ ಮೊದಲು, ನನ್ನ ತಂದೆಯನ್ನು ರಕ್ಷಿಸಿಕೊಳ್ಳಬೇಕು' ಎಂದನು.

ಪ್ರಫುಲ್ಲ—ಆ ವಿಚಾರದಲ್ಲಿ ಯೋಚನೆಯು ಬೇಡ; ನಾನುಳಿಯುವುದಿಲ್ಲ; ಆದುದರಿಂದವರಿಗೇನೂ ಭಯವಿಲ್ಲ; ಅವರು ನಿನ್ನನ್ನು ರಕ್ಷಿಸಿದರೂ ರಕ್ಷಿಸಬಹುದು; ಮತ್ತೂ ಹೇಳುವೆನು, ಏನೆಂದರೆ; ಅವರಿಗೆ ಅಮಂಗಳವುಂಟಾಗುವುದಾದರೆ ನನ್ನ ಪ್ರಾಣರಕ್ಷಣೆಗೆ ಸಲವಾಗಿ ಪ್ರಯತ್ನಪಡುವುದಿಲ್ಲ; ಅದನ್ನು ನಿನ್ನ ಮನಸ್ಸಿನ ಸಂತೋಷಕ್ಕೆ ಸಲವಾಗಿ ಹೇಳುತ್ತೇನೆ! ನೀನು ಹೇಳಿದರೂ ನಾನು ಆತ್ಮರಕ್ಷಣೆ ಮಾಡಿಕೊಳ್ಳುವುದಿಲ್ಲ! ಹೇಳದಿದ್ದರೂ ಪ್ರಯತ್ನಪಡುವುದಿಲ್ಲ; ಅವರ ಕ್ಷೇಮವೇ ಮುಖ್ಯವಾದುದು! ನೀನು ನಿಶ್ಚಿಂತನಾಗಿರಬಹುದು.

ದೇವಿಯು ಆ ಮಾತನ್ನು ತನ್ನ ಅಂತರ್ಯದಿಂದ ಅಕಪಟವಾಗಿ ಹೇಳಿದಳು. ಹರವಲ್ಲಭನೇ ಪ್ರಫುಲ್ಲೆಯ ಸರ್ವನಾಶಕ್ಕೆ ಪ್ರಯತ್ನಪಟ್ಟವನು. ಆಗಲೂ ಆಕೆಯ ಸರ್ವನಾಶಮಾಡುವದರಲ್ಲಿ ಸಿದ್ಧನಾಗಿದ್ದಾನೆ! ಆದರೂ ದೇವಿಯು ಅವನ ಮಂಗಳವನ್ನೇ ಕೋರುವವಳಾಗಿದ್ದಳು. ಏಕೆಂದರೆ, ಪ್ರಫುಲ್ಲೆಯು ನಿಷ್ಕಾಮಳು. ಧರ್ಮವು ನಿಷ್ಕಾಮವಾದುದಾವುದೋ ಅದನ್ನು ಹುಡುಕಿ ನೋಡಬೇಕಾದುದು ಅಂತಹವರಿಗೆ ಮಂಗಳವಾದರೂ ಆಗಬಹುದು.

ಆ ಸಮಯದಲ್ಲಿ ತೀರದಲ್ಲಿದ್ದ ಅರಣ್ಯದಲ್ಲಿ ತುತ್ತೂರಿಯ ಧ್ವನಿಯು ಕೇಳಿತು. ಇಬ್ಬರೂ ಚಮಕಿತರಾದರು.

---

## ನಾಲ್ಕನೆಯ ಪರಿಚ್ಛೇದ

ದೇವಿಯು, ನಿಶಿಯನ್ನು ಕರೆದಳು.

ನಿಶಿಯು ಹಡಗಿನ ಮೇಲುಭಾಗಕ್ಕೆ ಬಂದಳು.

ದೇವಿ—ಅದಾರ ಭೇರಿಯ ಧ್ವನಿ?

ನಿಶಿ—ಬಾಬಾಜಿಯವರೆಂದು ತೋರುತ್ತದೆ.

ದೇವಿ—ರಂಗರಾಜನದೆ ?

ನಿಶಿ—ಹಾಗೆಯೇ ಇದೆ.

ದೇವಿ—ಅದು ಹೇಗೆ : ನಾನು ರಂಗರಾಜನನ್ನು ಬೆಳಗ್ಗೆ ದೇವೀಗಡಕ್ಕೆ ಕಳುಹಿದ್ದೆನು.

ನಿಶಿ—ಮಧ್ಯಮಾರ್ಗದಿಂದವನು ಹಿಂದಿರುಗಿದಂತಿದೆ.

ದೇವಿ—ರಂಗರಾಜನನ್ನು ಕರೆ.

ವ್ರಜೇಶ್ವರ—ಭೇರಿಯ ಧ್ವನಿಯು ಬಹಳ ದೂರದಲ್ಲಿ ಕೇಳಿಸುತ್ತದೆ. ಇಲ್ಲಿಂದ ಕರೆದರೆ ಕೇಳುವುದು ಹೇಗೆ ? ನಾನಿಳಿದುಹೋಗಿ ಭೇರಿಯವರನ್ನು ಕರೆತರುವೆನು.

ದೇವಿ—ಅವಶ್ಯಕವಿಲ್ಲ. ನೀನು ಕೆಳಗೆ ಹೋಗಿ ನಿಶಿಯ ಕೌಶಲವನ್ನು ನೋಡು.

ನಿಶಿಯೂ ವ್ರಜೇಶ್ವರನೂ ಹಡಗಿನ ಮೇಲುಭಾಗದಿಂದ ಕೆಳಗಿಳಿದು ಹೋದರು. ನಿಶಿಯು ಒಂದು ಕೊಳಲನ್ನು ತೆಗೆದುಕೊಂಡಳು. ಅವಳು ಗೀತ ವಾದ್ಯದಲ್ಲಿ ಸಮರ್ಥೆ. ಅದನ್ನವಳು ರಾಜನ ಮನೆಯಲ್ಲಿದ್ದಾಗ ಕಲಿತಿದ್ದಳು. ಅವಳು ದೇವಿಗೆ ವೀಣೆಯನ್ನು ಕಲಿಸಿದವಳು. ನಿಶಿಯು ಕೊಳಲನ್ನು ಬಾಯಿಗಿಟ್ಟು ಮಲ್ಲಾರಿ ರಾಗದಲ್ಲಿ ಊದಿದಳು. ಸ್ವಲ್ಪ ಹೊತ್ತಿನಲ್ಲಿ ರಂಗರಾಜನು ಹಡಗಿನಮೇಲೆ ಹತ್ತಿ ಬಂದನು. ಬಂದು ದೇವಿಗೆ ಆಶೀರ್ವದಿಸಿದನು.

ಆ ಸಮಯದಲ್ಲಿ ವ್ರಜೇಶ್ವರನು ನಿಶಿಯನ್ನು ಕುರಿತು, ' ನೀನು ಹಡಗಿನ ಮೇಲುಭಾಗಕ್ಕೆ ಹೋಗು ; ನಿನ್ನಿಂದಾವ ಮಾತೂ ಮರೆಮಾಡಲ್ಪಡಲಾರದೆಂದು ತೋರುತ್ತದೆ, ಅಲ್ಲಿ ನಡೆಯುವುದನ್ನು ತಿಳಿದು ಬಂದೆನಗೆ ಹೇಳು ' ಎಂದನು.

ನಿಶಿಯು ಒಪ್ಪಿಕೊಂಡು ಕೊಠಡಿಯಿಂದ ಹೊರಗೆ ಬಂದು ಪುನಃ ಒಳಗೆ ಹೋಗಿ, ' ನೀನೇ ಹೊರಗೆ ಬಂದು ನೋಡು ' ಎಂದಳು.

ವ್ರಜೇಶ್ವರನು ಬಾಗಿಲ ಹೊರಗೆ ಮುಖವಿಟ್ಟು ನೋಡಿದನು. ಅಡವಿಯೊಳಗಿನಿಂದ ಅಗಣಿತವಾದ ಮನುಷ್ಯರ ಪ್ರವಾಹವು ಹೊರಡುತ್ತಿದ್ದಿತು. ಅವನು, ' ಅವರು ಸಿಪಾಯಿಗಳೆ ? ' ಎಂದು ಕೇಳಿದನು.

ನಿಶಿ—ಅವರು ಬರಕಂದಾಜ ಸೈನ್ಯವೆಂದು ತೋರುತ್ತದೆ. ರಂಗರಾಜನು ತಂದಿರಬೇಕು.

ದೇವಿಯು ಆ ಮನುಷ್ಯ ಪ್ರವಾಹವನ್ನು ನೋಡುತ್ತಿದ್ದಹಾಗೆ ರಂಗರಾಜನು ಹಡಗಿನ ಮೇಲೆ ಹತ್ತಿ ಬಂದು ಆಶೀರ್ವಾದಮಾಡಿದನು. ದೇವಿಯು ಅವನನ್ನು ನೋಡಿ ' ನೀನೇಕೆ ಇಲ್ಲಿ ಬಂದೆ, ರಂಗರಾಜ ? ' ಎಂದಳು.

ರಂಗರಾಜನು ಮೊದಲು ಏನೊಂದುತ್ತರವನ್ನೂ ಕೊಡಲಿಲ್ಲ. ದೇವಿಯು ಪುನಃ, ' ನಾನು ಬೆಳಗ್ಗೆ ನಿನ್ನನ್ನು ದೇವೀಗಡಕ್ಕೆ ಕಳುಹಿದ್ದೆನು. ಅಲ್ಲಿಗೆ ಹೋಗಲಿಲ್ಲವೆ ? ನನ್ನ ಅಪ್ಪಣೆಯನ್ನು ನಡೆಯಿಸಲಿಲ್ಲವೇಕೆ ? ಎಂದಳು.

ರಂಗರಾಜ—ನಾನು ದೇವೀಗಡಕ್ಕೆ ಹೋಗುತಿದ್ದೆನು. ಮಾರ್ಗದಲ್ಲಿ ಠಾಕೂರಜಿಯವರನ್ನು ಕಂಡೆನು.

ದೇವಿ—ಭವಾನಿಠಾಕೂರರೆ ?

ರಂಗ—ತಮ್ಮನ್ನು ಹಿಡಿಯುವುದಕ್ಕೆ ಕುಂಪಣಿಯ ಸಿಪಾಯಿಗಳು ಬರುವರೆಂದು ಹೇಳಿದರು. ಅದು ಕಾರಣ ನಾವಿಬ್ಬರೂ ಬರಕಂದಾಜ ಸೈನ್ಯವನ್ನು ಕೂಡಿಹಾಕಿಕೊಂಡು ಬಂದೆವು. ಸೈನ್ಯವನ್ನು ಅರಣ್ಯದಲ್ಲಿ ಮರೆಮಾಡಿಟ್ಟು ನಾನು ಬಂದು ದಡದಲ್ಲಿ ಕುಳಿತಿದ್ದೆನು. ಹಡಗುಗಳು ಬರುವುದನ್ನು ನೋಡಿ ಭೇರಿಯ ತಾಡನೆಯಿಂದ ಸಂಕೇತಮಾಡಿದೆನು.

ದೇವಿ—ಅರಣ್ಯದಲ್ಲಿಯೂ ಸಿಪಾಯಿಗಳಿದ್ದಾರೆಯೆ ?

ರಂಗ—ಅವರನ್ನು ನಾವು ಸುತ್ತುಗಟ್ಟಿ ಹೊರಗೆ ಬಾರದಂತೆ ಮಾಡಿದ್ದೇವೆ.

ದೇವಿ—ಠಾಕೂರಜಿಯವರು ಎಲ್ಲಿ ?

ರಂಗ—ಬರಕಂದಾಜ ಸೈನ್ಯವನ್ನು ತೆಗೆದುಕೊಂಡು ಅಡವಿಯಿಂದ ಹೊರಕ್ಕೆ ಹೊರಡುತ್ತಾರೆ.

ದೇವಿ—ಎಷ್ಟುಮಂದಿ ಬರಕಂದಾಜ ಸೈನ್ಯವನ್ನು ತಂದಿದ್ದೀರಿ ?

ರಂಗ—ಹೆಚ್ಚು ಕಡಿಮೆ ಸಾವಿರ ಸೈನ್ಯವಿರಬಹುದು.

ದೇವಿ—ಕುಂಪಣಿಯ ಸೈನ್ಯವೆಷ್ಟು ?

ರಂಗ—ಐನೂರೆಂದು ಕೇಳಿದೆನು.

ದೇವಿ—ಈ ಸಾವಿರದೈನೂರು ಜನರಲ್ಲಿ ಯುದ್ಧವಾದರೆ ಎಷ್ಟು ಮಂದಿ ಸಾಯುವರು.

ರಂಗ—ಮುನ್ನೂರು ನಾನೂರು ಮಂದಿ ಸತ್ತರೂ ಸಾಯಬಹುದು.

ದೇವಿ—ಹೋಗಿ ಠಾಕೂರಜಿಯವರಿಗೂ ಹೇಳು—ನೀನೂ ತಿಳಿಯಬೇಕು, ಏನೆಂದರೆ—ನಿಮ್ಮ ಆಚರಣೆಯಿಂದೆನ್ನ ಮನಸಿಗೆ ಬಹಳ ಸಂಕಟವುಂಟುಮಾಡಿದ ಹಾಗಾಯಿತು.

ರಂಗ—ಏಕೆ, ಮಹಾತಾಯಿ !

ದೇವಿ—ಒಬ್ಬ ಹೆಂಗಸಿನ ಪ್ರಾಣಕ್ಕೆ ಸಲವಾಗಿ ನೀವು ಅಷ್ಟೊಂದು ಮಂದಿ ಜನರನ್ನು ಕೊಲ್ಲಬೇಕೆಂದೆಣಿಸಿರುವಿರಿ. ನಿಮಗೆ ಸ್ವಲ್ಪವೂ ಧರ್ಮಜ್ಞಾನವಿಲ್ಲವೆ ? ನನಗೆ ಆಯುಸ್ಸು ತೀರಿತು. ನಾನೊಬ್ಬಳೇ ಸಾಯುವೆನು—ನನ್ನೊಬ್ಬಳಿಗೆ ಸಲವಾಗಿ ನಾನೂರುಮಂದಿ ಜನರು ಸಾಯಬೇಕೆ ? ನಾನು ಅಷ್ಟು ಜನರ ಪ್ರಾಣವನ್ನು ನಾಶ ಮಾಡಿ ಸ್ವಂತ ಪ್ರಾಣವನ್ನು ರಕ್ಷಿಸಿಕೊಳ್ಳುವಷ್ಟು ಅಪದಾರ್ಥಳೆಂದು ತಿಳಿದಿರಾ ?

ರಂಗ—ತಾವು ಪ್ರಾಣದಿಂದಿದ್ದರೆ ಅನೇಕ ಪ್ರಾಣವುಳಿದುಕೊಳ್ಳುವುದು.

ದೇವಿಯು ಹೆಚ್ಚು ತಾಳಲಾರದೆ ಅಧೀರೆಯಾಗಿ ತಿರಸ್ಕಾರಮಾಡಿ ಕೋಪಗೊಂಡು, ‘ ಛೀ ! ’ ಎಂದಳು. ಆ ಧಿಕ್ಕಾರದಿಂದ ರಂಗರಾಜನು ಮುಖತಗ್ಗಿದವನಾಗಿ

ಮನಸ್ಸಿನಲ್ಲಿ ಭೂಮಿಯು ಬಾಯಿಬಿಟ್ಟರೆ ಅದರೊಳಗೆ ಪ್ರವೇಶಮಾಡಿಬಿಡುವೆನೆಂದು ಯೋಚಿಸಿದನು.

ಆಗ ದೇವಿಯು ವಿಸ್ಫಾರಿತ ನಯನಗಳುಳ್ಳವಳಾಗಿ, ತಿರಸ್ಕಾರದಿಂದ ಸ್ಫೂರಿತ ವಾದ ಕಂಪಿತಾಧರವುಳ್ಳವಳಾಗಿ, 'ಕೇಳು, ರಂಗರಾಜ! ಹೋಗಿ, ಠಾಕೂರಜಿ ಯವರಿಗೆ ಹೇಳು; ಈ ಮಹೂರ್ತದಲ್ಲಿ ಬರಕಂದಾಜ ಸೈನ್ಯವನ್ನೆಲ್ಲಾ ತೆಗೆದು ಕೊಂಡು ಹಿಂದಿರುಗಿ ಹೋಗಬೇಕು. ತಿಲಾರ್ಧ ಸಾವಕಾಶಮಾಡಿದರೂ ನಾನೀ ನೀರಿನಲ್ಲಿ ಧುಮುಕಿ ಪ್ರಾಣವನ್ನು ಬಿಡುವೆನು. ನಿಮ್ಮನ್ನಾರನ್ನೂ ನನ್ನಲ್ಲಿಟ್ಟು ಕೊಳ್ಳುವುದಿಲ್ಲವೆಂದು ಹೇಳು' ಎಂದು ಅಪ್ಪಣೆಯನ್ನು ಮಾಡಿದಳು.

ರಂಗರಾಜನು ಅಲ್ಲಿಂದ ಹೊರಟು, ಹೋಗುತ್ತ, ಇದೊ, 'ಹೊರಟೆನು! ಠಾಕೂರಜಿಯವರಿಗ ತಿಳಿಸುವೆನು; ಅವರಾವದು ಸರಿಯೆಂದು ತಿಳಿಯುವರೊ ಹಾಗೆ ಮಾಡುವರು. ನಾನಿಬ್ಬರಿಗೂ ಆಜ್ಞಾಧಾರಕನು' ಎಂದು ಹೇಳಿದನು.

ರಂಗರಾಜನು ಹೊರಟುಹೋದನು. ನಿಶಿಯು ಹಡಗಿನ ಮೇಲುಭಾಗದಲ್ಲಿ ನಿಂತು ಕೇಳುತಿದ್ದವಳು, 'ನಿನ್ನ ಸ್ವಂತ ಪ್ರಾಣದ ವಿಚಾರದಲ್ಲಿ ನಿನ್ನಿಷ್ಟವಿದ್ದಂತೆ ಮಾಡಬಹುದು. ಅದಕ್ಕಾಕ್ಷೇಪಿಸುವುದಕ್ಕಾರಿಗೂ ಅಧಿಕಾರವಿಲ್ಲ. ಆದರೆ ನಿನ್ನ ಸಂಗಡ ನಿನ್ನ ಸ್ವಾಮಿ—ಆತನಿಗೆ ಸಲವಾದರೂ ಯೋಚಿಸಬೇಡವೆ?' ಎಂದಳು.

ದೇವಿ—ಯೋಚಿಸಿದ್ದೇನೆ, ತಂಗಿ! ಯೋಚಿಸಿ ಏನನ್ನೂ ಮಾಡಲಾರೆನು. ಜಗ ದೀಶ್ವರನೊಬ್ಬನೇ ಭರವಸೆ—ಆಗತಕ್ಕುದು ಆಗಿಯೇ ತೀರುವುದು. ಏನಾದರೂ ಆಗಲಿ, ನಿಶಿ! ಮುಖ್ಯವಾದ ಮಾತೇನೆಂದರೆ, ನನ್ನ ಸ್ವಾಮಿ ಪ್ರಾಣವನ್ನು ರಕ್ಷಿ ಸಲು ಅಷ್ಟೊಂದು ಪ್ರಾಣವನ್ನು ನಷ್ಟಪಡಿಸುವುದಕ್ಕೆನಗಾವ ಅಧಿಕಾರವೂ ಇಲ್ಲ. ನನ್ನ ಸ್ವಾಮಿಯು ನನಗೆ ಆದರಾಸ್ಪದ—ಅವರಿಗೆ ಆತನಾರು?

ನಿಶಿಯು ದೇವಿಯನ್ನು ಮನಸ್ಸಿನಲ್ಲಿ, 'ನೀನೇ ಧನ್ಯಳು?' ಎಂದಂದು ಕೊಂಡು, 'ಇವಳೇ ಸಾರ್ಥಕವಾದ, ನಿಷ್ಕಾಮ ಧರ್ಮವನ್ನು ಕಲಿತವಳು! ಈಕೆಯು ಸಂಗಡ ಸಾಯುವುದೂ ಸುಖ'ವೆಂದು ಯೋಚಿಸಿಕೊಂಡಳು.

ನಿಶಿಯು ಹೋಗಿ ನಡೆದುದನ್ನೆಲ್ಲಾ ವ್ರಜೇಶ್ವರನಿಗೆ ತಿಳಿಸಿದಳು. ವ್ರಜೇಶ್ವ ರನು ಪ್ರಫುಲ್ಲೆಯನ್ನು ತನ್ನ ಹೆಂಡತಿಯೆಂದು ಭಾವಿಸಲಾರದೆ, ಆಕೆಯು ಯಥಾರ್ಥ ದೇವಿಯೆಂತಲೇ ತಿಳಿದು, 'ನಾನು ಕೇವಲ ನರಾಧಮನು! ಅಂತಹವನು ಆಕೆ ಯನ್ನು ಡಕಾಯಿತಿಯೆಂದು ಭರ್ತ್ಸನೆಮಾಡುವುದಕ್ಕೆ ಹೋದೆನಲ್ಲ!' ಎಂದಂದು ಕೊಂಡನು.

ಇತ್ತಲಾಗಿ ಐದು ಹಡಗುಗಳು ಬಂದು ದೇವಿಯ ಹಡಗನ್ನು ಐದು ಕಡೆ ಯಿಂದಲೂ ಸುತ್ತುಗಟ್ಟಿದವು. ದೇವಿಯು ಅತ್ತಕಡೆ ನೋಡುವುದಕ್ಕೂ ತಿರುಗ ಲಿಲ್ಲ. ಪ್ರಸ್ತರಮಯಿಯಾದ ಪ್ರತಿಮೆಯಂತೆ ಕದಲದೆ ಹಡಗಿನ ಮೇಲು ಭಾಗ ದಲ್ಲಿ ಕುಳಿತಿದ್ದಳು. ಪ್ರಫುಲ್ಲೆಯು ಹಡಗುಗಳನ್ನು ನೋಡುತ್ತಿರಲಿಲ್ಲ. ತನ್ನ

ಬರಕಂದಾಜ ಸೈನ್ಯವನ್ನೂ ನೋಡುತ್ತಿರಲಿಲ್ಲ. ದೂರ ಆಕಾಶದಲ್ಲಿ ದೃಷ್ಟಿಯುಳ್ಳವಳಾಗಿದ್ದಳು. ದೂರಾಕಾಶದಲ್ಲಿ ಸಣ್ಣದಾದೊಂದು ಮೋಡವು ಬಹಳ ಹೊತ್ತಿನಿಂದ ಕಾಣುತಿದ್ದಿತು. ಪ್ರಫುಲ್ಲೆಯು ಅದನ್ನೇ ನೋಡುತ್ತಿದ್ದಳು. ನೋಡುತ್ತಿದ್ದ ಹಾಗೆ ಆ ಮೋಡವು ದೊಡ್ಡದಾಯಿತು. ಆಗವಳು 'ಜಯ ಜಗದೀಶ್ವರ!' ಎಂದು ಹೇಳಿ ಅಲ್ಲಿಂದೆದ್ದು ಇಳಿದು ಕೆಳಗಿನ ಕೊಠಡಿಗೆ ಹೋದಳು.

ಪ್ರಫುಲ್ಲೆಯು ಕೊಠಡಿಗೆ ಬಂದುದನ್ನು ನೋಡಿ ನಿಶಿಯು, 'ಈಗ ಮಾಡುವದೇನು ?' ಎಂದಳು.

ಪ್ರಫುಲ್ಲ—ಈಗೆನ್ನ ಸ್ವಾಮಿಯನ್ನುಳಿಸುವೆನು.

ನಿಶಿ—ನೀನೊ ?

ದೇವಿ—ನನ್ನ ಮಾತನ್ನು ಕುರಿತು ಕೇಳಬೇಡ. ನಾನು ಏನನ್ನು ಮಾಡುವೆನೋ ಏನನ್ನು ಹೇಳುವೆನೋ ಅದನ್ನು ಗಮನವಿಟ್ಟು ನೋಡಿಕೊಂಡಿರು. ನನ್ನ ಅದೃಷ್ಟದಲ್ಲಿದ್ದುದು ಆಗಿಹೋಗುವುದು. ನನ್ನ ಸ್ವಾಮಿಯನ್ನು ಬದುಕಿಸುವೆನು. ಮಾನಂದಿರನ್ನು ರಕ್ಷಿಸುವೆನು. ದಿವಿಯನ್ನೂ ರಕ್ಷಿಸುವೆನು.

ಹೀಗೆಂದು ಹೇಳಿ ದೇವಿಯು ಒಂದು ಶಂಖವನ್ನು ತೆಗೆದುಕೊಂಡದನ್ನೂದಿದಳು. ನಿಶಿಯು, 'ಅದು ಒಳ್ಳೆಯ ಕೆಲಸ' ವೆಂದಳು.

ದೇವಿಯು, 'ಒಳ್ಳೇದೋ ಕೆಟ್ಟುದುದೋ ವಿವೇಚನೆ ಮಾಡಿ ನೋಡು. ನಾನು ಮಾಡುವುದನ್ನೆಲ್ಲಾ ನಿನಗೆ ಹೇಳಿ ಮಾಡುವೆನು. ಭಾರವೆಲ್ಲಾ ನಿನ್ನ ಮೇಲಿರುವುದು' ಎಂದಳು.

——o——

## ಐದನೆಯ ಪರಿಚ್ಛೇದ

ಇರಿವೆ ಸಾಲಿಟ್ಟಂತೆ ಬರಕಂದಾಜ ಸೈನ್ಯದವರು ಗಂಗಾನದಿಯ ತೀರದಲ್ಲಿದ್ದ ವ ನ ದಿ ೦ ದ ಹೊರಗಾಗಲಾರಂಭಿಸಿದರು. ತಲೆಯ ಮೇಲೆ ಕೆಂಪು ರುಮಾಲು; ಕರಿ ಕವಚಾ, ಚಡ್ಡಿ, ಬರಿ ಕಾಲು, ನೀರಿನಲ್ಲಿ ಯುದ್ಧಮಾಡಬೇಕಾಗುವುದೆಂಬುದರ ಮೇಲೆ ಆರೂ ಕಾಲಿಗೆ ಜೋಡನ್ನು ಮೆಟ್ಟಿರಲಿಲ್ಲ. ಕೆಲವರ ಕೈಯಲ್ಲಿ ಗುರಾಣಿ, ಕತ್ತಿ, ಕೆಲವರಲ್ಲಿ ಬಂದೂಕು, ಬಂದೂಕುಗಳುಳ್ಳವರು ಬಹಳ ಮಂದಿ ಇರಲಿಲ್ಲ. ಪ್ರತಿಯೊಬ್ಬನಲ್ಲಿಯೂ ಒಂದೊಂದು ದೊಣ್ಣೆ. ಅದು ಬಂಗಾಳಿಯವರಿಗೆ ಸರ್ವಥಾ ಇರತಕ್ಕ ಆಯುಧ. ಬಂಗಾಳಿಯವರಿಗೆ ಅದರ ವ್ಯವಹಾರವು ಚೆನ್ನಾಗಿ ಗೊತ್ತು. ಕೈತಿ ದೊಣ್ಣೆ ಇಲ್ಲದಿದ್ದರೆ ಬಂಗಾಳಿಯವರು ನಿರ್ಜೀವಿಗಳು.

ಬರಕಂದಾಜ ಸೈನ್ಯದವರು ನೋಡುತ್ತಿದ್ದ ಹಾಗೆ ಇಂಗ್ಲೀಷರ ಹಡಗುಗಳೆಲ್ಲಾ ಬಂದುವು; ದೇವಿಯ ಹಡಗನ್ನು ಆಕ್ರಮಣ ಮಾಡುವುವು! ಬರ

ಕಂದಾಜ ಸೈನ್ಯದವರು ದೌಡು ಬಂದರು. ಬಂದು, 'ರಾಣಿಜಿಗೆ ಜಯವಾಗಲಿ!' ಎಂದು ಜಯಧ್ವನಿಯನ್ನು ಮಾಡುತ್ತ ದೇವಿಯ ಹಡಗನ್ನು ಸುತ್ತಗಟ್ಟಿ ನಿಂತರು. ಹಡುಗುಗಳು ಅವರ ಸುತ್ತಲೂ ನಿಂತುವು. ಆ ಸಮಯದಲ್ಲಿ ಶಂಖ ಧ್ವನಿಯು ಕೇಳಿಸಿ ಆ ಕೂಡಲೇ ಬರಕಂದಾಜರಲ್ಲಿ ಕೆಲವರು ದೇವಿಯ ಹಡಗಿನ ಮೇಲೆ ಹತ್ತಿದರು. ಅವರು ನಾವಿಕರ ಕೆಲಸವನ್ನೂ ಮಾಡಬಲ್ಲರು; ಆವಶ್ಯಕಬಿದ್ದಾಗ ದೊಣ್ಣೆ ಕತ್ತಿಗಳನ್ನೂ ಉಪಯೋಗಿಸತಕ್ಕವರಾಗಿದ್ದರು. ಅವರಾರೂ ಯುದ್ಧ ದಲ್ಲಿ ಪ್ರವೃತ್ತಿಯನ್ನು ತೋರಲಿಲ್ಲ. ಅಲ್ಲಲ್ಲಿ ಹಗ್ಗ ಮುಂತಾದುವುಗಳನ್ನು ಹಿಡಿದುಕೊಂಡು ಕುಳಿತರು. ಮತ್ತೆ ಕೆಲವರು ಹಡಗನ್ನೇರಿದರು. ಮುನ್ನೂರು ನಾನೂರು ಮಂದಿ ಬರಕಂದಾಜರು ತೀರದಲ್ಲಿ ನಿಂತು ಕತ್ತಿ, ಭಲ್ಲೆಯನ್ನು ಚಲಾ ಯಿಸುತ್ತಿದ್ದರು. ಅದನ್ನು ಕಂಡು ಕೆಲವು ಸಿಪಾಯಿಗಳು ದೇವಿಯ ಹಡಗನ್ನು ಸುತ್ತುಗಟ್ಟಿದ್ದವರನ್ನು ಆಕ್ರಮಣ ಮಾಡಿದರು. ಎಲ್ಲೆಲ್ಲಿಯೂ ಕೈಗೆ ಕೈಕಲಿತು ಯುದ್ಧವು ಪ್ರಾರಂಭವಾಯಿತು. ಜಟಾಪಟಿ, ಮಾರಾಮಾರಿ, ಬಂದೂಕುಗಳು ದಡಬಡ ಶಬ್ದ, ದೊಣ್ಣೆಗಳ ಲಟಾಪಟಿ ಶಬ್ದ, ಮುಂತಾಗಿ ಬಹಳ ಗದ್ದಲವು ಹತ್ತಿತು. ಒಬ್ಬರ ಮಾತನ್ನೊಬ್ಬರು ಕೇಳರು. ಒಬ್ಬರೂ ಒಂದು ಸ್ಥಳದಲ್ಲಿ ನಿಲ್ಲಲಿಲ್ಲ.

ಬರಕಂದಾಜ ಸೈನ್ಯವು ದೂರ ನಿಂತು ದೊಣ್ಣೆಗಳಿಂದ ಸಿಪಾಯಿಗಳ ಸಂಗಡ ಯುದ್ಧವನ್ನು ಮಾಡಲಾಗದು. ದೊಣ್ಣೆಯು ದೂರಕ್ಕೆ ವ್ಯಾಪಿಸದು. ಆದರೆ ಸಿಪಾ ಯಿಗಳು ಹಡಗಿನ ಮೇಲೆ ಹೆಚ್ಚು ಹೊತ್ತು ನಿಂತು ಯುದ್ಧವನ್ನು ನಡೆಯಿಸಲು ಅನಾನುಕೂಲವಾಯಿತು. ತೀರದಲ್ಲಿಳಿದು ಸಿಪಾಯಿಗಳು ಸಂಗೀನುಗಳಿಂದ ದೊಣ್ಣೆ ಯವರನ್ನು ತಳ್ಳಿ ತಡೆದರು. ನೀರಿನಲ್ಲಿ ನಿಂತು ಯುದ್ಧಮಾಡುತ್ತಿದ್ದ ಸಿಪಾಯಿ ಗಳು ದೊಣ್ಣೆಯ ಪೆಟ್ಟನ್ನು ತಡೆಯಲಾರದೆ ಕೈಕಾಲುಗಳು ಮುರಿದು ತಲೆ ಯೊಡೆದು ಹೋದವರಾಗಿ ಗಾಬರಿ ಬಿದ್ದರು.

ಪ್ರಫುಲ್ಲೆಯು ಹಡಗಿನ ಮೇಲು ಭಾಗದಿಂದಿಳಿದು ಕೆಳಗಿನ ಕೋಣೆಗೆ ಹೋಗಿ ಸೇರುವುದರೊಳಗಾಗಿ ಗದ್ದಲಕ್ಕೆ ಪ್ರಾರಂಭವಾಯಿತು! ಪ್ರಫುಲ್ಲೆಯು ಮನಸ್ಸಿನಲ್ಲಿ, ತಾನು ಹೇಳಿ ಕಳುಹಿದ ಮಾತು ಭವಾನಿಠಾಕೂರನಿಗೆ ತಪ್ಪಿರ ಬಹುದೆಂತಲೂ ಅಥವಾ ಅವನು ತನ್ನ ಮಾತಿಗೊಪ್ಪದಿರಬಹುದೆಂತಲೂ ತಾನು ಪ್ರಾಣವನ್ನು ಬಿಡಲಿಷ್ಟವುಳ್ಳವಳಾಗಿಲ್ಲವೆಂದು ಆತನು ತಿಳಿದಿರಬಹುದೆಂತಲೂ ಯೋಚಿಸಿ, 'ಒಳ್ಳೇದು, ನಾನು ಮಾಡುವ ಕೆಲಸವನ್ನವನು ನೋಡಲಿ' ಎಂದಂದುಕೊಂಡಳು.

ದೇವಿಯಲ್ಲಿ ರಾಣಿಗಿರಿಯ ಸಂಬಂಧವಾದ ಕೆಲವು ಚಮತ್ಕಾರ ಗುಣಗಳಿ ದ್ದುವು. ಅವುಗಳಲ್ಲಿ ಆವಶ್ಯಕವಿರುವ ಸಾಮುಗ್ರಿಗಳನ್ನು ಮೊದಲು ಶೇಖರಮಾಡಿ ಹತ್ತರ ಇಟ್ಟಕೊಂಡಿರುವುದೊಂದು ಗುಣ! ಆ ಗುಣವು ಅನೇಕ ತಡವೆ ವ್ಯಕ್ತ ಪಟ್ಟಿದೆ. ಅವಳಿಟ್ಟುಕೊಂಡಿದ್ದೊಂದು ಬಿಳೀ ಬಾವುಟಿಯನ್ನು ತೆಗೆದುಕೊಂಡು

ಕೊಠಡಿಯಿಂದ ಹೊರಗೆ ಬಂದು ಅದನ್ನು ಮೇಲಕ್ಕೆತ್ತಿ ಎತ್ತರವಾಗಿ ಹಿಡಿದು ಕೊಂಡಳು.

ಆ ಬಾವಟೆಯನ್ನು ಕಂಡಕೂಡ್ಲೆ ಯುದ್ಧವು ಒಮ್ಮಿಂದೊಮ್ಮೆ ನಿಂತು ಹೋಯಿತು. ಯುದ್ಧವನ್ನು ಮಾಡುತ್ತಿದ್ದವರು ಆಯುಧಗಳನ್ನು ಚಾಲನ ಮಾಡದೆ ನಿಂತೆಡೆ ನಿಂತುಕೊಂಡರು. ಉತ್ಪಾತಕಗಳನ್ನು ಮಾಡುತಿದ್ದ ಪ್ರಚಂಡ ಚಂಡಮಾರುತವು ಒತ್ತಡವೆಗೆ ಅಕಸ್ಮಾತ್ತಾಗಿ ನಿಂತುಹೋಯಿತೋ, ಪ್ರಮತ್ತ ವಾಗಿ, ಘೋರ ಗರ್ಜಿಸುತ್ತಿದ್ದ ಸಮುದ್ರವು ಹಠಾತ್ತಾಗಿ ಪ್ರಶಾಂತ ತಟಾಕ ವಾಗಿ ಪರಿಣಮಿಸಿತೋ ಎಂಬಂತೆ ಎಲ್ಲಾ ಗದ್ದಲವೂ ಅಡಗಿಹೋಯಿತು.

ದೇವಿಯು ತಿರುಗಿ ನೋಡಿದಳು. ಪಾರ್ಶ್ವದಲ್ಲಿ ವ್ರಜೇಶ್ವರನಿದ್ದನು. ದೇವಿಯು ಕೊಠಡಿಯಿಂದ ಹೊರಗೆ ಹೊರಟಾಗ ಆವಳ ಸಂಗಡ ಬಂದಿದ್ದನು. ಆತನನ್ನು ನೋಡಿ ದೇವಿಯು, 'ನೀನೀ ಬಾವಟೆಯನ್ನು ಹೀಗೆಯೇ ಹಿಡಿದಿರು. ನಾನು ಹೋಗಿ ದಿವಾ ನಿಶಿ ಇವರ ಸಂಗಡ ಆಲೋಚಿಸಬೇಕಾಗಿದೆ. ರಂಗರಾಜನು ಬಂದರೆ ಕೊಠಡಿಯ ಬಾಗಿಲಲ್ಲಿಯೇ ನಿಂತು ನನ್ನ ಅಪ್ಪಣೆಯನ್ನು ಪಡೆಯ ಬೇಕೆಂದು ಹೇಳು' ಎಂದಳು.

ಹೀಗೆಂದು ಹೇಳಿ ವ್ರಜೇಶ್ವರನ ಕೈಯಲ್ಲಿ ಬಾವಟೆಯನ್ನು ಕೊಟ್ಟು ಹೊರಟು ಹೋದಳು. ವ್ರಜೇಶ್ವರನು ಬಾವಟೆಯನ್ನು ಹಿಡಿದು ನಿಂತನು. ಅಷ್ಟರೊಳಗೆ ರಂಗರಾಜನಲ್ಲಿಗೆ ಬಂದವನು, ವ್ರಜೇಶ್ವರನನ್ನು ನೋಡಿ, 'ನೀನಾರ ಅಪ್ಪಣೆಯ ಪ್ರಕಾರ ಬಿಳೀ ಬಾವಟೆಯನ್ನು ತೋರಿದೆ?' ಎಂದು ಕೇಳಿದನು.

ವ್ರಜೇಶ್ವರ—ರಾಣಿಜಿಯವರ ಅಪ್ಪಣೆಯ ಪ್ರಕಾರ.

ರಂಗರಾಜ—ರಾಣಿಯವರ ಅಪ್ಪಣೆಯೆ? ನೀನಾರು?

ವ್ರಜೇಶ್ವರ—ಗೊತ್ತಿಲ್ಲವೆ?

ರಂಗರಾಜನು ಸ್ವಲ್ಪ ದೃಷ್ಟಿಸಿ ನೋಡಿ, ಗೊತ್ತಾಯಿತು. ನೀನು ವ್ರಜೇ ಶ್ವರ ಬಾಬುವೊ? ಇಲ್ಲಿಗೆ ಬಂದುದೇನು? ತಂದೆ ಮಕ್ಕಳಿಬ್ಬರೂ ಒಂದೇ ಕೆಲಸಕೆ ಬಂದಿರೊ? ನಿನ್ನನ್ನಿಲ್ಲಿಗೆ ಬಿಟ್ಟವರಾರು? ನಿನ್ನನ್ನು ಕಟ್ಟಿಹಾಕಕೂಡದೇಕೆ? ಎಂದನು.

ವ್ರಜೇಶ್ವರನು ಹರವಲ್ಲಭನಂತೆ ದೇವಿಯನ್ನು ಹಿಡಿಸವುದಕ್ಕೊಂದು ನೆಪ ಮಾಡಿಕೊಂಡು ಹಡಗಿನ ಮೇಲೆ ಹತ್ತಿ ಬಂದಿದ್ದನೆಂದು ತಿಳಿದು ರಂಗರಾಜನು ದೇವಿಯ ಅಪ್ಪಣೆಯನ್ನು ಪಡೆದು ಅವನನ್ನು ಕಟ್ಟಿಹಾಕುವುದಕ್ಕೆ ಸಲವಾಗಿ ಬಂದನು.

ವ್ರಜೇಶ್ವರನು, 'ಕಟ್ಟಿ ಹಾಕುವುದಕ್ಕೆ ಆಕ್ಷೇಪಣೆಯಿಲ್ಲ. ಆದರೆ ಒಂದು ಮಾತನ್ನು ಕೇಳುವೆನು. ಬಿಳೀಬಾವಟೆಯನ್ನು ಹಿಡಿದ ಮಾತ್ರಕ್ಕೆ ಯುದ್ಧವು ನಿಂತಿತೇಕೆ? ಅದನ್ನು ಹೇಳಿ, ನನ್ನನ್ನು ಕಟ್ಟಿಹಾಕಬಹುದು' ಎಂದನು.

ರಂಗ—ನೀನು ನಿನ್ನೆ ಕಣ್ಣುಬಿಟ್ಟ ಅಳುಗೂಸು! ಇಂಗ್ಲೀಷರು ಬಿಳೀ ಬಾವಟೆಯನ್ನು ನೋಡಿದರೆ ಯುದ್ಧಮಾಡುವುದಿಲ್ಲವೆಂಬುದು ಗೊತ್ತಿಲ್ಲವೆ?

ವ್ರಜೇಶ್ವರ—ನನಗದು ಗೊತ್ತಿರಲಿಲ್ಲ. ನಾನು ತಿಳಿದೇ ಮಾಡಿದೆನೋ ತಿಳಿಯದೇ ಮಾಡಿದೆನೋ ಅದು ಕಾರ್ಯಕಾರಿಯಲ್ಲ. ನಾನು ರಾಣಿಯವರ ಅಪ್ಪಣೆಯಿಲ್ಲದೆ ಬಿಳೀ ಬಾವಟೆಯನ್ನು ಹಿಡಿದೆನೋ ಅಥವಾ ಅಪ್ಪಣೆಯ ಪ್ರಕಾರ ಹಿಡಿದೆನೋ ಹೋಗಿ ಅವರನ್ನೇ ಕೇಳು. ಆದರೆ ಕೇಳಬೇಕಾದರೆ ಹೊರಗೆ ನಿಂತು ಅಪ್ಪಣೆಯನ್ನು ಪಡೆಯಬೇಕೆಂದು ನಿನಗೆ ತಿಳಿಸುವಂತೆ ಹೇಳಿದ್ದಾರೆ; ಹಾಗೆ ಮಾಡು.

ರಂಗರಾಜನು ಕೊಠಡಿಯ ಬಳಿಗೆ ಹೋದನು. ಬಾಗಿಲು ಹಾಕಿದ್ದಿತು. ಹೊರಗೆ ನಿಂತು, 'ಮಹಾತಾಯಿ, ರಾಣಿಜಿ!' ಎಂದು ಕರೆದನು.

ಒಳಗಿನಿಂದ—ರಂಗರಾಜನೆ?

ಅಹುದು, ಮಹಾತಾಯಿ! ನಮ್ಮ ಹಡಗಿನಿಂದೊಂದು ಬಿಳೀಬಾವಟೆಯನ್ನು ಹಿಡಿದಂತೆ ಕಂಡಿತು. ಅದುಕಾರಣ ಯುದ್ಧವು ನಿಂತಿದೆ.'

ಒಳಗಿನಿಂದ—ನನ್ನ ಅಪ್ಪಣೆಯಂತೆ ಆದುದು. ಈಗ ನೀನಾ ಬಿಳೀ ಬಾವಟೆಯನ್ನು ಹಿಡಿದು ಲೆಫಟನೆಂಟು ಸಾಹೆಬನ ಬಳಿ ಹೋಗು. ಹೋಗಿ ಯುದ್ಧದಿಂದ ಪ್ರಯೋಜನವಿಲ್ಲ. ನಾನಾಗಿಯೇ ಇಂಗ್ಲೀಷರಿಗೊಪ್ಪಿಸಿಕೊಳ್ಳುವೆನೆಂದು ಹೇಳು.

ರಂಗ—ನಮ್ಮ ಶರೀರದಲ್ಲಿ ಪ್ರಾಣವಿರುವತನಕ ಅಂತಹದು ದಾವದೂ ಆಗದು.

ದೇವಿ—ನಿಮ್ಮ ದೇಹಬಿದ್ದರೂ ನನ್ನನ್ನು ರಕ್ಷಿಸಲಾರಿರಿ.

ರಂಗ—ಆದರೂ ಶರೀರವಿರುವತನಕ ಹೆಣಗಾಡುವೆವು

ದೇವಿ—ಕೇಳು, ಮೂರ್ಖರಂತೆ ಮುಸ್ಸುರವು ಬೇಡ. ನೀವು ಪ್ರಾಣವನ್ನು ಕೊಟ್ಟರೂ ನನ್ನನ್ನುಳಿಸಲಾರಿರಿ. ಬಂದೂಕುಗಳನ್ನುಳ್ಳ ಸಿಪಾಯಿಗಳ ಮುಂದೆ ಭಲ್ಲೆಯ ದೊಣ್ಣೆಗಳಿಂದೇನೂ ಸಾಗದು. ಏನಾದೀತು?

ರಂಗ—ಏನನ್ನುತಾನೇ ಮಾಡಲಾರೆವು?

ದೇವಿ—ಏನನ್ನಾದರೂ ಮಾಡಿರಿ—ಮತ್ತೊಂದು ಬಿಂದು ರಕ್ತವು ಬೀಳುವುದಕೋಸ್ಕರ ನಾನು ಪ್ರಾಣವನ್ನು ಕೊಟ್ಟುಬಿಡುವೆನು. ಹೋಗಿ ಗುಂಡುಗಿದರಾಗಿ ನಿಲ್ಲುವೆನು—ಆರೂ ಅಡ್ಡಿಮಾಡರು. ಅದಲ್ಲದೆ ಇಂಗ್ಲೀಷರಿಗೆ ವಶಳಾದರೆ ತಪ್ಪಿಸಿಕೊಳ್ಳುವುದಕ್ಕೆ ಅವಕಾಶವಿರುವುದು. ನೀವು ನಿಮ್ಮ ನಿಮ್ಮ ಪ್ರಾಣವನ್ನು ಕಾಪಾಡಿಕೊಂಡರೆ ನನ್ನನ್ನು ಬಂಧನದಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಬಹುದು. ನಮ್ಮಲ್ಲಿ ಹಣವಿದೆ. ಕುಂಪಣಿಯ ಚಾಕರರು ಹಣಕ್ಕೆ ವಶರಾಗುವರು. ನಾವು ತಪ್ಪಿಸಿಕೊಳ್ಳುವುದಕ್ಕೆ ಯೋಚನೆಯೇನು?

ದೇವಿಯು ಲಂಚವನ್ನು ಕೊಟ್ಟು ತಪ್ಪಿಸಿಕೊಂಡು ಹೋಗಬೇಕೆಂದೊಂದು

ಮುಹೂರ್ತವಾದರೂ ಯೋಚಿಸಿರಲಿಲ್ಲ. ಈ ರೀತಿ ತಪ್ಪಿಸಿಕೊಳ್ಳುವ ತಾತ್ಪರ್ಯವುಳ್ಳವಳಾಗಿಯೂ ಇರಲಿಲ್ಲ. ಕೇವಲ ರಂಗರಾಜನ ಸಮಾಧಾನಕ್ಕೆ ಸಲವಾಗಿ ಹಾಗೆ ಹೇಳಿದುದು. ಆಕೆಯ ಮನಸ್ಸಿನಲ್ಲಿ ಹುಟ್ಟಿದ ಗಭೀರವಾದ ಆಲೋಚನೆಯನ್ನು ತಿಳಿದುಕೊಳ್ಳಲು ರಂಗರಾಜನಿಗೆ ಸಾಧ್ಯವೆ ? ಅದುಕಾರಣ ಅವುಗಳನ್ನೆಲ್ಲಾ ಅವನಿಗೆ ತಿಳಿಯಹೇಳಲಿಲ್ಲ. ಸುಲಭವಾಗಿ ಇಂಗ್ಲೀಷರಿಗೆ ವಶಳಾಗುವುದಾಗಿ ತಿಳಿಸಿದಳು. ಆದರೆ ಮನಸ್ಸಿನಲ್ಲಿ ಇಂಗ್ಲೀಷರು ತನ್ನ ಬುದ್ಧಿಯ ಕಾರ್ಯದಿಂದ ಮರುಳಾಗಿ ಹೋಗುವರೆಂತಲೂ, ಶತ್ರುಗಳಿಗೆ ಅನಿಷ್ಟವುಂಟಾಗಕೂಡದೆಂತಲೂ, ತನ್ನ ಸ್ವಾಮಿಯನ್ನೂ ಮಾವನನ್ನೂ ಸಖಿಗಳನ್ನೂ ಉದ್ಧಾರಮಾಡಬೇಕೆಂತಲೂ ಅದಕ್ಕೆ ಸಲವಾಗಿ ನಡೆಯಿಸಬೇಕಾದ ಕಾರ್ಯಗಳ ಆಲೋಚನೆಮಾಡಿ ಅವೆಲ್ಲಾ ಸಿದ್ಧವಾಗುವುವೆಂತಲೂ ಖಂಡಿತ ಮಾಡಿಕೊಂಡಿದ್ದಳು.

ರಂಗ—ಕುಂಪಣಿಯವರನ್ನು ವಶಮಾಡಿಕೊಳ್ಳಬಹುದಾದದು ಹಡಗಿನಲ್ಲಿಯೇ ಸಿದ್ಧವಾಗಿದೆ. ತಮ್ಮನ್ನು ಹಿಡಿದ ಕೂಡಲೇ ಹಡಗನ್ನೂ ವಶಮಾಡಿಕೊಳ್ಳುವರು.

ದೇವಿ—ಅವರು ಹಡಗನ್ನು ತೆಗೆದುಕೊಳ್ಳಕೂಡದೆಂದು ನಿಷೇಧಿಸುವೆನು. ನಾನವರಿಗೆ ವಶಳಾದರೆ ಅವರು ಹಡಗನ್ನು ಮುಟ್ಟಕೂಡದು; ಹಡಗಿನಲ್ಲಿರುವುದನ್ನೂ ಮುಟ್ಟಕೂಡದು; ಹಡಗಿನಲ್ಲಾರಿದ್ದರೂ ಅವರಪ್ಪವರು ಮುಟ್ಟಕೂಡದು. ಈ ನಿಬಂಧನೆಗೊಳಪಟ್ಟರೆ ನಾನವರಿಗೆ ವಶಳಾಗುವೆನು.

ರಂಗ—ಇಂಗ್ಲೀಷರು ಅದಕ್ಕೊಪ್ಪದೆ ಹಡಗನ್ನು ಲೂಟಿ ಮಾಡಬಂದರೆ ?

ದೇವಿ—ಹಾಗೆ ಮಾಡಕೂಡದೆಂದು ಹೇಳುವೆನು. ಅವರು ಹಡಗಿನೊಳಗೆ ಬಂದರೂ ಹಡಗನ್ನು ಮುಟ್ಟಿದರೂ ಅವರಿಗೆ ವಿಪತ್ತುಂಟಾಗುವುದೆಂದು ಹೇಳುವೆನು. ಅವರು ಹಡಗಿನ ಮೇಲೆ ಬಂದರೆ ನಾನವರ ಕೈಗೆ ಸಿಗುವುದಿಲ್ಲ. ಹಡಗಿನ ಮೇಲೆ ಹತ್ತುವುದಾದರೆ ಆ ಕೂಡಲೆ ಯುದ್ಧವು ಪುನಃ ಪ್ರಾರಂಭವಾಗುವುದು; ನಾನು ಹೇಳುವುದಕ್ಕೆ ಅವರೊಪ್ಪಿಕೊಂಡರೆ ನಾನಾಗಿಯೇ ಅವರ ಹಡಗಿಗೆ ಹೋಗುವೆನು; ಅವರಾಗೂ ನಮ್ಮ ಹಡಗಿಗೆ ಬರಕೂಡದು.

ಕೇಳಿ ರಂಗರಾಜನು ಒಳಗೇನೋ ಕೌಶಲವಿರಬೇಕೆಂದು ತಿಳಿದು ಲೆಫಟಿನೆಂಟು ಸಾಹೇಬನ ಬಳಿ ಹೋಗುವ ದೌತ್ಯವನ್ನೊಪ್ಪಿಕೊಂಡನು. ಬಳಿಕ ದೇವಿಯು ಭವಾನಿಠಾಕೂರಜಿಯವರು ಎಲ್ಲಿದ್ದಾರೆಂದು ಕೇಳಿದಳು.

ರಂಗ—ಅವರು ಸೈನ್ಯವನ್ನಿಟ್ಟುಕೊಂಡು ತೀರದಲ್ಲಿ ಯುದ್ಧವನ್ನು ಮಾಡುತ್ತಾರೆ. ನನ್ನ ಮಾತನ್ನವರು ಲಾಲಿಸಲಿಲ್ಲ. ಅಲ್ಲಿಯೇ ಇರಬಹುದಾಗಿ ತೋರುತ್ತದೆ.

ದೇವಿ—ಮೊದಲು ಅವರ ಬಳಿ ಹೋಗು, ಹೋಗಿ ಬರಕಂದಾಜ ಸೈನ್ಯವನ್ನೆಲ್ಲಾ ತೆಗೆದುಕೊಂಡು ನದಿಯ ತೀರದಲ್ಲಿ ಅವರವರ ಸ್ಥಳಕ್ಕೆ ಹೋಗಬೇಕೆಂದು ಹೇಳು, ನನ್ನ ಹಡಗಿನ ಜನರನ್ನು ಬಿಟ್ಟುಹೋದರೆ ಸಾಕೆಂದು ಹೇಳು, ನನ್ನ

ಉದ್ಧಾರಕ್ಕೆ ಭಗವಂತನು ಉಪಾಯವನ್ನು ಕಲ್ಪಿಸಿದ್ದಾನೆ! ಹಾಗೆಂತಲೂ ಹೇಳು; ಅವರು ಆಕ್ಷೇಪಿಸಿದರೆ ಆಕಾಶವನ್ನು ನೋಡಬೇಕೆಂದು ಹೇಳು ; ಅವರು ತಿಳಿದು ಕೊಳ್ಳುವರು.

ರಂಗರಾಜನು ತಲೆಯನ್ನೆತ್ತಿ ಆಕಾಶವನ್ನು ನೋಡಿದನು. ವೈಶಾಖದ ಹೊಸದಾದ ಮೇಘಮಾಲೆಯು ಗಗನವನ್ನೆಲ್ಲಾ ಅಂಧಕಾರವಮಾಡಿದ್ದಿತು.

ರಂಗ—ಮಹತಾಯಿ! ಮತ್ತೊಂದು ಅಪ್ಪಣೆಯನ್ನು ಬೇಡುತ್ತೇನೆ. ಹರ ವಲ್ಲಭರಾಯನು ಇಂದು ಪತ್ತೇದಾರನಾಗಿ ಬಂದಿದ್ದಾನೆ, ಅವನ ಮಗ ವ್ರಜೇಶ್ವರ ನನ್ನು ಈ ಹಡಗಿನ ಮೇಲೆ ನೋಡಿದೆನು. ಅವನ ಅಭಿಪ್ರಾಯವನ್ನು ನೋಡಿದರೆ ಸರಿಯಾದುದಾಗಿ ಕಾಣುವುದಿಲ್ಲ. ಅವನನ್ನು ಹಿಡಿದು ಕಟ್ಟಿಹಾಕಲು ಅಪ್ಪಣೆ ಯಾಗಬೇಕೆಂದು ಬೇಡುತ್ತೇನೆ.

ಅದನ್ನು ಕೇಳಿ ದಿವಾ ನಿಶಿ ಇಬ್ಬರೂ ಕಿಲ ಕಿಲ ನಕ್ಕರು. ದೇವಿಯು, 'ಕಟ್ಟಿಹಾಕಬೇಡ. ಗೋಪ್ಯವಾಗಿ ಹಡಗಿನ ಮೇಲುಭಾಗದಲ್ಲಿ ಕುಳಿತಿರುವಂತೆ ಹೇಳು. ದೇವಿಯು ಆತನಿಲ್ಲಿಗೆ ಬರಲು ಅಪ್ಪಣೆಕೊಟ್ಟಾಗ ಬರಬೇಕೆಂದು ಹೇಳು.'

ಅಪ್ಪಣೆಯಾದ ಪ್ರಕಾರ ರಂಗರಾಜನು ಮೊದಲು ವ್ರಜೇಶ್ವರನನ್ನು ಮೇಲು ಭಾಗದಲ್ಲಿ ಒತ್ತಟ್ಟು ಕುಳ್ಳಿರಿಸಿ, ಬಳಿಕ ಭವಾನಿಠಾಕೂರನ ಬಳಿಗೆ ಹೋದನು. ದೇವಿಯು ಹೇಳಿದುದನ್ನೆಲ್ಲಾ ಅವನಿಗೆ ಅರುಹಿದನು. ರಂಗರಾಜನು ಮೇಘ ವನ್ನು ತೋರಿದನು. ಭವಾನಿಠಾಕೂರನದನ್ನು ನೋಡಿದನು. ಭವಾನಿಯು ಪುನಃ ಆಕ್ಷೇಪಿಸದೆ ತೀರದಲ್ಲಿದ್ದ ಬರಕಂದಾಜ ಸೈನ್ಯವನ್ನೆಲ್ಲಾ ಕೂಡಿಹಾಕಿ ಕೊಂಡು ಗಂಗಾನದಿಯ ತೀರದಲ್ಲಿ ಸ್ವಸ್ಥಾನಕ್ಕೆ ಹೋಗುವ ಪ್ರಯತ್ನ ಮಾಡ ಲಾರಂಭಿಸಿದನು.

ಇತ್ತಲಾಗಿ ದಿವಾ ನಿಶಿ ಇಬ್ಬರೂ ಕೊಠಡಿಯಿಂದ ಹೊರಗೆ ಬಂದು ಬರ ಕಂದಾಜ ವೇಷವುಳ್ಳ ನಾವಿಕರಿಗೆ ಕಿವಿಯಲ್ಲೊಂದೇಕಾಂತವನ್ನು ಹೇಳಿ ಹೊರಟು ಹೋದರು. ಅದು ನಮಗೆ ಕೇಳಿಸಲಿಲ್ಲ.

---

## ಆರನೆಯ ಪರಿಚ್ಛೇದ

ಇತ್ತಲಾಗಿ ಭವಾನಿಠಾಕೂರನನ್ನು ಕಳುಹಿ ಬಳಿಕ ರಂಗರಾಜನು ಬಿಳೀ ಬಾವಟೆಯನ್ನು ಹಿಡಿದುಕೊಂಡು ನೀರಿನಲ್ಲಿಳಿದು ಲೆಫಟಿನೆಂಟು ಸಾಹೆಬನ ಹಡಗಿಗೆ ಹತ್ತಿದನು. ಬಿಳೀ ಬಾವಟೆಯನ್ನು ನೋಡಿ ಅವನನ್ನಾರೂ ಅಡ್ಡಿಮಾಡ ಲಿಲ್ಲ. ಅವನು ಸಾಹೆಬನ ಹಡಗಿಗೆ ಹತ್ತಿದನು.

ಸಾಹೆಬ—ನೀವು ಬಿಳೀ ಬಾವಟೆಯನ್ನು ತೋರಿದಿರಿ. ಹಿಡಿಯಲ್ಪಡಲೊಪ್ಪಿ ಕೊಳ್ಳುವಿರೊ ?

ರಂಗ—ಒಪ್ಪಿಕೊಳ್ಳುವೆವು. ನೀವಾರನ್ನು ಹಿಡಿಯಲು ಬಂದಿರುವಿರೋ ಅವರೊಪ್ಪಿಕೊಳ್ಳುವರೆಂದು ಹೇಳಲು ಬಂದಿರುವೆನು.

ಸಾಹೆಬ—ದೇವೀಚೌಧುರಾಣಿಯು ದಸ್ತಗಿರಿಗೊಪ್ಪುತ್ತಾಳೆಯೆ?

ರಂಗ—ಒಪ್ಪುತ್ತಾಳೆ. ಅದನ್ನು ಹೇಳುವುದಕ್ಕೆ ಬಂದೆನು.

ಸಾಹೆಬ—ಮತ್ತು ನೀವೊ?

ರಂಗ—ನಾವೆಂದರಾರು?

ಸಾಹೆಬ—ದೇವೀಚೌಧುರಾಣಿಯ ದಳದವರು.

ರಂಗ—ನಾವು ದಸ್ತಗಿರಿಗೊಪ್ಪುವುದಿಲ್ಲ.

ಸಾಹೆಬ—ನಾವು ದಳ ಸಮೇತವಾಗಿ ರಾಣಿಯನ್ನು ಹಿಡಿಯುವುದಕ್ಕೆ ಬಂದಿದ್ದೇವೆ.

ರಂಗ—ಆ ದಳವಾವದು? ಸಾವಿರಾರು ಬರಕಂದಾಜ ಸೈನ್ಯದಲ್ಲಿ ದಳದವ ರಾರು? ದಳದವರಲ್ಲದವರಾರು? ಹೇಗೆ ಗೊತ್ತುಮಾಡಬಲ್ಲಿರಿ?

ರಂಗರಾಜನಾ ಮಾತನ್ನು ಹೇಳುತ್ತಿರುವಾಗ ಭವಾನಿಠಾಕೂರನು ಸೈನ್ಯ ವನ್ನು ತೆಗೆದುಕೊಂಡು ಹೊರಟುಹೋಗಿರಲಿಲ್ಲ. ಹೋಗುವ ಪ್ರಯತ್ನದಲ್ಲಿದ್ದನು. ಸಾಹೆಬನು, 'ಆ ಸಾವಿರ ಬರಕಂದಾಜ ಸೈನ್ಯದವರೂ ಡಕಾಯಿತರೇ; ಏಕೆಂದರೆ, ಡಕಾಯಿತಿಗಳ ಸಂಗಡ ಸೇರಿಕೊಂಡು ಸರಕಾರದವರ ಮೇಲೆ ಯುದ್ಧವನ್ನು ಮಾಡಲು ಬಂದಿದ್ದಾರೆ' ಎಂದನು.

ರಂಗ—ಅವರು ಯುದ್ಧವನ್ನು ಮಾಡುವುದಿಲ್ಲ—ಹೊರಟುಹೋಗುವುದು ಕಾಣುವುದಿಲ್ಲವೆ?

ಸಾಹೆಬನು ನೋಡುತಿದ್ದ ಹಾಗೆ ಸೈನ್ಯದವರೆಲ್ಲರೂ ಹೊರಟುಹೋಗುವುದ ರಲ್ಲಿದ್ದರು. ಸಾಹೆಬನು ತರ್ಜನ ಗರ್ಜನ ಮಾಡಿ, 'ಏನು? ಬಿಳೀ ಬಾವಟೆಯ ನೆಪದಲ್ಲಿ ಓಡಿಹೋಗುವುದರಲ್ಲಿರುವಿರಾ?' ಎಂದನು.

ರಂಗ—ಸಾಹೆಬ! ಹಿಡಿಯುವುದಕ್ಕೆ ಹೋದುದಾವಾಗ? ಸಿಕ್ಕದೆ ಓಡಿ ಹೋದವರಾರು? ಆರೂ ಹೋಗಿಲ್ಲ. ನಿಮ್ಮ ಕೈಲಾದರೆ ಹಿಡಿಯಬಹುದು, ಬಿಳೀ ಬಾವಟೆ ಬೇಡ—ಬಿಸುಡುತ್ತೇನೆ.

ಹೀಗೆಂದು ಹೇಳಿ ರಂಗರಾಜನು ಬಾವಟೆಯನ್ನು ಬಿಸುಟನು. ಸಾಹೆಬನ ಅಪ್ಪಣೆಯಿಲ್ಲದೆ ಸಿಪಾಯಿಗಳು ಯುದ್ಧವನ್ನು ಮಾಡದೆ ಸುಮ್ಮನಿದ್ದರು.

ಸಾಹೆಬನು ಯೋಚಿಸುತಿದ್ದವನು, ಅವರ ಬೆನ್ನಟ್ಟುವುದು ಪ್ರಯೋಜನವಿಲ್ಲ ವೆಂದೂ, ಬೆನ್ನಟ್ಟಿದ ಹಾಗೆಲ್ಲಾ ಅವರು ನಿಬಿಡ ವನದೊಳಗೆ ಪ್ರವೇಶಿಸುವರೆಂದೂ, ರಾತ್ರಿ ಮೇಘಾಡಂಬರದಿಂದ ಅರಣ್ಯದಲ್ಲೆಲ್ಲಾ ಕಗ್ಗತ್ತಲೆಯಾಗಿ ಸಿಪಾಯಿಗಳಿಗೆ ದಾರಿಯೂ ಗೊತ್ತಿಲ್ಲವೆಂದೂ, ಬರಕಂದಾಜದವರಿಗದು ಗೊತ್ತಿರುವಕಾರಣ ಅವರನ್ನು ಹಿಡಿಯುವುದು ಸಿಪಾಯಿಗಳಿಗೆ ಅಸಾಧ್ಯವೆಂದೂ ಭಾವಿಸಿ ಆ ಅಭಿಪ್ರಾಯ

ವನ್ನು ಬಿಟ್ಟು, 'ಹೋಗಲಿ, ಅವರು ಬೇಡ, ಪ್ರಕೃತ ಪ್ರಸ್ತಾಪವು ನಡೆಯಲಿ; ನೀವೆಲ್ಲಾ ದಸ್ತಗಿರಿಯಾಗಲು ಸಮ್ಮತವೆ?' ಎಂದನು.

ರಂಗ—ನಾವ್ಯೊಬ್ಬರೂ ಒಪ್ಪುವುದಿಲ್ಲ. ಕೇವಲ ದೇವೀರಾಣಿಯವರೊಬ್ಬರು ಮಾತ್ರ ಒಪ್ಪುವರು.

ಸಾಹೆಬ—ಶೀಷ್! ಈಗ ಯುದ್ಧವನ್ನು ಮಾಡುವವರಾರು? ಈಗಿಲ್ಲಿರುವ ನಿಮ್ಮ ಕೈಹಿಡಿ ಕೆಲವು ಮಂದಿ ಜನರು ಐನೂರು ಮಂದಿ ಸಿಪಾಯಿಗಳೊಂದಿಗೆ ಯುದ್ಧವನ್ನು ಮಾಡಬಲ್ಲರೆ? ನಿಮ್ಮ ಬರಕಂದಾಜ ಸೈನ್ಯದವರೆಲ್ಲರೂ ಅರಣ್ಯ ಪ್ರವೇಶ ಮಾಡಿಬಿಟ್ಟರು.

ರಂಗರಾಜನು ನೋಡಲಾಗಿ ವಾಸ್ತವವಾಗಿ ಭವಾನಿಠಾಕೂರನ ಸೈನ್ಯದವರೆಲ್ಲರೂ ಕಾಡುಬಿದ್ದು ಹೋಗಿದ್ದರು.

ರಂಗ—ನನಗೆ ಅಷ್ಟೊಂದು ಗೊತ್ತಿಲ್ಲ—ನಮ್ಮ ಧಣಿಯು ಹೇಳಿದುದನ್ನು ಹೇಳಿದ್ದೇನೆ. ಹಡಗು ಸಿಗಲಾರದು. ಹಡಗಿನಲ್ಲಿರುವ ಧನವೂ ಸಿಗಲಾರದು. ನಮ್ಮನ್ನಾರನ್ನೂ ಹಿಡಿಯಕೂಡದು. ದೇವೀರಾಣಿಯವರೊಬ್ಬರು ಮಾತ್ರ ಸಿಗುವರು.

ಸಾಹೆಬ—ಏಕೆ?

ರಂಗ—ಅದೆನಗೆ ತಿಳಿಯದು.

ಸಾಹೆಬ—ನಿನಗೆ ತಿಳಿದರೆ ತಿಳಿಯಲಿ, ತಿಳಿಯದಿದ್ದರೆ ಹೋಗಲಿ—ಹಡಗು ನಮ್ಮದಾಯಿತು. ನಾವದನ್ನು ವಶಮಾಡಿಕೊಳ್ಳುವೆವು.

ರಂಗ—ಸಾಹೆಬ! ಹಡಗನ ಮೇಲೆ ಹತ್ತಬೇಡ, ವಿಪತ್ತುಂಟಾಗುವುದು.

ಸಾಹೆಬ—ಪುಃ! ಐನೂರು ಸಿಪಾಯಿಗಳಿದ್ದು ನೀವು ನಾಲ್ಕಾರು ಮಂದಿಯಿಂದ ವಿಪತ್ತೆ?

ಹೀಗೆಂದು ಹೇಳಿ ಸಾಹೆಬನು ಬಿಳೀ ಬಾವಟೆಯನ್ನು ಬಿಸುಟುಬಿಟ್ಟನು. ಸಿಪಾಯಿಗಳಿಗೆ ಹಡಗನ್ನು ಸುತ್ತುಗಟ್ಟುವಂತೆ ಹುಕುಮನ್ನು ಕೊಟ್ಟನು.

ಸಿಪಾಯಿಗಳು ಐದು ಹಡಗುಗಳನ್ನೂ ತಂದು ದೇವಿಯ ಹಡಗನ್ನು ಸುತ್ತುಗಟ್ಟಿದರು. ಬಳಿಕ ಸಾಹೆಬನು ಸಿಪಾಯಿಗಳಿಗೆ, 'ಹಡಗನ್ನೇರಿ ಬರಕಂದಾಜರ ಆಯುಧಗಳನ್ನು ಕಿತ್ತುಕೊಳ್ಳಿರಿ' ಎಂದನು.

ಗಟ್ಟಿಯಾಗಿ ಕೂಗಿ ಆ ಹುಕುಮನ್ನು ಮಾಡಿದನು. ಅದು ದೇವಿಯ ಕಿವಿಗೆ ಬಿದ್ದಿತು. ದೇವಿಯು ಕೊಠಡಿಯೊಳಗಿನಿಂದ ಗಟ್ಟಿಯಾಗಿ, 'ಕೈಯಲ್ಲಿ ಆಯುಧಗಳನ್ನುಳ್ಳವರೆಲ್ಲರೂ ಅವುಗಳನ್ನು ನೀರಿನಲ್ಲಿ ಬಿಸುಟುಬಿಡಿ' ಎಂದು ಅಪ್ಪಣೆ ಮಾಡಿದಳು.

ಅಪ್ಪಣೆಯನ್ನು ಕೇಳಿದ ಕೂಡಲೇ ಆಯುಧಗಳನ್ನು ಹಿಡಿದಿದ್ದವರೆಲ್ಲರೂ ಎಲ್ಲವನ್ನೂ ನೀರಿನಲ್ಲಿ ಬಿಸುಟುಬಿಟ್ಟರು. ನೋಡಿ ಸಾಹೆಬನು ಸಂತುಷ್ಟನಾಗಿ, 'ನಡಿ. ಹಡಗಿನ ಮೇಲೇನಿದೆ, ನೋಡೋಣ' ವೆಂದನು.

ರಂಗ—ಸಾಹೇಬ! ನೀನು ಜೋರುಮಾಡಿ ಹಡಗಿನ ಮೇಲೆ ಹತ್ತುತ್ತಿ, ನನ್ನಮೇಲೆ ತಪ್ಪಿಲ್ಲ.

ಸಾಹೇಬ—ಪುನಃ ನಿನ್ನ ತಪ್ಪೇನು ?

ಹೀಗೆಂದು ಧಿಕ್ಕಾರದ ಮಾತಾಡಿ ಒಬ್ಬ ಸಿಪಾಯಿಯನ್ನು ಜತೆಯಲ್ಲಿ ಕರೆದು ಕೊಂಡು ಹಡಗಿನ ಮೇಲೆ ಹತ್ತಿದನು. ಅದೇನು ಅಷ್ಟೊಂದು ಸಾಹಸದ ಕಾರ್ಯ ವಲ್ಲ! ಹಡಗಿನ ಮೇಲಿದ್ದ ಕೆಲವು ಜನರು ಆಯುಧಗಳನ್ನೆಲ್ಲಾ ಬಿಸಟು ಕುಳಿ ತಿದ್ದರು. ಸಾಹೆಬನು ದೇವಿಯ ಸ್ಥಿರವಾದ ಬುದ್ಧಿಯನ್ನು ಹರಿತವಾದ ಆಯುಧ ವೆಂದು ತಿಳಿದಿರಲಿಲ್ಲ. ದೇವಿಗೆ ಬೇರೆ ಆಯುಧಗಳ ಅವಶ್ಯಕತೆಯಿರಲಿಲ್ಲ.

ಸಾಹೆಬನು ರಂಗರಾಜನನ್ನುಸಂಗಡ ಕರೆದುಕೊಂಡು ಕೊಠಡಿಯ ಬಾಗಿಲಿಗೆ ಬಂದು ನಿಂತನು. ಕೂಡಲೆ ಬಾಗಿಲು ತೆರೆಯಲ್ಪಟ್ಟಿತು. ಇಬ್ಬರೂ ಒಳಗೆ ಹೋದರು. ಹೋಗಿ ನೋಡಿ ಅವರಿಬ್ಬರೂ ಆಶ್ಚರ್ಯಾನ್ವಿತರಾದರು.

ವ್ರಜೇಶ್ವರನು ಬಂದಿಯಾಗಿ ಬಂದು ನೋಡಿದ ದಿನದಲ್ಲಿದ್ದಂತೆ ಕೊಠಡಿಯು ಮನೋಹರವಾಗಿ ಅಲಂಕೃತವಾಗಿದ್ದಿತು. ಗೋಡೆಗಳ ಮೇಲೆ ಮನೋಹರವಾದ ಅದೇ ಚಿತ್ರಗಳು. ನೆಲದಮೇಲೆ ಅದೇ ಸೊಗಸಾದ ರತ್ನಗಂಬಳಿ; ಅದೇ ಅತ್ತರ ದಾನು, ಊದುದಾನು, ಬಂಗಾರದ ಪುಷ್ಪಪಾತ್ರೆಗಳಲ್ಲಿ ತುಂಬ ಹೂವು. ಅದೇ ಬಂಗಾರದ ಗುಡಿಗುಡಿಯಲ್ಲಿ ಕಸ್ತೂರಿ ಮಿಶ್ರವಾದ ತಂಬಾಕುವಿನ ಸುಗಂಧ— ಅದೇ ಬೆಳ್ಳಿಯ ಪ್ರತಿಮೆಗಳ ಕೈಯಲ್ಲಿ ಸುಗಂಧದ ತೈಲದಿಂದ ಉರಿಯುತ್ತಿದ್ದ ದೀಪದ ಜ್ವಾಲೆ. ಆದರೆ ಇಂದು ಎರಡು ಸಿಂಹಾಸನಗಳು—ಒಂದಿರಲಿಲ್ಲ. ಎರಡ ಸಿಂಹಾಸನಗಳ ಮೇಲೂ ಸುವರ್ಣ ಖಚಿತವಾದ ತಿವಾಸಿಗಳು. ಅವುಗಳನ್ನುಒರಗಿ ಕೊಂಡು ಇಬ್ಬರು ಸುಂದರಿಯರು ಕುಳಿತಿದ್ದರು. ಅವರು ಮಹಾರ್ಘವಾದ ಉಡುಪುಟ್ಟಿದ್ದರು. ಸರ್ವಾಂಗಗಳಲ್ಲಿಯೂ ಬಹು ಮೂಲ್ಯದ ಆಭರಣಗಳನ್ನು ತೊಟ್ಟಿದ್ದರು. ಸಾಹೆಬನಿಗೆ ಅವರ ಗುರುತಿಲ್ಲ. ರಂಗರಾಜನಿಗೆ ಗೊತ್ತಾಯಿತು. ಅವರಲ್ಲೊಬ್ಬಳು ನಿಶಿ, ಮತ್ತೊಬ್ಬಳು ದಿವಾ.

ಸಾಹೆಬನು ಕುಳಿತುಕೊಳ್ಳುವುದಕ್ಕೊಂದು ಬೆಳ್ಳಿಯ ಕಾಲುಮಣೆಯು ಹಾಕಿ ದ್ದಿತು. ಸಾಹೇಬನು ಅದರಮೇಲೆ ಕುಳಿತುಕೊಂಡನು. ರಂಗರಾಜನು ದೇವಿಯನ್ನು ಹುಡುಕಿದನು. ದೇವಿಯು ತನ್ನ ಸಾಮಾನ್ಯವಾದ ಉಡುಪನ್ನುಟ್ಟು ಕೈಲೊಂದು ಬಳೆಯನ್ನು ತೊಟ್ಟು ಕೊಠಡಿಯಲ್ಲಿ ಒತ್ತಟ್ಟು ನಿಂತಿದ್ದಳು. ತಲೆಯನ್ನು ಬಾಚಿ ಹೆರಳು ಹಾಕಿಕೊಂಡಿರಲಿಲ್ಲ. ಮತ್ತಾವ ಆಭರಣಗಳನ್ನೂ ಧರಿಸಿರಲಿಲ್ಲ.

ಸಾಹೆಬನು, 'ದೇವೀಚೌಧುರಾಣಿ ಯಾರು ? ಆರ ಸಂಗಡ ಮಾತಾಡಲಿ?' ಎಂದು ಕೇಳಿದನು.

ನಿಶಿಯು, 'ನನ್ನ ಸಂಗಡ ಮಾತಾಡಬೇಕು, ನಾನು ದೇವಿ' ಎಂದಳು.

ದಿವಾ ನಕ್ಕು, ಇಂಗ್ಲೀಷರವನನ್ನು ನೋಡಿ, 'ಹಾಸ್ಯಮಾಡುತ್ತೀಯಾ ?

ಇದು ಹಾಸ್ಯಕ್ಕೆ ಸಮಯವೆ ?' ಎಂದು ಹೇಳಿ, 'ಲೆಫಟನೆಂಟು ಸಾಹೆಬ ! ಅವಳೆನಗೆ ತಂಗಿ, ಹಾಸ್ಯಪ್ರಿಯಳು; ಆದರೆ ಹಾಸ್ಯಕ್ಕಿದು ಸಮಯವಲ್ಲ. ತಾವು ನನ್ನ ಸಂಗಡ ಮಾತಾಡೋಣಾಗಲಿ. ನಾನೇ ದೇವೀಚೌಧುರಾಣಿ' ಎಂದಳು.

ನಿಶಿಯು, 'ಇದೇನು ಕೇಡು ! ನೀನೆನಗೆ ಸಲವಾಗಿ ಹೋಗಿ ಗಲ್ಲಿಗೆ ಹಾಕಿಕೊಳ್ಳಬೇಕೆಂದು ಇರುವಂತಿದೆ !' ಎಂದು ಹೇಳಿ, ಸಾಹೇಬನ ಕಡೆ ತಿರಿಗಿಕೊಂಡು, 'ಸಾಹೆಬ ! ಅವಳೆನಗೆ ತಂಗಿ ! ಸ್ನೇಹವಶದಿಂದ ನನ್ನನ್ನುಳಿಸುವುದಕ್ಕೆ ಸಲವಾಗಿ ತಮಗೆ ವಂಚಿಸುತ್ತಾಳೆ. ಸುಳ್ಳನ್ನು ಹೇಳಿ ಭಗಿನಿಯನ್ನು ಪ್ರಾಣದಂಡನೆಗೆ ಗುರಿಮಾಡಿ, ನನ್ನ ಪ್ರಾಣವನ್ನುಳಿಸಿಕೊಳ್ಳುವುದೆನಗೆ ಕರ್ತವ್ಯವಲ್ಲ. ಪ್ರಾಣವೆಂಬುದು ಅತಿ ತುಚ್ಛವಾದುದು. ನಾವು ಬಂಗಾಳಿ ಹೆಂಗಸರು. ಸ್ವಲ್ಪವೂ ಕೊರತೆಯಿಲ್ಲದೆ ಪ್ರಾಣವನ್ನು ಕೊಡಲು ಸಿದ್ಧರಾಗಿದ್ದೇವೆ. ನಡೆಯಿರಿ, ಎಲ್ಲಿಗೆ ಬರಬೇಕೋ ಅಲ್ಲಿಗೆ ಬರುವೆನು, ನಾನೇ ದೇವೀರಾಣಿ' ಎಂದಳು.

ದಿವಾ—'ಸಾಹೆಬ ! ನಿಮ್ಮ ದೇವೀರಾಣಿ ! ನೀವು ನಿರಪರಾಧಿಯನ್ನು ಕೊಂಡೊಯ್ದಂತಾಗುವುದು. ಅವಳಲ್ಲ—ನಾನು ದೇವೀ' ಎಂದಳು.

ಸಾಹೆಬನು ವಿರಕ್ತನಾಗಿ ರಂಗರಾಜನನ್ನು ಕುರಿತು, 'ಇದೇನು ಹುಡುಗಾಟ ? ದೇವೀಚೌಧುರಾಣಿ ಯಾರು ? ನಿಜವಾಗಿ ಹೇಳು' ಎಂದನು.

ರಂಗರಾಜನಿಗಾವದೂ ಗೊತ್ತಾಗಲಿಲ್ಲ. ಏನೋ ಕೌಶಲವಿರಬೇಕೆಂದು ಯೋಚಿಸಿ, ಬುದ್ಧಿಗಾವದೂ ಹರಿಯದೆ, ಜೋರಿ ಕೈಮುಗಿದುಕೊಂಡು, 'ಹುಜೂರು ! ಅವಳು ಯಥಾರ್ಥವಾಗಿ ದೇವೀರಾಣಿ ' ಎಂದನು.

ಆಗ ದೇವಿಯು ಮಾತಾಡಿದಳು. ಅವಳು, ' ಮಧ್ಯದಲ್ಲಿ ಮಾತಾಡುವುದು ತಪ್ಪು—ಆದರೆ ಮುಂದೇನಾಗುವುದೋ ಗೊತ್ತಾಗುವುದಿಲ್ಲ. ಈ ಸುಳ್ಳು ಮಾತು ನಿಜವಾಗಬಹುದು–ಅದುಕಾರಣ ಹೇಳಬೇಕಾಗಿ ಬಂದಿದೆ–ಆ ಮನುಷ್ಯನು ಹೇಳುವುದು ನಿಜವಲ್ಲ. ಅವಳು ದೇವಿಯಲ್ಲ-ಅವಳನ್ನು ದೇವಿಯೆಂದು ಹೇಳುವ ಆ ಮನುಷ್ಯನು ದೇವಿಯನ್ನು ತನ್ನ ತಾಯಿಯಂತೆ ಭಕ್ತಿ ವಿಶ್ವಾಸಗಳಿಂದ ನೋಡುತ್ತಾನೆ. ಅವಳನ್ನು ರಕ್ಷಿಸುವುದಕ್ಕೆ ಸಲವಾಗಿ ಬೇರೆ ವ್ಯಕ್ತಿಯನ್ನು ದೇವಿಯೆಂದು ತೋರುತ್ತಾನೆ' ಎಂದಳು.

ಸಾಹೆಬನು ದೇವಿಯನ್ನು · ಕುರಿತು, 'ಹಾಗಾದರೆ ದೇವೀಚೌಧುರಾಣಿ ಯಾರು ?' ಎಂದು ಕೇಳಿದನು.

ದೇವಿ—ನಾನು ದೇವಿ.

ದೇವಿಯು ಹೀಗೆಂದು ಹೇಳುತ್ತಲೆ ಎಲ್ಲರಲ್ಲಿಯೂ ಅನುಮಾನಕ್ಕೆ ಬಂತು.

ಆಗ ಲೆಫಟನೆಂಟು ಸಾಹೆಬನು ಈ ಠಕ್ಕು ಚೋರರನ್ನು ಕೊನೆಗಾಣಿಸಬೇಕೆಂದು ಯೋಚಿಸಿ, 'ನಿಮ್ಮಿಬ್ಬರಲ್ಲೊಬ್ಬಳು ದೇವೀಚೌಧುರಾಣಿಯಾಗಿರಬೇಕು ಮತ್ತೊಬ್ಬಳು ಪರಿಚಾರಿಕೆ. ಅವಳು ದೇವಿಯಲ್ಲ. ನಿಮ್ಮಿಬ್ಬರಲ್ಲಾರೋ ಒಬ್ಬಳು

ಆ ಪಾಪಿಷ್ಠೆಯಾಗಿರಬೇಕು. ನನಗೆ ಮೋಸಗೊಳಿಸಲು ಹೇಳುವುದಿಲ್ಲ. ಆದರೆ ನಿಮ್ಮ ಮೋಸವು ನಡುಯುವುದಿಲ್ಲ. ನಿಮ್ಮಿಬ್ಬರನ್ನೂ ಹಿಡಿದುಕೊಂಡು ಹೋಗು ವೆನು. ದೇವೀಚೌಧುರಾಣಿಯೆಂದು ರುಜುವಾತಾಗುವವಳನ್ನು ಗಲ್ಲಿಗೆ ಹಾಕುವು ದಾಗುವುದು ' ಎಂದು ಹೇಳಿದನು.

ಆಗ ದಿವಾ ನಿಶಿ ಇಬ್ಬರೂ, ' ಅಷ್ಟೊಂದು ಗಲಭೆ ಏಕೆ? ನಿಮ್ಮ ಸಂಗಡ ಪತ್ತೇದಾರನು ಇಲ್ಲವೆ? ಪತ್ತೇದಾರನಿದ್ದರೆ ಅವನನ್ನು ಕರೆಯಿಸಿರಿ; ಅವನು ಹೇಳು ವನು. ನಿಜವಾದ ದೇವೀಚೌಧುರಾಣಿಯಾರೆಂಬುದು ಗೊತ್ತಾಗುವುದು' ಎಂದರು.

ಹರವಲ್ಲಭನ ಹಡಗನ್ನು ಕರೆಯಿಸುವುದು ದೇವಿಗೆ ಮುಖ್ಯವಾದ ಉದ್ದೇಶ್ಯ. ಹರವಲ್ಲಭನ ರಕ್ಷಣೆಯನ್ನು ಖಂಡಿತ ಮಾಡಿಕೊಳ್ಳದೆ ಸ್ವಂತ ರಕ್ಷಣೆಯಲ್ಲುದ್ಯುಕ್ತೆ ಯಾಗಕೂಡದೆಂದು ಸ್ಥಿರಸಂಕಲ್ಪವುಳ್ಳವಳಾಗಿದ್ದಳು. ಅವನನ್ನು ಹಡಗಿಗೆ ಕರೆಯಿಸದಿದ್ದರೆ ಅವನುಳಿದುಕೊಳ್ಳುವ ಸಂಭವವು ಕಡಿಮೆ.

ಸಾಹೆಬನು ಮನಸ್ಸಿನಲ್ಲಿ ಹಾಗೆ ಮಾಡುವುದು ಸರಿಯೆಂದುತಿಳಿದು, ಸಂಗಡ ಬಂದಿದ್ದ ಸಿಪಾಯಿಯನ್ನು ಕುರಿತು ಪತ್ತೇದಾರನನ್ನು ಕರೆತರುವಂತೆ ಹೇಳಿದನು. ಸಿಪಾಯಿಯು ಹಡಗಿನ ಜಮಾದಾರನನ್ನು ಕರೆದು ಪತ್ತೇದಾರನನ್ನು ಕರೆಯು ವಂತೆ ಹೇಳಿದನು. ಬಳಿಕ ಪತ್ತೇದಾರನನ್ನು ಕರೆಯುವ ಗದ್ದಲವು ಹತ್ತಿತು. ' ಪತ್ತೇದಾರನೆಲ್ಲಿದ್ದಾನೆ? ' ಪತ್ತೇದಾರನಾರೆಂಬುದಾರಿಗೂ ತಿಳಿಯದೆ ನಾಲ್ಕು ಕಡೆಗಳಲ್ಲಿ ಪತ್ತೇದಾರನನ್ನು ಕೂಗುವ ಗದ್ದಲವು ಹೆಚ್ಚಾಯಿತು.

---

## ಏಳನೆಯ ಪರಿಚ್ಛೇದ

ವಸ್ತುತಃ ಹರವಲ್ಲಭರಾಯ ಮಹಾಶಯನು ಯುದ್ಧ ಕ್ಷೇತ್ರದಲ್ಲಿದ್ದನು. ಆದರೆ ಮನಃಪೂರ್ವಕವಾಗಲ್ಲಿರಲಿಲ್ಲ. ಘಟನಾಧೀನವಾಗಿ ಅಲ್ಲಿದ್ದನು. ಮೊದಲವನು ಗಲಭೆಗೆ ಸೇರಲಿಲ್ಲ. " ಶೃಂಗೀಣಾಂ ಶಸ್ತ್ರಪಾಣೀನಾಂ " ಇತ್ಯಾದಿ ಚಾಣಕ್ಯನು ಕೊಟ್ಟಿರುವ ಬುದ್ಧಿವಾದಗಳನ್ನು ಸ್ಮರಿಸಿಕೊಂಡು ಅವನು ಸಿಪಾಯಿ ಗಳ ಹಡಗನ್ನೇರಲಿಲ್ಲ. ಬೇರೊಂದು ಚಿಕ್ಕ ಹಡಗಿನಲ್ಲಿದ್ದು ಲೆಫಟನೆಂಟು ಸಾಹೆಬ ನಿಗೆ ದೇವಿಯ ಹಡಗನ್ನು ತೋರಿ, ಅರ್ಧ ಹರಿದಾರಿಯ ದೂರ ಹಿಂದಕ್ಕೋಡಿ ಹೋಗಿ ತನ್ನ ಚಿಕ್ಕ ಹಡಗನ್ನೂ ತನ್ನ ಪ್ರಾಣವನ್ನೂ ಕಾಪಾಡಿಕೊಂಡಿದ್ದವನು, ಆಕಾಶದಲ್ಲಿ ಮೇಘಮಾಲೆಯು ಕವಿಯುತ್ತ ಬಂದುದನ್ನು ಕಂಡು ಮನಸ್ಸಿನಲ್ಲಿ, ಚಂಡಮಾರುತದಿಂದ ಕೂಡಿದ ಮಳೆಯು ಬಂದರೆ ಹಡಗು ಮುಣುಗಿ ಹೋಗುವು ದೆಂತಲೂ, ಹಣದಾಶೆಗೆ ಬಂದು ಪ್ರಾಣವನ್ನು ಕೊಡುವುದಕ್ಕೆ ಬಂದಂತಾಯಿ ತೆಂತಲೂ, ನೀರಿನಲ್ಲಿ ಬಿದ್ದು ಸತ್ತರೆ ಸತ್ಕಾರಕ್ಕೂ ಮಾರ್ಗವಿಲ್ಲದೆ ಹೋಗುವು ದೆಂತಲೂ, ಭಯಪಟ್ಟವನಾಗಿ ರಾಯಮಹಾಶಯನು ಹಡಗನ್ನು ಬಿಟ್ಟು

ತೀರಕ್ಕಿಳಿದು ಬಂದನು. ಆದರೆ ತೀರದಲ್ಲಾರೂ ಇರಲಿಲ್ಲವಾಗಿ ಭಯಪಟ್ಟನು. ಸರ್ಪದ ಭಯ, ಹುಲಿಯ ಭಯ, ಡಕಾಯಿತರ ಭಯ, ಪಿಶಾಚಿಗಳ ಭಯ. ಅಷ್ಟು ವಿಧವಾದ ಭಯಗಳಿಂದ ತನ್ನ ಇರವನ್ನು ಮರೆತುಕೊಂಡವನಾಗಿ ಮನಸ್ಸಿನಲ್ಲಿ, 'ಮಣ್ಣುತಿನ್ನುವ ಕೆಲಸಕ್ಕೆ ಬಂದೆನು' ಎಂದು ತನ್ನನ್ನು ತಾನೇ ಧಿಕ್ಕರಿಸಿಕೊಂಡನು. ಕಡೆಗೆ ಅಳುವು ಬಂದು ಅಳುಂದಾರೆಯು ಹರಿಯಿತು.

ಆ ಸಮಯದಲ್ಲಿ ಹಠಾತ್ತಾಗಿ ಬಂದೂಕಿನ ದಡಬಡ ಶಬ್ದ, ಸಿಪಾಯಿಗಳ ಹಾಗೂ ಬರಕಂದಾಜ ಸೈನ್ಯದವರ ಯುದ್ಧದ ಗಡಬಿಡಿ ಶಬ್ದ ಇವೆಲ್ಲಾ ನಿಂತು ಹೋದುವು. ಹರವಲ್ಲಭನು ಮನಸ್ಸಿನಲ್ಲಿ, ಸಿಪಾಯಿಗಳಿಗೆ ಜಯವಾಗಿ ಕಳ್ಳರೆಂಡೆ ಸಿಕ್ಕಿಬಿದ್ದಳು; ಇಲ್ಲದಿದ್ದರೆ ಯುದ್ಧವು ನಿಲ್ಲಲು ಕಾರಣವಿಲ್ಲವೆಂದು ಯೋಚಿಸಿ ಸ್ವಲ್ಪ ಧೈರ್ಯಗೊಂಡು ಯುದ್ಧವು ನಡಿಯುತಿದ್ದ ಸ್ಥಳಕ್ಕೆ ಹೋಗಲು ಮುಂದಾದನು. ಆದರೆ ರಾತ್ರಿ ಅಂಧಕಾರದಲ್ಲಿ, ಆ ಅರಣ್ಯದ ಮಧ್ಯದಲ್ಲಿ ಮುಂದಾಗುವುದು ಹೇಗೆ? ಹಡಗಿನವರನ್ನು, 'ಅಪ್ಪಾ! ಅತ್ತಹೋಗುವುದಕ್ಕೇನು ಹೇಳುತ್ತೀರಿ' ಎಂದು ಕೇಳಿದನು.

ಹಡಗಿನವನು—ಹೋಗುವುದಕ್ಕೆ ಅಡ್ಡಿ ಏನು? ಹಡಗು ಹತ್ತಿರಿ, ತೆಗೆದುಕೊಂಡು ಹೋಗುವೆವು. ಸಿಪಾಯಿಗಳು ಹೊಡೆದು ಹಿಡಿದುಕೊಳ್ಳಲಾರರಷ್ಟೆ? ಪುನಃ ಯುದ್ಧಕ್ಕೆ ಪ್ರಾರಂಭವಾದರೊ?

ಹರವಲ್ಲಭ—ಸಿಪಾಯಿಗಳೆನಗೆ ಏನನ್ನೂ ಹೇಳರು. ಯುದ್ಧವು ಪುನಃ ಆರಂಭವಾಗದು. ಡಕಾಯಿತಳು ಸಿಕ್ಕಿದಳು. ಆದರೆ ಮೋಡವನ್ನು ನೋಡಿದರೆ ಕೂಡಲೇ ಮಳೆಯು ಬರುವಂತಿದ್ದೆ. ಹಡಗಿನ ಮೇಲೆ ಹತ್ತುವುದು ಹೇಗೆ?

ನಾವಿಕ—ಮಳೆಯಲ್ಲಿ ಹಡಗು ಮುಣುಗುವುದಿಲ್ಲ.

ಹರವಲ್ಲಭನನ್ನು ಮೊದಲು ನಂಬಲಿಲ್ಲ. ಕಡೆಗೆ ನಿರ್ವಾಹವಿಲ್ಲದೆ ಹಡಗನ್ನೇರಿದರು. ದಡದಲ್ಲಿಯೇ ಹಡಗನ್ನು ತೆಗೆದುಕೊಂಡು ಹೋಗಬೇಕೆಂದು ನಾವಿಕರಿಗೆ ಹೇಳಿದನು. ಅವರು ಹಾಗೆಯೇ ಮಾಡಿ ಸ್ವಲ್ಪದರಲ್ಲಿಯೇ ದೇವಿಯ ಹಡಗಿನ ಹತ್ತರ ಬಂದರು. ಹರವಲ್ಲಭನು ಸಿಪಾಯಿಗಳ ಸಂಕೇತದ ಮಾತನ್ನು ತಿಳಿದಿದ್ದವನಾಗಿ ಅವರು ಆಕ್ಷೇಪಿಸಲಿಲ್ಲ. ಆ ಸಮಯದಲ್ಲಿ, 'ಪತ್ತೇದಾರ! ಪತ್ತೇದಾರ!' ಎಂಬ ಗದ್ದಲವು ಹತ್ತಿದ್ದಿತು. ಹರವಲ್ಲಭನು ದೇವಿಯ ಹಡಗನ್ನೇರಿ, ಅಲ್ಲಿದ್ದ ಅರದಾಲಿ (Orderly) ಸಿಪಾಯಿಯನ್ನು ಕುರಿತು, 'ಪತ್ತೇದಾರನನ್ನು ಹುಡುಕುವಿರೊ? ನಾನೇ ಪತ್ತೇದಾರನು' ಎಂದು ಹೇಳಿದನು.

ಸಿಪಾಯಿ—ನಿನ್ನನ್ನು ಕೆಪ್ಟನ್ ಸಾಹೆಬರು ಕರೆಯುತ್ತಾರೆ.

ಹರ—ಅವರೆಲ್ಲಿ?

ಸಿಪಾಯಿ—ಕೊಠಡಿಯೊಳಗಿದ್ದಾರೆ. ನೀನಲ್ಲಿಗೆ ಹೋಗು.

ಹರವಲ್ಲಭನು ಬರುವನೆಂದು ತಿಳಿದು ದೇವಿಯು ಒಳಗಿನ ಕೊಠಡಿಗೆ ಹೊರಟು

ಹೋದಳು. ಹೋಗುತ್ತ ಕೆಪ್ಟನ್ ಸಾಹೆಬನಿಗೆ ಫಲಹಾರಕ್ಕೆ ನೋಡೋಣ ವೆಂದು ಹೇಳಿಕೊಂಡು ಹೋದಳು.

ಇತ್ತಲಾಗಿ ಹರವಲ್ಲಭನು ಕೊಠಡಿಯ ಬಾಗಿಲಿಗೆ ಬಂದು ನಿಂತು, ಕೊಠಡಿಯ ಅಲಂಕಾರವನ್ನೂ, ಐಶ್ವರ್ಯವನ್ನೂ, ದಿವಾ ನಿಶಿ ಇವರ ರೂಪ, ವಸ್ತ್ರಾಲಂಕಾರ ಗಳನ್ನೂ ನೋಡಿ ವಿಸ್ಮಿತನಾಗಿ, ಸಾಹೆಬನಿಗೆ ಸಲಾಮನ್ನು ಮಾಡುವುದಕ್ಕೆ ಮರೆತು ನಿಶಿಗೆ ಸಲಾಮನ್ನು ಮಾಡಿದನು. ನಿಶಿಯು ನಕ್ಕು, 'ಬಂದಿಗಿ ಖಾನ್ ಸಾಹೆಬರೆ! ದೇಹಸ್ಥಿತಿಯು ಚೆನ್ನಾಗಿದೆಯೆ?' ಎಂದು ಕೇಳಿದಳು.

ಅದನ್ನು ಕೇಳಿ ದಿವಾ, 'ಬಂದಿಗಿ ಖಾನ್ ಸಾಹೆಬರೆ! ನನಗೇಕೆ ಕುರ್ನಿಷನ್ನು (ನಮಸ್ಕಾರ) ಮಾಡಲಿಲ್ಲ. ನಾನು ದೇವೀರಾಣಿಯಾಗಿರುವಾಗ ವಂದಿಸ ಲಿಲ್ಲವೇಕೆ?' ಎಂದಳು.

ಸಾಹೆಬನು ಹರವಲ್ಲಭನನ್ನು ಕುರಿತು, 'ಇವರಿಬ್ಬರೂ ಬದುಲಾಯಿಸಿ ಕೊಂಡು ಒಬ್ಬೊಬ್ಬಳೂ ತಾನು ರಾಣಿ, ತಾನು ರಾಣಿ' ಎಂದು ಹೇಳುತ್ತಾರೆ. ಇವರಲ್ಲಾರು ಚೌಧುರಾಣಿಯೋ ಅದು ಗೊತ್ತಾಗದೆ ನಿನ್ನನ್ನು ಕರೆಯಿಸಿದೆನು. ದೇವೀಚೌಧುರಾಣಿ ಯಾರು? ಹೇಳು' ಎಂದನು.

ಹರವಲ್ಲಭನು ಪ್ರಮಾದದಲ್ಲಿ ಬಿದ್ದನು. ಹಿಂದೆಂದೂ ಅವನು ದೇವಿಯನ್ನು ನೋಡಿದವನಲ್ಲ. ಅವನಿಗೇನೇನೂ ತೋರಲಿಲ್ಲ. ಹಾಗೆಯೇ ಸ್ವಲ್ಪ ಯೋಚಿಸಿ, ಚಿಂತಿಸಿ ನಿಶಿಯನ್ನು ತೋರಿದನು. ನಿಶಿಯು ಕಿಲಕಿಲ ನಕ್ಕಳು. ಹರವಲ್ಲಭನು ಅಪ್ರತಿಭನಾಗಿ, 'ಮರೆತನು!' ಎಂದು ಹೇಳಿ ಪುನಃ ದಿವಿಯನ್ನು ತೋರಿದನು. ದಿವಾ ನಗುವನ್ನು ತಡೆಯಲಾರದೆ ಗಟ್ಟಿಯಾಗಿ ನಗಲಾರಂಭಿಸಿದಳು. ಹರವಲ್ಲಭನು ಮನಕುಂದಿದವನಾಗಿ ಪುನಃ ನಿಶಿಯನ್ನು ತೋರಿದನು. ಆಗ ಸಾಹೆಬನು ಕೋಪದಿಂದ ರೇಗಿ, 'ಟುಂ ಬದಜಾತ್ ಸೂವರ್! ತುಂ ಪಛಾನಟಿನಹಿ?' (ನೀನು ಭ್ರಷ್ಟ—ಸೂಕರ! ನಿನಗೆ ಗುರುತೇ ಇಲ್ಲ) ಎಂದು ಬೈದನು.

'ಸಾಹೆಬ! ಕೋಪಮಾಡಕೂಡದು. ಆತನಿಗೆ ಗೊತ್ತಿಲ್ಲ. ಅವನ ಮಗನಿಗೆ ಗೊತ್ತು. ಅವನು ಹಡಗಿನ ಮೇಲುಭಾಗದಲ್ಲಿ ಕುಳಿತಿದ್ದಾನೆ. ಅವನನ್ನು ಕರೆದು ಕೇಳಬಹುದು. ಅವನಿಗೆ ಗೊತ್ತು' ಎಂದು ದಿವಾ ಹೇಳಿದಳು.

ಹರವಲ್ಲಭನು ಆಕಾಶದಿಂದ ಬಿದ್ದವನಂತಾಗಿ, 'ಮಗನೆ!' ಎಂದನು.

ದಿವಾ—ಹಾಗೆಂದು ಕೇಳಿದೆನು.

ಹರ—ವ್ರಜೇಶ್ವರನೆ!

ದಿವಾ—ಅಹುದು, ಅವನೇ.

ಹರ—ಎಲ್ಲಿ?

ದಿವಾ—ಹಡಗಿನ ಮೇಲು ಭಾಗದಲ್ಲಿ.

ಹರ—ವ್ರಜನಿಲ್ಲಿಗೆ ಹೇಗೆ ಬಂದನು?

ದಿವಾ—ಅವನೇ ಹೇಳುವನು.

ಸಾಹೆಬನು ಅವನನ್ನು ಕರೆತರಲು ಅಪ್ಪಣೆಯನ್ನು ಮಾಡಿದನು.

ದಿವಾ ರಂಗರಾಜನಿಗೆ ಇಂಗಿತ ಮಾಡಿದಳು. ಆಗ ರಂಗರಾಜನು ಹಡಗಿನ ಮೇಲೆ ಹೋಗಿ ವ್ರಜೇಶ್ವರನನ್ನು ಕುರಿತು, 'ನಡಿ, ದಿವಾ ಠಾಕೂರಣಿಯವರ ಅಪ್ಪಣೆಯಾಗುತ್ತದೆ" ಎಂದನು.

ವ್ರಜೇಶ್ವರನು ಕೆಳಗೆ ಬಂದು ಕೋಣೆಯನ್ನು ಹೊಕ್ಕನು. ದೇವಿಯು ಮೊದಲೇ ದಿವಾ ಅಪ್ಪಣೆಮಾಡಿದರೆ ವ್ರಜೇಶ್ವರನು ಕೆಳಕ್ಕಿಳಿದು ಬರಬೇಕೆಂದು ಹೇಳಿದ್ದಳು. ಹಾಗೆ ಅವಳ ಏರ್ಪಾಡು.

ಸಾಹೆಬನು ವ್ರಜೇಶ್ವರನನ್ನು ಕುರಿತು, 'ನೀನು ದೇವೀಚೌಧುರಾಣಿಯನ್ನು ನೋಡಿ ಬಲ್ಲೆಯಾ ?' ಎಂದು ಕೇಳಿದನು.

ವ್ರಜ—ಗುರುತು ಬಲ್ಲೆನು.

ಸಾಹೆಬ—ದೇವೀಚೌಧುರಾಣಿಯು ಇಲ್ಲಿರುವಳೆ ?

ವ್ರಜ—ಇಲ್ಲ.

ಸಾಹೆಬನಾಗ ರಾಗಾಂಧನಾಗಿ, 'ಅದು ಹೇಗೆ? ಪೋಕರಿ ಇವರಲ್ಲೊಬ್ಬಳೂ ದೇವೀಚೌಧುರಾಣಿಯಲ್ಲವೆ ?' ಎಂದು ಕೂಗಿದನು.

ವ್ರಜ—ಅವರು ಆಕೆಯ ದಾಸಿಯರು.

ಸಾಹೆಬ—ಆಃ ! ನೀನು ದೇವಿಯನ್ನು ಬಲ್ಲೆಯಲ್ಲವೆ ?

ವ್ರಜ—ಚೆನ್ನಾಗಿ ಬಲ್ಲೆನು.

ಸಾಹೆಬ—ಇವರಿಬ್ಬರಲ್ಲಾರೂ ದೇವಿಯಲ್ಲವಾಗಿದ್ದರೆ ದೇವಿಯು ಹಡಗಿನ ಲ್ಲೆಲ್ಲೋ ಬಚ್ಚಿಟ್ಟುಕೊಂಡಿರಬೇಕು. ಆ ಪರಿಚಾರಿಕೆಯು ದೇವಿಯಾಗಿರಬೇಕಲ್ಲವೆ ? ನಾನು ಭೂಮಿಯಲ್ಲಿ ಹುಡುಕುತ್ತೇನೆ—ನೀನೊಂದು ಮೇಣದಬತ್ತಿಯನ್ನು ಹಿಡಿದು ಮಷಾಲಚಿಯಾಗಿ ಬೆಳಕನ್ನು ತೋರುತ್ತ ನನ್ನ ಹಿಂದೆ ಬಾ—

ವ್ರಜ—ಸಾಹೆಬ ! ಬೇಕಾದರೆ ಹಡಗಿನಲ್ಲೆಲ್ಲಾ ಹುಡುಕಬಹುದು. ನಾನೇಕೆ ಮಷಾಲಚಿಯ ಕೆಲಸವನ್ನು ಮಾಡಲಿ ?

ಸಾಹೆಬನು ಆಶ್ಚರ್ಯದಿಂದ ಮತ್ತಷ್ಟು ಕೋಪಗೊಂಡು, 'ಬದಜಾತ್ ! ನೀನು ಪತ್ತೇದಾರನಲ್ಲವೆ ?' ಎಂದು ಕೂಗಿದನು.

'ಅಲ್ಲ' ಎಂದು ಹೇಳಿ ವ್ರಜೇಶ್ವರನು ಸಾಹೆಬನ ಕುತ್ತಿಗೆಯಮೇಲೆ ಬಲವಾದೊಂದು ಗುದ್ದನ್ನು ಕೊಟ್ಟನು.

'ಏನುಮಾಡಿದೆ ! ಏನುಮಾಡಿದೆ ! ಸರ್ವನಾಶವನ್ನು ಮಾಡಿಬಿಟ್ಟೆಯಲ್ಲೋ!' ಎಂದು ಹರವಲ್ಲಭನು ಅಳುವುದಕ್ಕೆ ತೊಡಗಿದನು.

'ಹುಜೂರು ! ಮಳೆ ಬಿರುಗಾಳಿ ಎದ್ದಿತು' ಎಂದು ಹೊರಗಿನಿಂದ ಜಮಾದಾರನು ಕೂಗಿಕೊಂಡನು.

'ಸೊಯಿ ಸೊಯಿ' ಎಂದು ಆಕಾಶದ ಪ್ರಾಂತದಿಂದ ಭಯಂಕರವಾದ ವೇಗದಿಂದ ಗಾಳಿಯು ಗರ್ಜಿಸಿಕೊಂಡೆದ್ದುದು ಕೇಳಿತು.

ಕೊಠಿಡಿಯೊಳಗಾ ಸಮಯದಲ್ಲಿ—ಆವ ಮುಹೂರ್ತದಲ್ಲಿ ವ್ರಜೇಶ್ವರನು ಸಾಹೆಬನಿಗೆ ಗುದ್ದನ್ನು ಕೊಟ್ಟನೋ, ಆ ಮುಹೂರ್ತದಲ್ಲಿ—ಪುನಃ ಶಂಖಧ್ವನಿಯಾಯಿತು—ಎರಡು ತಡವೆ ಶಂಖಧ್ವನಿಯಾಯಿತು.

ಹಡಗಿಗೆ ಲಂಗರು ಹಾಕಿರಲಿಲ್ಲವೆಂದು ಮೊದಲು ಹೇಳಿದ್ದೇವೆ. ಹಗ್ಗಗಳು ಮಾತ್ರ ಮರದ ಕೊಂಬೆಗೆ ಹಾಕಿ ಬಿಗಿದಿದ್ದುವು. ಅಲ್ಲಿಬ್ಬರು ನಾವಿಕರು ಕುಳಿದಿದ್ದರು. ಶಂಖಧ್ವನಿಯನ್ನು ಕೇಳುತ್ತಲೇ ಅವರು ಹಗ್ಗವನ್ನು ಬಿಚ್ಚಿ ಹಡಗಿನ ಮೇಲೆ ಹತ್ತಿಕೊಂಡರು. ತೀರದಲ್ಲಿ ದೇವಿಯ ಹಡಗನ್ನು ಸುತ್ತುಗಟ್ಟಿ ನಿಂತಿದ್ದ ಸಿಪಾಯಿಗಳು ಹಡಗನ್ನೇರಿದ ನಾವಿಕರನ್ನು ಹೊಡಿಯಲು ಬಂದೂಕಿಗೆ ಸನೀನನ್ನೇರಿಸಿ ಅದನ್ನೆತ್ತಿ ಹಿಡಿದರು. ಬಂದೂಕುಗಳು ಸಿಪಾಯಿಗಳ ಕೈಲಿ ಎತ್ತಿದ್ದಂತೆ ನಿಂತುವು. ಕಣ್ಣು ರಪ್ಪೆ ಮುಚ್ಚಿ ತೆರೆಯುವುದರೊಳಗೆ ಅಷ್ಟೊಂದು ಅದ್ಭುತ ಕಾರ್ಯವು ನಡಿದುಹೋಯಿತು. ದೇವಿಯ ಕೌಶಲದಿಂದೊಂದು ವಿನಾಡಿಯಲ್ಲಾ ಐನೂರುಮಂದಿ ಕುಂಪಣಿಯ ಸಿಪಾಯಿಗಳೂ ಪರಾಸ್ತರಾಗಿ ಹೋದರು !!

ಹಡಗಿನ ಪಟಗಳನ್ನೆಲ್ಲಾ ಬಿಗಿದೆಳೆದು ಕಟ್ಟಿದರೆಂದು ಹೇಳಿದೆವು. ಆ ಮಧ್ಯೆ 'ದಿವಾ' ನಿಶಿ ಇವರಿಬ್ಬರೂ ಮೇಲೆ ಬಂದು ನಾವಿಕರಿಗೆ ಏಕಾಂತವಾಗಿ ಹೇಳಿದ್ದರೆಂದು ತಿಳಿಸಿದ್ದೇವೆ. ಆ ಹೇಳಿಕೆಗನುಸಾರವಾಗಿ ಹಡಗಿನ ಪಟಗಳನ್ನು ಹಿಡಿದುಕೊಂಡು ನಾಲ್ಕುಮಂದಿ ನಾವಿಕರು ಕುಳಿತಿದ್ದರು. ಶಂಖಧ್ವನಿಯನ್ನು ಕೇಳುತಲೇ ಅವರು ಪಟಗಳನ್ನೆತ್ತಿ ಕಟ್ಟಬಿಟ್ಟರು. ಒಬ್ಬನು ಹಡಗಿನ ಹಿಡಿಯನ್ನು ಹಿಡಿದೆಳೆದನು. ಪ್ರಚಂಡವಾದಾ ಚಂಡ ಮಾರುತದ ವೇಗದಿಂದಾ ಪಟಗಳು ಬಿಚ್ಚಿ ಹೋದವು. ಹಡಗು ಬುಗುರಿಯಂತೆ ತಿರುಗಿತು !! ಸನ್ನೀನುಗಳನ್ನೇರಿಸಿ ಬಂದೂಕಗಳನ್ನೆತ್ತಿ ಹಿಡಿದಿದ್ದ ಸಿಪಾಯಿಗಳ ಕೈಲಿ ಬಂದೂಕಗಳು ಎತ್ತಿದಂತೆ ನಿಂತಿದ್ದುವು. ಹಡಗು ಐವತ್ತು ಮಾರು ದೂರವಾಯಿತು. ಪೂರಾ ವೇಗದಿಂದ ಗಿರಿಗಿರಿ ತಿರುಗಿತು. ಓರೆಯಾಯಿತು. ಮುಣುಗಿಹೋಗುವಂತಾಯಿತು. ಆದರೆ ಅಷ್ಟೊಂದು ಕಾರ್ಯವೂ ಕಣ್ಣುರಪ್ಪೆಯನ್ನೊತ್ತಡವೆ ಮುಚ್ಚಿ ತೆಗೆಯುವುದರೊಳಗೆ ನಡಿದುಹೋಯಿತು. ಆ ಸಾಹೆಬನು ವ್ರಜೇಶ್ವರನಿಗ್ಗೆ ಪ್ರತಿಯಾಗಿ ಗುದ್ದುವುದಕ್ಕೆ ಕೈಯೆತ್ತಿದ್ದನು. ಆ ಪೆಟ್ಟು ಬೀಳುವದರೊಳಗೆ ಅದೆಲ್ಲಾ ನಡೆದುಹೋಯಿತು. ಅವನ ಕೈಯ ಗುದ್ದು ಅವನ ಮುಷ್ಟಿಯಲ್ಲಿಯೇ ನಿಂತಿತು. ಆಗ ಹಡಗು ಓರೆಯಾದಕಾರಣ ಸಾಹೆಬನು ಮುಷ್ಟಿಬದ್ಧಹಸ್ತನಾಗಿ ಕಾಲುತಪ್ಪಿ ಉರುಡಿ ದಿವಾ ಸುಂದರಿಯ ಪದತಲದಲ್ಲಿ ಬಿದ್ದನು. ವ್ರಜೇಶ್ವರನು ಖುದ್ದು ಸಾಹೇಬನ ಮೈಮೇಲೆ ಬಿದ್ದನು-ರಂಗರಾಜನು ಅವನ ಮೇಲೆ ಬಿದ್ದನು. ಹರವಲ್ಲಭನು ಮೊದಲು ನಿಶಿಯ ಮೇಲೆ ಬಿದ್ದವನು ಅಲ್ಲಿಂದ ಹೊರಳಿ ಉರುಡುರುಡಿಕೊಂಡು ಬಂದು ರಂಗರಾಜನ ಚಡಾವು ಜೋಡಿನ

ಮೇಲೆ ಮುಖವಡಿಯಾಗಿ ಬಿದ್ದನು. ಅವನ ಮನಸ್ಸಿನಲ್ಲಿ, ಹಡಗು ಮುಣುಗಿ ಎಲ್ಲರೂ ಸಾಯುತ್ತಿರುವಾಗ ದುರ್ಗಿಯ ಹೆಸರಿನ ಸ್ಮರಣೆಯಿಂದೇನಾದೀ ತೆಂದುಕೊಂಡನು.

ಆದರೆ ಹಡಗು ಮುಣುಗಲಿಲ್ಲ—ಹಡಗು ಓರೆಯಾಗಿದ್ದುದು ನೆಟ್ಟಗಾಗಿ ಚಂಡಮಾರುತವನ್ನು ಹಿಂದುಳಿಸಿ ಮಿಂಚಿನ ವೇಗದಿಂದ ಹೊರಟಿತು. ಬಿದ್ದು ಉರುಡಾಡುತ್ತಿದ್ದವರು ಪುನಃ ಎದ್ದು ನಿಂತರು. ಸಾಹೆಬನು ಪುನಃ ಗುದ್ದುವು ದಕ್ಕೆ ಕೈ ಎತ್ತಿದನು. ಆದರೆ ಹಡಗು ನೀರಿನಲ್ಲಿದ್ದ ಸಾಹೆಬನ ಸಿಪಾಯಿಗಳ ಮೈಮೇಲೆ ಹರಿದುಹೋಯಿತು. ಅನೇಕರು ನೀರಿನಲ್ಲಿ ಮುಣುಗಿಕೊಂಡು ಪ್ರಾಣ ರಕ್ಷಣೆಯನ್ನು ಮಾಡಿಕೊಂಡರು. ಕೆಲವರು ಹಡಗು ತಿರುಗುವುದನ್ನು ದೂರ ದಿಂದ ನೋಡಿ ಪಲಾಯನವಾಗಿ ಹೋದರು. ಅನೇಕರು ಆಹತರಾದರು. ಕುಂಪಣಿಯ ಹಡಗುಗಳು ದೇವಿಯ ಹಡಗಿನ ವೇಗವಾದ ಪೆಟ್ಟಿನಿಂದ ಮುಣುಗಿ ಹೋದುವು. ನದಿಯಲ್ಲಿ ನೀರು ಹೆಚ್ಚಾಗಿರಲಿಲ್ಲವಾದುದರಿಂದಲೂ ಪ್ರವಾಹವು ಹೆಚ್ಚು ಇಲ್ಲದಿದ್ದುದರಿಂದಲೂ ಜನರೆಲ್ಲರೂ ಉಳಿದುಕೊಂಡರು. ದೇವಿಯ ಹಡಗು ಪುನಃ ಅವರ ಕಣ್ಣಿಗೆ ಬೀಳಲಿಲ್ಲ. ಸಿಪಾಯಿಗಳ ಸೈನ್ಯವು ಛಿನ್ನಭಿನ್ನವಾಯಿತು. ದೇವಿಯು ಅವರನ್ನೆಲ್ಲಾ ಪರಾಸ್ತಮಾಡಿ ಹೊರಟುಹೋದಳು !! ಲೆಫ್ಟಿನೆಂಟು ಸಾಹೆಬನೂ ಹರವಲ್ಲಭನೂ ಅವಳ ಬಂದಿಯಾಗಿ ನಿಂತರು. ನಿಮಿಷ ಮಾತ್ರದಲ್ಲಿ ಯುದ್ಧದಲ್ಲಿ ಜಯವನ್ನು ಹೊಂದಿದಳು !!! ದೇವಿಯು ಅದುಕಾರಣದಿಂದಲೇ ಆಕಾಶವನ್ನು ನೋಡಿ, ತನ್ನ ರಕ್ಷಣೆಗೆ ಸಲವಾಗಿ ಭಗವಂತನು ಉಪಾಯ ವನ್ನುಂಟುಮಾಡಿದನೆಂದು ಹೇಳಿದ್ದಳು.

---

## ಎಂಟನೆಯ ಪರಿಚ್ಛೇದ

ಹಡಗು ಜಲರಾಶಿಯನ್ನು ಸೀಳಿಕೊಂಡು ತೆರೆತೆರೆಯಲ್ಲಿಯೂ ಹೊಯಿದಾಡುತ್ತ ನಕ್ಷತ್ರವೇಗದಿಂದ ಹೊರಟುಹೋಯಿತು. ಶಬ್ದವು ಭಯಂಕರ ವಾದುದು. ಹಡಗಿನ ಮುಂಭಾಗಕ್ಕೆ ಹೊಡಿಯುತಿದ್ದ ತೆರೆಗಳ ಗರ್ಜನೆಯು ಭಯಂಕರವಾದುದು. ಚಂಡಮಾರುತದ ಶಬ್ದವೂ ಭಯಂಕರವಾದುದು. ಆದರೆ ಹಡಗಿನ ಕಟ್ಟುದಲೆಯು ಅನುಪಮವಾಗಿ ನಾವಿಕರ ಸಾಮರ್ಥ್ಯ ಹಾಗೂ ಅವರ ಶಿಕ್ಷಣ ಪ್ರದರ್ಶಕವಾಗಿದ್ದಿತು. ಹಡಗು ಆ ಚಂಡಮಾರುತದಲ್ಲಿ ನಿರ್ವಿಘ್ನವಾಗಿ ಹೊರಟುಹೋಯಿತು. ಹಡಗಿನಲ್ಲಿ ಕುಂಬಳಕಾಯಿನಂತೆ ಉರುಡಾಡುತಿದ್ದವರು ಎದ್ದು ಪದಸ್ಥರಾಗಿ ಕಾಲೂರಿ ನಿಂತರು. ಹರವಲ್ಲಭರಾಯ ಮಹಾಶಯನು ಕಾಲಿಗೆ ಯಜ್ಞೋಪವೀತವನ್ನು ಸಿಕ್ಕಿಹಾಕಿಕೊಂಡು ದುರ್ಗಾನಾಮವನ್ನು ಜಪಿಸುವುದಕ್ಕೆ ತೊಡಗಿದನು. ಪುನಃ ಹಡಗು ಮುಣುಗಿಹೋಗದ ಹಾಗಿರಲೆಂದು

ಪ್ರಾರ್ಥಿಸಿಕೊಂಡಿದ್ದನು. ಲೆಫಟಿನೆಂಟು ಸಾಹೆಬನು ಹಳೇ ಗುದ್ದಿನ ಸಾಲವನ್ನು ತೀರಿಸುವುದಕ್ಕೆ ಕೈಯೆತ್ತುವ ಪ್ರಯತ್ನದಲ್ಲಿದ್ದನು. ಆಗ ವ್ರಜೇಶ್ವರನವನ ಕೈಯನ್ನು ಹಿಡಿದುಕೊಂಡನು. ಹರವಲ್ಲಭನು ಮಗನನ್ನು ನೋಡಿ ಗದರಿಸಿ ಕೊಂಡು, 'ಏನನ್ನು ಮಾಡುತ್ತೀಯೊ! ಇಂಗ್ಲಿಷರ ಮೈಮೇಲೆ ಕೈಯೆತ್ತುವು ದುಂಟೆ?' ಎಂದನು.

ವ್ರಜ—ಇಂಗ್ಲಿಷರ ಮೇಲೆ ನಾನು ಕೈಯೆತ್ತುತ್ತೇನೋ ಅವನೇ ನನ್ನ ಮೇಲೆ ಕೈಯೆತ್ತುತ್ತಾನೊ, ನೋಡಿರಿ.

ಹರವಲ್ಲಭನು ಸಾಹೆಬನನ್ನು ನೋಡಿ, 'ಹುಜೂರ! ಅವನು ಹುಡುಗ ಅವನಿಗೆ ಬುದ್ಧಿಯು ಸರಿಯಾಗಿಲ್ಲ. ತಾವು ಅವನ ಅಪರಾಧವನ್ನು ಮನಸ್ಸಿನ ಮೇಲೆ ತಂದುಕೊಳ್ಳಕೂಡದು. ಮಾಫಮಾಡಬೇಕು' ಎಂದು ಬೇಡಿಕೊಂಡನು.

ಸಾಹೆಬ—ಅವನು ಬಹಳ ಕೆಟ್ಟವನು. ಅವನು ಕೈಮುಗಿದುಕೊಂಡು ಮಾಫ ಮಾಡಬೇಕೆಂದು ಬೇಡಿಕೊಂಡರೆ ನಾನು ಮಾಫ ಮಾಡುವೆನು.

ಹರ—ವ್ರಜ! ಹಾಗೆ ಮಾಡು. ಕೈಮುಗಿದುಕೊಂಡು ಮಾಫ ಮಾಡ ಬೇಕೆಂದು ಬೇಡು.

ವ್ರಜೇಶ್ವರ—ಸಾಹೆಬ! ನಾವು ಹಿಂದು ಜಾತಿಯವರು; ತಂದೆಯ ಅಪ್ಪಣೆ ಯನ್ನುಲ್ಲಂಘಿಸಕೂಡದು. ಅದುಕಾರಣ, ನಿಮ್ಮಲ್ಲಿ ನಾನು ಕೈಮುಗಿದು ಕೊಂಡು ಮಾಫ ಮಾಡಬೇಕೆಂದು ಪ್ರಾರ್ಥಿಸುವೆನು.

ಸಾಹೆಬನು ವ್ರಜೇಶ್ವರನ ಪಿತೃಭಕ್ತಿಗೆ ಮೆಚ್ಚಿ ಪ್ರಸನ್ನವಾಗಿ ವ್ರಜೇಶ್ವರನ ತಪ್ಪನ್ನು ಕ್ಷಮಿಸಿ ಅವನ ಕೈಹಿಡಿದು ಕುಲುಕಿದನು. ವ್ರಜೇಶ್ವರನಿಗೆ ತಲೆಯಾಂತರ ದಿಂದಲೂ ಆವುದಕ್ಕೆ ಷೇಕ್‌ಹ್ಯಾಂಡೆನ್ನುವರೆಂಬುದು ಗೊತ್ತಿರಲಿಲ್ಲ. ಅದುಕಾರಣ ಅವನು ಮುಂಕುಮುರುಳಾಗಿ ನಿಂತು ಮನಸ್ಸಿನಲ್ಲಿ, 'ಪುನಃ ಏನನ್ನು ಮಾಡು ವನೋ?' ಎಂದೆಂದುಕೊಂಡು ಹಡಗಿನ ಮೇಲು ಭಾಗಕ್ಕೆ ಬಂದು ಕುಳಿತು ಕೊಂಡನು. ಬರಿ ಗಾಳಿ; ಮಳೆಯಿಲ್ಲದುದರಿಂದ ನೆನೆಯಲಿಲ್ಲ.

ರಂಗರಾಜನೂ ಕೊಠಿಡಿಯಿಂದ ಹೊರಗೆ ಬಂದು ಕೊಠಿಡಿಯ ಬಾಗಿಲನ್ನೆಳೆದು ಕೊಂಡು ಬಾಗಿಲಲ್ಲಿ ಕಾವಲಾಗಿ ಕುಳಿತನು. ಹಡಗು ಬಹುವೇಗವಾಗಿ ಹೋಗು ತ್ತಿದ್ದಿತ್ತಾದಕಾರಣ ವಿಪತ್ತುಂಟಾಗುವ ಸಂಭವವೆಂದು ತಿಳಿದು, ಎರಡು ಪಾರ್ಶ್ವ ಗಳಲ್ಲಿಯೂ ನೋಡಿಕೊಂಡಿರಲು ಹೊರಗಡೆ ಕುಳಿತುಕೊಂಡನು.

ದಿವಿಯು ಎದ್ದು ಕೊಠಿಡಿಯಿಂದ ದೇವಿಯು ಬಳಿ ಹೋದಳು. ಪುರುಷರಿರುವ ಸ್ಥಳದಲ್ಲಿದ್ದು ಪ್ರಯೋಜನವಿಲ್ಲ; ಆದರೆ ನಿಶಿಯು ಏಳಲಿಲ್ಲ. ಅವಳಿಗೆ ಮತ್ತೇನೋ ತಾತ್ಪರ್ಯವಿದ್ದಿತು. ಸರ್ವಸ್ವವನ್ನೂ ಶ್ರೀ ಕೃಷ್ಣನಿಗೆ ಅರ್ಪಿಸಿದವಳು. ಅವಳಿಗೆ ಭಯವೇನೂ ಇಲ್ಲ. ಅವಳು ಬಹಳ ಸಾಹಸವುಳ್ಳವಳು.

ಸಾಹೆಬನು ಪುನಃ ಬೆಳ್ಳಿಯ ಕಾಲುಮಣೆಯಮೇಲೆ ಕುಳಿತು ಮನಸ್ಸಿನಲ್ಲಿ

‘ ಈ ಡಕಾಯಿತರ ಕೈಯಿಂದ ತಪ್ಪಿಸಿಕೊಂಡು ಹೋಗುವುದು ಹೇಗೆ? ಆರನ್ನು ಹಿಡಿಯಬೇಕೆಂದು ಬಂದೆನೋ ಅವರ ಕೈಗೇವೇ ಸಿಕ್ಕಿಬಿದ್ದೆನು. ಹೆಂಗಸರಿಗೆ ಸೋತುಹೋದೆನು! ಪುನಃ ಇಂಗ್ಲಿಷರಿಗೆ ಮುಖವನ್ನು ತೋರುವುದು ಹೇಗೆ? ನಾನು ಹಿಂದಿರುಗಿ ಹೋಗದಿರುವುದೇ ಮೇಲಾಗಿ ಕಾಣುವುದು’ ಎಂದು ಮುಂತಾಗಿ ಯೋಚಿಸಿಕೊಳ್ಳುತ್ತಿದ್ದನು.

ಹರವಲ್ಲಭನಿಗೆ ಕುಳಿತುಕೊಳ್ಳಲು ಸ್ಥಳವಿಲ್ಲದೆ ನಿಶಿಯ ಸಿಂಹಾಸನದ ಪಕ್ಕದಲ್ಲಿ ಬಂದು ಕುಳಿತುಕೊಂಡನು. ಅವನನ್ನು ನೋಡಿ ನಿಶಿಯು, ‘ ನೀವು ಸ್ವಲ್ಪ ಮಲಗಿ ಕೊಳ್ಳುವಿರಾ ? ’ ಎಂದಳು.

ಹರ—ಇಂದು ನಿದ್ರೆಯು ಬರುವುದೆ ?

ನಿಶಿ—ಇಂದು ನಿದ್ರೆಮಾಡದಿದ್ದರೆ ಪುನಃ ನಿದ್ರೆಗೆ ಅವಕಾಶವಿರದು.

ಹರ—ಅದು ಹೇಗೆ ?

ನಿಶಿ—ಪುನಃ ಮಲಗುವ ದಿನವು ಸಿಗದು.

ಹರ—ಏಕೆ ?

ನಿಶಿ—ನೀವು ದೇವೀಚೌಧುರಾಣಿಯನ್ನು ಹಿಡಿಸುವುದಕ್ಕೆ ಬಂದಿದ್ದವರಲ್ಲವೆ ?

ಹರ—ಆ—ಕದು—ಗೊ—ಗೊ—ಗೊತ್ತು—ಹೇ—ಹೇ—ಗೆ—

ನಿಶಿ—ಸಿಕ್ಕಿದರೆ ದೇವಿಗೇನಾಗುತಿದ್ದಿತು, ಬಲ್ಲಿರಾ ?

ಹರ—ಅ—ಅಂತಹ—ದುದು—ಏನು—

ನಿಶಿ—ಅಂತಹದುದು ಏನೂ ಅಲ್ಲ. ಗಲ್ಲು!

ಹರ—ಅದಲ್ಲ. ಅದಾವನು ಬಲ್ಲನು ?

ನಿಶಿ—ದೇವಿಯು ನಿಮಗೇನೂ ಕೆಟ್ಟದು ಮಾಡಲಿಲ್ಲ, ದೊಡ್ಡದೊಂದುಪ ಕಾರವನ್ನು ಮಾಡಿದ್ದಾಳೆ. ನಿಮ್ಮ ಜಾತಿಯು ಹೋಗುತ್ತಿದ್ದಾಗ—ಪ್ರಾಣವೇ ಹೋಗುತ್ತಿದ್ದಾಗ—ನಿಮಗೆ ಐವತ್ತು ಸಾವಿರ ರೂಪಾಯಿಗಳನ್ನು ಕೊಟ್ಟು ನಿಮ್ಮನ್ನು ಕಾಪಾಡಿದಳು. ಅದಕ್ಕೆ ಪ್ರತ್ಯುಪಕಾರವಾಗಿ ನೀವವಳನ್ನು ಗಲ್ಲಿಗೆ ಹಾಕಿಸಲು ಪ್ರಯತ್ನದಲ್ಲಿದ್ದಿರಿ. ನಿಮಗೆ ತಕ್ಕ ಶಿಕ್ಷೆಯಾವದಿರಬಹುದು ? ಹೇಳಿ, ನೋಡೋಣ ?

ಹರವಲ್ಲಭನು ಸುಮ್ಮನಿದ್ದನು.

ನಿಶಿ—ಅದಕ್ಕೆ ಸಲವಾಗಿಯೇ ಈಗಲೇ ಸ್ವಲ್ಪ ನಿದ್ರೆಯನ್ನು ಮಾಡಿರೆಂದು ಹೇಳಿದೆನು; ಪುನಃ ಮತ್ತೊಂದು ರಾತ್ರಿಯನ್ನು ನೋಡಲಾರಿರಿ. ಹಡಗೆಲ್ಲಿಗೆ ಹೋಗುವುದು, ಗೊತ್ತುಂಟೆ ?

ಹರವಲ್ಲಭನಿಗೆ ಮಾತಾಡುವ ಶಕ್ತಿಯು ಉಡುಗಿ ಹೋಗಿದ್ದಿತು.

ನಿಶಿ—ಡಾಕಿನಿಯ ಶ್ಮಶಾನವೆಂದೊಂದು ಶ್ಮಶಾನವುಂಟು. ನಾವಾರನ್ನು ಕೊಲ್ಲಬೇಕಾದರೂ ಅಲ್ಲಿಗೆ ಕೊಂಡೊಯ್ದು ತಲೆಯನ್ನು ಹೊಡೆಯುತ್ತೇವೆ. ಹಡಗು

ಅಲ್ಲಿಗೆ ಹೋಗುತಿದೆ. ಅಲ್ಲಿಗೆ ತಲ್ಪುತ್ತಲೇ ಸಾಹೆಬನನ್ನು ಗಲ್ಲಿಗೆ ಹಾಕಬೇಕೆಂದು ರಾಣಿಯವರ ಅಪ್ಪಣೆಯಾಗಿದೆ. ನಿಮ್ಮ ವಿಚಾರದಲ್ಲಿ ಆಗಿರುವ ಅಪ್ಪಣೆಯು ಗೊತ್ತುಂಟೆ ?

ಹರವಲ್ಲಭನು ಅಳುವುದಕ್ಕೆ ತೊಡಗಿದನು. ಕೈಮುಗಿದುಕೊಂಡು, 'ನನ್ನನ್ನು ಹೇಗಾದರೂ ಮಾಡಿ ರಕ್ಷಿಸಬೇಕು' ಎಂದನು.

ನಿಶಿಯು 'ನಿಮ್ಮನ್ನು ರಕ್ಷಿಸುವಷ್ಟು ಪಾಷಂಡರಾದವರಾರಾದರೂ ಭೂಮಿಯಮೇಲೆ ಹುಟ್ಟಿಹರೆ ? ನಿಮ್ಮನ್ನು ಶೂಲಕ್ಕೆ ಹಾಕಬೇಕೆಂದು ಅಪ್ಪಣೆ ಯಾಗಿದೆ' ಎಂದಳು.

ಹರವಲ್ಲಭನು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದನು. ಗಾಳಿಯ ಶಬ್ದ ಬಹಳವಾ ಗಿದ್ದಿತು. ಅವನಳುವ ಶಬ್ದವು ವ್ರಜೇಶ್ವರನಿಗಾಗಲಿ, ದೇವಿಗಾಗಲಿ ಕೇಳಲಿಲ್ಲ. ಸಾಹೆಬನದನ್ನು ಕೇಳಿದನು. ಆವನು ಅಲ್ಲಿ ನಡೆದ ಮಾತುಗಳನ್ನು ಕೇಳಲಿಲ್ಲ. ಅಳುವುದನ್ನು ಕೇಳಿ, ಗದರಿಸಿಕೊಂಡು, 'ಅಳಬೇಡವೊ ಕತ್ತೆ ! ಒಮ್ಮೆ ಆವಾಗ ಲಾದರೂ ಸಾಯಬೇಕು' ಎಂದನು.

ಆ ಮಾತನ್ನು ಕಿವಿಗೆ ಹಾಕಿಕೊಳ್ಳದೆ ಕೈಮುಗಿದುಕೊಂಡು ವೃದ್ಧಬ್ರಾಹ್ಮ ಣನು ಅಳುವುದಕ್ಕೆ ತೊಡಗಿ, 'ಅಹುದು, ತಾಯಿ ! ನನ್ನನ್ನಾರೂ ರಕ್ಷಿಸಲಾರರೆ?' ಎಂದನು.

ನಿಶಿ—ನಿನ್ನಂತಹ ನರಾಧಮನನ್ನು ರಕ್ಷಿಸಿ ಪಾತಕಕ್ಕೆ ಗುರಿಯಾಗುವರಾರು? ನಮ್ಮ ರಾಣಿಯು ದಯಾಮಯಿ. ಆದರೆ ನಿನಗೆ ಸಲವಾಗಿ ಆಕೆಯ ಬಳಿ ಹೋಗಿ ಆರೂ ದಯೆಯನ್ನು ಬೇಡರು.

ಹರ—ನಾನು ಒಂದು ಲಕ್ಷ ರೂಪಾಯಿಯನ್ನು ಕೊಡುವೆನು.

ನಿಶಿ—ಆ ಮಾತು ಹೇಳುವುದಕ್ಕೆ ಲಜ್ಜೆಯೂ ಇಲ್ಲವೆ ? ಹಣದಾಶೆಗೆ ಕೃತಘ್ನನೂ ಮಾಡಲು ಹಿಂಜರಿಯುವ ಕೆಲಸವನ್ನು ಮಾಡಿದೆ. ಪುನಃ ಲಕ್ಷ ರೂಪಾಯಿನ ಮಾತನ್ನು ಹೇಳುತ್ತೀಯಾ ?

ಹರ—ನನಗೆ ಮತ್ತೇನನ್ನು ಹೇಳಿದರೂ ಮಾಡುವೆನು.

ನಿಶಿ—ನಿನ್ನಂತಹವನಿಂದ ಮಾಡಿಸಬಹುದಾವದು ?

ಹರ—ಅಂತಹ ಅಧಮನಾದವನಿಂದಲೂ ಆವದಾದರೂ ಕೆಲಸವಾಗದಿರದು. ಏನನ್ನು ಹೇಳಿದರೂ ಮಾಡುವೆನು. ನನ್ನನ್ನು ಹೇಗಾದರೂ ಉಳಿಸಬೇಕು.

ನಿಶಿ—(ಯೋಚಿಸಿ) ನಿನ್ನಿಂದಲೂ ನಮಗೊಂದುಪಕಾರವಾಗಬೇಕಾಗಿದೆ. ಆದರೆ ನಿನ್ನಂತಹವನಿಂದುಪಕಾರವನ್ನು ಹೊಂದುವುದು ಸರಿಯಲ್ಲ.

ಹರ—ನಿನಗೆ ಕೈಮುಗಿಯುತ್ತೇನೆ. ನಿನ್ನ ಕೈಹಿಡಿದು ಬೇಡಿಕೊಳ್ಳುತ್ತೇನೆ.

ಹರವಲ್ಲಭನು ನಿಷ್ಫಲನಾದವನು. ಮೈಮೇಲೆ ಪ್ರಜ್ಞೆಯಿಲ್ಲದವನಾಗಿ, ಹೋಗಿ ನಿಶಿಠಾಕೂರಣಿಯ ದುಂಡಾದ ಕೈಯನ್ನು ಹಿಡಿದುಕೊಂಡನು ! ಚತುರೆ

ಯಾದ ನಿಶಿಯು ಕೈಯನ್ನು ಹಿಂದಕ್ಕೆ ತೆಗೆದುಕೊಂಡು, 'ಸಮಾಧಾನವನ್ನು ತೆಗೆದುಕೊ! ಕೈಯನ್ನು ಶ್ರೀಕೃಷ್ಣನು ಗ್ರಹಣಮಾಡಿದ್ದಾನೆ. ನೀನೆನ್ನ ಕೈಕಾಲುಗಳನ್ನು ಹಿಡಿದು ಪ್ರಯೋಜನವಿಲ್ಲ. ನೀನಷ್ಟೊಂದು ಕಾತರನಾಗಿರುವುದರಿಂದ ನಿನ್ನನ್ನುಳಿಸುವುದಕ್ಕೇನಾದರೂ ಮಾಡುವೆನು. ಆದರೆ ನಾನು ಹೇಳುವಂತೆ ನೀನು ಮಾಡುವಿಯೆಂದೆನಗೆ ನಂಬಿಕೆಯಿಲ್ಲ. ನೀನು ಮೋಸಗಾರ, ಕೃತಘ್ನ, ಪಾಮರ, ಪತ್ತೇದಾರಿಯ ಕೆಲಸದವನು! ನಿನ್ನ ಮಾತಿನಲ್ಲಿ ನಂಬಿಕೆಯು ಹೇಗೆ?' ಎಂದಳು.

ಹರ—ಆವ ಪ್ರಮಾಣವನ್ನು ಮಾಡಬೇಕೆಂದರೂ ಮಾಡುವೆನು.

ನಿಶಿ—ನಿನಗೆ ಪ್ರಮಾಣ ಬೇರೆ ಕೇಡು ; ಆವ ಪ್ರಮಾಣವನ್ನು ಮಾಡುವೆ?

ಹರ—ಗಂಗಾಜಲವನ್ನೂ ತುಲಸಿಯನ್ನೂ ಕೊಟ್ಟರೆ, ಅದನ್ನು ಮುಟ್ಟಿ ಪ್ರಮಾಣವನ್ನು ಮಾಡುವೆನು.

ನಿಶಿ – ಬ್ರಜೇಶ್ವರನ ತಲೆಯಮೇಲೆ ಕೈಯಿಟ್ಟು ಪ್ರಮಾಣವನ್ನು ಮಾಡಬಲ್ಲೆಯಾ ?

ಹರವಲ್ಲಭನು ಸ್ವಲ್ಪ ರೇಗಿಕೊಂಡು, 'ಮತ್ತೇನನ್ನಾದರೂ ಮಾಡುವೆನು. ಹಾಗೆ ಮಾತ್ರ ಮಾಡೆನು' ಎಂದನು. ಆದರಾ ಪ್ರತಿಜ್ಞೆಯು ಒಂದು ಕ್ಷಣ ಮಾತ್ರ. ಕೂಡಲೇ ಕೈಚಾಚಿಕೊಂಡು, 'ನೀವಾವ ಪ್ರಮಾಣವನ್ನು ಹೇಳಿದರೂ ಮಾಡಲು ಸಿದ್ಧವಾಗಿದ್ದೇನೆ. ನನ್ನನ್ನು ಕಾಪಾಡಬೇಕು' ಎಂದನು.

ನಿಶಿ—ಒಳ್ಳೆಯದು, ಪ್ರಮಾಣವನ್ನು ಮಾಡಬೇಕಾದ ಆವಶ್ಯಕವಿಲ್ಲ. ನೀನು ನಮ್ಮ ಕೈಯಲ್ಲಿರುತ್ತಿ. ಕೇಳು, ನಾನು ಕುಲೀನರ ಹೆಂಗಸು, ನಮ್ಮಲ್ಲಿ ವರನು ಸಿಗುವುದು ಕಷ್ಟ. ನನಗೇನೋ ವರನು ಸಿಕ್ಕಿದ್ದಾನೆ.(ಇದೆಲ್ಲಾ ನಿಜವಲ್ಲವೆಂದು ಪಾಠಕರು ತಿಳಿದಿರಬಹುದು)ಆದರೆ ನನ್ನ ತಂಗಿಗೆ ವರನು ಸಿಗಲಿಲ್ಲ. ಅವಳಿಗಿನ್ನೂ ವಿವಾಹವಾಗಿಲ್ಲ.

ಹರ—ವಯಸ್ಸು ಎಷ್ಟಾಗಿದೆಯೊ ?

ನಿಶಿ—ಇಪ್ಪತ್ತೈದು ಮೂವತ್ತು ವರ್ಷಗಳಾಗಿರಬಹುದು.

ಹರ—ಕುಲೀನರಲ್ಲಿ ಅಂತಹ ಹೆಣ್ಣುಗಳು ಅನೇಕವುಂಟು.

ನಿಶಿ—ಇದ್ದಾರೆ. ಆದರೆ ಅವಳಿಗಿನ್ನೂ ವಿವಾಹವಾಗಿಲ್ಲ. ಮದುವೆಯಿಲ್ಲದಿದ್ದರೆ ಒಂದು ಮನೆಯನ್ನು ಸೇರುವವಳಾಗುವುದಿಲ್ಲ. ನೀನು ನಮ್ಮ ತಂದೆಗೆ ಸಂಬಂಧವಾಗಿರಬೇಕು. ನೀನು ನನ್ನ ತಂಗಿಯನ್ನು ವಿವಾಹಮಾಡಿಕೊಂಡರೆ ನಮ್ಮ ತಂದೆಯ ಕುಲವುಳಿದುಕೊಳ್ಳುವುದು. ನಾನದನ್ನು ರಾಣಿಯವರಿಗೆ ತಿಳಿಸಿ ನಿನ್ನ ಪ್ರಾಣವನ್ನುಳಿಸಬೇಕೆಂದು ಪ್ರಾರ್ಥಿಸುವೆನು.

ಹರವಲ್ಲಭನ ತಲೆಯಿಂದೊಂದು ದೊಡ್ಡ ಬೆಟ್ಟವನ್ನಿಳಿಸಿದಂತಾಯಿತು. ಮತ್ತೊಂದು ಮದುವೆ; ಕುಲೀನರಲ್ಲದು ದೊಡ್ಡ ಕೆಲಸವಲ್ಲ. ಎಷ್ಟೊಂದು ದೊಡ್ಡ ಹೆಣ್ಣಾದರೇನು ! ನಿಶಿಯು ಆವ ಪ್ರತ್ಯುತ್ತರವನ್ನಿದಿರು ನೋಡುತಿದ್ದಳೋ ಹರವಲ್ಲಭನದೇ ಪ್ರತ್ಯುತ್ತರವನು ಕೊಟ್ಟನು. ಅವನು, 'ಅದು ದೊಡ್ಡ ಕೆಲಸವಲ್ಲ-

ಕುಲೀನರ ಕುಲವನ್ನು ಕಾಪಾಡುವುದು ಕುಲೀನರಿಗೆ ಕೆಲಸವಾಗಿದೆ. ಆದರೆ ನಾನು ವೃದ್ಧನಾಗಿದ್ದೇನೆ; ನನಗೆ ವಿವಾಹದ ವಯಸ್ಸು ಮೀರಿದೆ. ನನ್ನ ಮಗನು ಮದುವೆಮಾಡಿಕೊಂಡರೆ ಆಗದೆ ?' ಎಂದನು.

ನಿಶಿ—ಅವನೊಪ್ಪಿಕೊಳ್ಳುವನೆ ?

ಹರ—ನಾನು ಹೇಳಿದರೆ ಒಪ್ಪಿಕೊಳ್ಳುವನು.

ನಿಶಿ—ಹಾಗಾದರೆ, ನಾಳೆ ಬೆಳಗ್ಗೆ ಅವನಿಗೆ ಹೇಳಿ ಹೊರಟುಹೋಗ ಬಹುದು. ನಿಮಗೆ ಪಾಲ್ಕಿ ಬೋಯಿಗಳನ್ನು ಕರೆಯಿಸಿಕೊಟ್ಟು ಕಳುಹುವೆನು. ನೀವು ಹೋಗಿ ಗೃಹಪ್ರವೇಶಕ್ಕೆ ಬೇಕಾದೇರ್ಪಾಡನ್ನು ಮಾಡಿಕೊಂಡಿರಬೇಕು. ನಾನೇ ವರನಿಗೆ ಕನ್ಯಾದಾನವನ್ನು ಮಾಡಿ ಮಗನನ್ನೂ ಸೊಸೆಯನ್ನೂ ಕಳುಹಿಸಿ ಕೊಡುವೆನು.

ಹರವಲ್ಲಭನಿಗೆ ಕೈನೀಡಿ ಸ್ವರ್ಗವೇ ಸಿಕ್ಕಂತಾಯಿತು. ಸೂಲಕ್ಕೆ ಗುರಿಯಾ ಗುವ ಮಾತೆಲ್ಲಿ! ಸೊಸೆಯನ್ನು ಮನೆತುಂಬಿಸಿಕೊಳ್ಳುವ ಸಮಾಚಾರವೆಲ್ಲಿ! ಹರವಲ್ಲ ಭನು ಹೆಚ್ಚು ತಡವಾಗುವುದನ್ನು ತಡೆಯಲಾರದವನಾಗಿ, 'ನೀವು ಈಗಲೇ ಹೋಗಿ ರಾಣಿಯವರಿಗೆ ಸಮಾಚಾರವನ್ನೆಲ್ಲಾ ತಿಳಿಸೋಣಾಗಲಿ' ಎಂದನು.

ನಿಶಿಯು, 'ಇದೊ, ಹೊರಟೆ!' ಎಂದು ಹೇಳಿ ಅಲ್ಲಿಂದೆದ್ದು ಬೇರೆ ಕೊಠಡಿ ಯೊಳಗೆ ಹೊರಟುಹೋದಳು.

ನಿಶಿಯು ಹೋದ ಬಳಿಕ ಸಾಹೆಬನು ಹರವಲ್ಲಭನನ್ನು ಕುರಿತು, 'ಹೆಂಗಸು ನಿನಗೇನೆಂದು ಹೇಳಿದಳು ?' ಎಂದು ಕೇಳಿದನು.

ಹರ—ಅಂತಹದುದೇನೂ ಇಲ್ಲ.

ಸಾಹೆಬ—ಅಳುತಿದ್ದುದೇಕೆ ?

ಹರ—ಎಲ್ಲಿ ? ಅಳಲಿಲ್ಲ !

ಸಾಹೆಬ—ಬಂಗಾಳಿಗಳು ಸುಳ್ಳುಗಾರರೇ ಅಹುದು.

ನಿಶಿಯು ಕೊಠಡಿಯೊಳಗೆ ಬರುತ್ತಲೇ ದೇವಿಯು, 'ಮಾವಂದಿರ ಸಂಗಡ ಇಷ್ಟು ಹೊತ್ತು ಏನು ಮಾತಾಡಿದೆ ?' ಎಂದು ಕೇಳಿದಳು.

ನಿಶಿ—ನಿನ್ನನ್ನು ಸೊಸೆತನದಲ್ಲಿ 'ಕಾಯಂ' ಮಾಡಲಾದೀತೋ ಇಲ್ಲವೋ ಎಂದು ನೋಡುತಿದ್ದೆನು.

ದೇವಿ—ಠಾಕೂರಣಿ ! ನಿನ್ನ ಮನಸ್ಸು, ಪ್ರಾಣ, ಜೀವನ, ಯೌವನ ಸರ್ವಸ್ವವನ್ನೂ ಶ್ರೀ ಕೃಷ್ಣನಿಗೆ ಅರ್ಪಣೆಮಾಡಿರುತ್ತಿ—ಅದು ವಂಚನೆಯಲ್ಲ. ನಿನ್ನ ಸ್ವಂತಕ್ಕೆಲ್ಲಾ ಇಟ್ಟುಕೊಂಡೆ—

ನಿಶಿ—ದೇವರಿಗೆ ಒಳ್ಳೊಳ್ಳೆಯ ಪದಾರ್ಥವನ್ನೇ ಅರ್ಪಿಸಬೇಕು. ಹಳಸಿದ ಸಾಮಗ್ರಿಗಳನ್ನೊಪ್ಪಿಸುವುದುಂಟೆ ?

ದೇವಿ—ನೀನು ನರಕದಲ್ಲಿ ಬಿದ್ದು ಬೆಂದುಹೋಗು !

## ಒಂಭತ್ತನೆಯ ಪರಿಚ್ಛೇದ

ಬಿರುಗಾಳಿಯು ನಿಂತಿತು. ಹಡಗೂ ನಿಂತಿತು. ದೇವಿಯು ಗವಾಕ್ಷದಿಂದ ಹೊರಗೆ ನೋಡಿದಳು. ಪ್ರಭಾತವಾಗಿದ್ದಿತು. ಅವಳು, 'ನಿಶಿ! ಇಂದು ಸುಪ್ರಭಾತ!' ಎಂದಳು.

ನಿಶಿ—ನನಗೂ ಸುಪ್ರಭಾತ!

ದೇವಿ—ನಿನಗೆ ಅವಸಾನ, ನನಗೆ ಸುಪ್ರಭಾತ!

ನಿಶಿ—ನನಗೆಂದು ಅವಸಾನವೋ ಅಂದೆನಗೆ ಸುಪ್ರಭಾತ! ಅಂಧಕಾರಕ್ಕೆ ಅವಸಾನವಿಲ್ಲ. ಇಂದು ದೇವೀಚೌಧುರಾಣಿಗೆ ಸುಪ್ರಭಾತವೆಂದು ತಿಳಿಯುತ್ತೇನೆ. ಏಕೆಂದರೆ, ಇಂದು ದೇವೀಚೌಧುರಾಣಿಗೆ ಅವಸಾನ!

ದೇವಿ—ಅದೆಂತಹ ಮಾತೆ? ಕೆಟ್ಟ ಮೊರೆಯವಳೆ!

ನಿಶಿ—ಒಳ್ಳೆಯ ಮಾತು. ದೇವಿಯು ಸತ್ತುಹೋದಳು! ಪ್ರಫುಲ್ಲೆಯು ಅತ್ತೆಯಮನೆಗೆ ಹೋದಳು!!

ದೇವಿ—ಅದಕ್ಕೆ ಬಹಳ ಸಾವಕಾಶವಿದೆ. ನಾನು ಹೇಳುವಂತೆ ಮಾಡು. ಹಡಗನ್ನು ದಡಕ್ಕೆ ಕಟ್ಟುವಂತೆ ಹೇಳು.

ನಿಶಿಯು 'ಹುಕುಮು'ನ್ನು 'ಜಾರಿ' ಮಾಡಿದಳು. ನಾವಿಕರು ಹಡಗನ್ನು ತೀರಕ್ಕೆ ಕಟ್ಟಿದರು. ದೇವಿಯು ಹೇಳಿದ ಪ್ರಕಾರ ನಿಶಿಯು ರಂಗರಾಜನನ್ನು ಕುರಿತು, 'ಹಡಗೆಲ್ಲಿಗೆ ಬಂದಿತು? ಇಲ್ಲಿಂದೆಷ್ಟು ದೂರ? ಭೂತನಾಥಪುರವು ಎಷ್ಟಿದೆ' ಎಂದು ವಿಚಾರಿಸಿದಳು.

ರಂಗ—ಒಂದು ರಾತ್ರಿಯಲ್ಲಿ ನಾಲ್ಕುದಿನದ ಹಾದಿಯನ್ನು ಬಂದಿದ್ದೇವೆ; ರಂಗಪುರವು ಇಲ್ಲಿಂದ ಬಹಳ ದಿವಸಗಳ ಪ್ರಯಾಣವಿದೆ. ಭೂತನಾಥಪುರವು ಕಾಡು ಹಾದಿಯಿಂದೊಂದು ದಿನದ ಪ್ರಯಾಣವಿದೆ.

"ಪಾಲ್ಕಿ, ಬೋಯಿಗಳು ಒದಗುಬಹುದೆ?"

ರಂಗ—ಪ್ರಯತ್ನಪಟ್ಟರೆ ಸಿಗಬಹುದು.

ದೇವೆಯು ನಿಶಿಯನ್ನು ಕುರಿತು, 'ಮಾವಂದಿರನ್ನು ಸ್ನಾನಾಹ್ನಿಕಕ್ಕಳಿಸು' ಎಂದಳು.

ದಿವಾ—ಅವಸರವೇಕೆ?

ನಿಶಿ— ಮಾವನ ಮಗನು ರಾತ್ರಿಯೆಲ್ಲಾ ಹೊರಗೆ ಕುಳಿತಿದ್ದುದು ಗೊತ್ತಿಲ್ಲವೆ? ಚಿಕ್ಕ ಮಗುವು ಸಮುದ್ರವನ್ನು ಲಂಘನಮಾಡಿ ಲಂಕೆಗೆ ಬರಲಾರದು! ಗೊತ್ತಿಲ್ಲವೆ?

ಹೀಗೆಂದು ಹೇಳಿ, ರಂಗರಾಜನನ್ನು ಕರೆದು, ಹರವಲ್ಲಭನ ಸಮಕ್ಷಮದಲ್ಲಿ, ಸಾಹೆಬನನ್ನು ಗಲ್ಲಿಗೆ ಹಾಕಬೇಕೆಂದು ಹೇಳಿ, 'ಬ್ರಾಹ್ಮಣನನ್ನು ಶೂಲಕ್ಕೆ ಹಾಕ

ಬೇಕಾದ ಆವಶ್ಯಕವಿಲ್ಲ. ಅವನನ್ನು ಪಹರೆಯಲ್ಲಿ ಸ್ನಾನಾಹ್ನಿಕಕ್ಕೆ ಕಳುಹು' ಎಂದು ಅಪ್ಪಣೆ ಮಾಡಿದಳು.

ಹರ—ನನ್ನ ವಿಚಾರದಲ್ಲೇನು 'ಹುಕುಂ' ಆಯಿತು.

ನಿಶಿಯು ಮುಖವನ್ನೊತ್ತಟ್ಟು ಓರೆ ಮಾಡಿಕೊಂಡು ಕಣ್ಣುಗಳನ್ನು ತಿರುಗಿ ಸುತ್ತ, "ನನ್ನ ಪ್ರಾರ್ಥನೆಯೇ 'ಮಂಜೂರಾ'ಗಿದೆ. ನೀವು ಸ್ನಾನಾಹ್ನಿಕವನ್ನು ಮಾಡಿಕೊಂಡು ಬರೋಣವಾಗಲಿ" ಎಂದು ಹೇಳಿದಳು.

ನಿಶಿಯು ರಂಗರಾಜನ ಕಿವಿಯಲ್ಲಿ 'ಪಹರೆಯಲ್ಲಿ' ಎಂದರೆ ಉಪಚರಿಸುವುದಕ್ಕೆ ಸಂಗಡ ಪರಿಚಾರಕರಿರಬೇಕೆಂದು ಅರ್ಥವೆಂದಳು. ರಂಗರಾಜನು ಅದೇ ಪ್ರಕಾರ ಏರ್ಪಾಡನ್ನು ಮಾಡಿ ಹರವಲ್ಲಭನನ್ನು ಸ್ನಾನಾಹ್ನಿಕಕ್ಕೆ ಕಳುಹಿದನು.

ದೇವಿಯು ನಿಶಿಯನ್ನು ಕುರಿತು, 'ಸಾಹೆಬನನ್ನು ಬಿಡುಗಡೆ ಮಾಡಲಿ. ಅವನು ರಂಗಪುರಕ್ಕೆ ಹೋಗಲಿ. ರಂಗಪುರವು ಬಹಳ ದೂರವಿರುವ ಕಾರಣ ಹೋಗಲಾರನಾಗಿ ಒಂದುನೂರು ಮೊಹರೆಗಳನ್ನವನಿಗೆ ಕೊಡಬೇಕು' ಎಂದಳು.

ನಿಶಿಯು ನೂರು ಮೊಹರೆಗಳನ್ನು ಕೊಂಡೊಯ್ದು ರಂಗರಾಜನಿಗೆ ಕೊಟ್ಟು ಕಿವಿಯಲ್ಲಿ ಏಕಾಂತವಾಗಿ ಹೇಳಿದಳು. ಅವಳ ಅಪ್ಪಣೆಯ ಪ್ರಕಾರ ರಂಗರಾಜನು ಇಬ್ಬರು ಬರಕಂದಾಜರವರೊಡನೆ ಹೋಗಿ ಸಾಹೆಬನ ಕೈಹಿಡಿದು, 'ಏಳು' ಎಂದು ಹೇಳಿದನು.

ಸಾಹೆಬ—ಎಲ್ಲಿಗೆ ಹೋಗಬೇಕು?

ರಂಗ—ನೀನು ಕೈದಿ. ಕೇಳುವುದಕ್ಕೆ ನಿನಗೆ ಅಧಿಕಾರವಿಲ್ಲ.

ಸಾಹೆಬನು ಹೆಚ್ಚು ಮಾತನ್ನು ವೆಚ್ಚಮಾಡದೆ ಇಬ್ಬರು ಬರಕಂದಾಜದವರ ಮಧ್ಯದಲ್ಲಿ ರಂಗರಾಜನ ಹಿಂದೆ ಹೋದನು. ಹರವಲ್ಲಭನು ಸ್ನಾನಕ್ಕೆ ಹೋಗಿದ್ದ ಘಾಟಿಯ ಮಾರ್ಗವಾಗಿ ಕರೆದುಕೊಂಡು ಹೋದರು.

ಹರವಲ್ಲಭನು ನೋಡಿ, 'ಸಾಹೆಬನನ್ನು ಕೊಂಡೊಯ್ಯುವದೆಲ್ಲಿಗೆ?' ಎಂದು ವಿಚಾರಿಸಿದನು.

ರಂಗರಾಜ—ಅರಣ್ಯಕ್ಕೆ.

ಹರ—ಏಕೆ?

ರಂಗ—ಅರಣ್ಯಕ್ಕೆ ಕೊಂಡೊಯ್ದು ಅಲ್ಲವನನ್ನು ಗಲ್ಲಿಗೆ ಹಾಕುವೆವು.

ಹರವಲ್ಲಭನ ಮೈ ನಡುಗಿತು. ಅವನಿಗೆ ಸಂಧ್ಯಾಹ್ನಿಕದ ಮಂತ್ರಗಳೆಲ್ಲಾ ಮರೆತುಹೋದುವು. ಸಂಧ್ಯಾವಂದನೆಯು ಸರಿಯಾಗಿ ನಡಿಯಲಿಲ್ಲ.

ರಂಗರಾಜನು ಸಾಹೆಬನನ್ನು ಅರಣ್ಯಕ್ಕೆ ಕೊಂಡೊಯ್ದು ಅಲ್ಲಿ ಸಾಹೆಬನನ್ನು ಕುರಿತು, 'ನಾವಾರನ್ನೂ ಗಲ್ಲಿಗೆ ಹಾಕುವುದಿಲ್ಲ. ನೀನು ಮನೆಗೆ ಹೋಗಿ ಸುಖವಾಗಿ ತಂದೆತಾಯಿಗೆ ಮಗನಾಗಿದ್ದುಕೊಂಡಿರು. ನಮ್ಮನ್ನು ಬೆನ್ನಟ್ಟಿ ಬರಬೇಡ. ನಿನ್ನನ್ನು ಬಿಟ್ಟಿದೆ' ಎಂದನು.

ಸಾಹೆಬನು ಮೊದಲು ಆಶ್ಚರ್ಯಪಟ್ಟು ಬಳಿಕ ತನ್ನೊಳು ತಾನೇ, ಇಂಗ್ಲಿಷರನ್ನು ಗಲ್ಲಿಗೆ ಹಾಕಲು ಬಂಗಾಳಿಗಳಿಗೆ ಅಷ್ಟುಧೈರ್ಯವೆಲ್ಲಿದೆ' ಎಂದಂದುಕೊಂಡನು.

ಬಳಿಕ ರಂಗರಾಜನು, 'ಸಾಹೆಬ! ರಂಗಪುರವು ಬಹಳ ದೂರವಿದೆ. ಹೇಗೆ ಹೋಗುವೆ ?' ಎಂದು ಕೇಳಿದನು.

ಸಾಹೆಬ—ಹೇಗೆ ಹೋಗಬೇಕೋ ಹಾಗೆ ಹೋಗುವೆನು.

ರಂಗ—ಒಂದು ಹಡಗನ್ನು ಬಾಡಿಗೆಗೆ ತೆಗೆದುಕೊ. ಅಥವಾ, ಗ್ರಾಮಕ್ಕೆ ಹೋಗಿ ಒಂದು ಕುದುರೆಯನ್ನು ತೆಗೆದುಕೋ. ಅದಿಲ್ಲದಿದ್ದರೆ ಒಂದು ಪಾಲ್ಕಿಯನ್ನು ಮಾಡಿಕೊ. ನಮ್ಮರಾಣಿಯು ನಿನಗೆ ಒಂದು ನೂರು ಮೊಹರೆಗಳನ್ನು ಕೊಡಲು ಅಪ್ಪಣೆ ಮಾಡಿದ್ದಾರೆ.

ರಂಗರಾಜನು ಮೊಹರೆಗಳನ್ನು ಎಣಿಸಲು ಪ್ರಾರಂಭಿಸಿದನು. ಸಾಹೆಬನು ಐದು ಮೊಹರೆಗಳನ್ನು ಮಾತ್ರ ತೆಗೆದುಕೊಂಡು ಮಿಕ್ಕವನ್ನು ತೆಗೆದುಕೊಳ್ಳದೆ, 'ಇದು ಯಥೇಷ್ಟವಾಯಿತು. ಇದನ್ನು ಸಾಲವಾಗಿ ತೆಗೆದುಕೊಂಡಿದ್ದೇನೆ' ಎಂದು ಹೇಳಿದನು.

ರಂಗ—ಒಳ್ಳೆಯದು, ನಾನು ಪುನಃ ಬಂದಾಗ ಸಾಲವನ್ನು ಹರಿಸು. ನಿಮ್ಮ ಸಿಪಾಯಿಗಳಲ್ಲಾರಾದರೂ ಗಾಯಪಟ್ಟಿದ್ದರೆ ಅವರಿಗದನ್ನು ಕೊಡು; ಅಥವಾ ಆರಾದರೂ ಸತ್ತಿದ್ದರೆ ಅಂತಹವರ ವಾರಸುದಾರರಿಗೆ ಕೊಡು.

ಸಾಹೆಬ—ಏಕೆ ?

ರಂಗ—ನಮ್ಮ ರಾಣಿಯವರು ಅಂತಹವರಿಗೆ ಸಾಕಾದಷ್ಟು ಹಣವನ್ನು ದಾನ ಮಾಡುವ ಪದ್ಧತಿ.

ಸಾಹೆಬನಾವದನ್ನೂ ನಂಬದೆ ಹೊರಟುಹೋದನು.

ರಂಗರಾಜನು ಅಪ್ಪಣೆಯಾಗಿದ್ದ ಪ್ರಕಾರ ಪಾಲ್ಕಿ ಬೋಯಿಗಳನ್ನು ಕರೆತರಲು ಹೊರಟುಹೋದನು.

---

## ಹತ್ತನೆಯ ಪರಿಚ್ಛೇದ

ಇತ್ತಲಾಗಿ ಮಾರ್ಗವು ನಿಷ್ಕಂಟಕವಾದುದನ್ನು ಕಂಡು ವ್ರಜೇಶ್ವರನು ಮೆಲ್ಲ ಮೆಲ್ಲನೆ ದೇವಿಯ ಬಳಿ ಬಂದು ಕುಳಿತುಕೊಂಡನು.

ದೇವಿ—ಎಲ್ಲಾ ಸರಿಯಾಗಿ ನಡೆಯಿತೆಂದು ತೋರುತ್ತದೆ. ನೀವು ಹೇಳಿದಂತೆ ಇಂದಿನದ ಕಾರ್ಯಗಳೆಲ್ಲಾ ನಡೆದುವು. ಪ್ರಾಣದಿಂದುಳಿದಿರಬೇಕೆಂದು ನೀವು ಹೇಳಿದುದರಿಂದ ನಾನು ಪ್ರಾಣದಿಂದುಳಿದುಕೊಂಡೆನು. ದೇವಿಯು ಸತ್ತುಹೋದಳು. ದೇವೀಚೌಧುರಾಣಿಯು ಇನ್ನಿಲ್ಲ. ಆದರೆ ಪ್ರಫುಲ್ಲೆಯು ಇನ್ನೂ ಬದುಕಿದ್ದಾಳೆ. ಪ್ರಫುಲ್ಲೆಯು ಇರಲೊ ಅಥವಾ ದೇವಿಯು ಸಂಗಡ ಹೋಗಲೊ ?

ವ್ರಜೇಶ್ವರನು ಪ್ರಫುಲ್ಲೆಯನ್ನು ಆದರಿಸಿ ಅವಳ ಮುಖವನ್ನು ಚುಂಬನ ಮಾಡಿದನು. ಚುಂಬನಮಾಡಿ, 'ನೀನೆನ್ನ ಮನೆಗೆ ನಡಿ, ಮನೆಯಲ್ಲಾ ಬೆಳಗಾಗುವುದು, ನೀನು ಬಾರದಿದ್ದರೆ ನಾನೂ ಹೋಗುವುದಿಲ್ಲ' ವೆಂದನು.

ಪ್ರಫುಲ್ಲ—ನಾನು ಮನೆಗೆ ಬಂದರೆ ಮಾಪಂದಿರೇನನ್ನುವರು ?

ವ್ರಜೇಶ್ವರ—ಆ ಭಾರವು ನನ್ನ ಮೇಲಿರಲಿ. ನೀನು ಪ್ರಯತ್ನಪಟ್ಟು ಮೊದಲವರನ್ನು ಮನೆಗೆ ಕಳುಹು, ನಾವು ಹಿಂದಲಿಂದ ಹೋಗೋಣ.

ಪ್ರಫುಲ್ಲ—ಪಾಲ್ಕಿ ಬೋಯಿಗಳು ಬರುವುದಕ್ಕೆ ಹೇಳಿಕಳುಹಿದ್ದೇನೆ.

ಬೋಯಿಗಳು ಪಾಲ್ಕಿ ಸಮೇತವಾಗಿ ಬೇಗನೆ ಬಂದರು. ಹರವಲ್ಲಭನು ಸಂಧ್ಯಾಹ್ನಿಕಗಳನ್ನು ಸಂಕ್ಷೇಪವಾಗಿ ಪೂರೈಸಿಕೊಂಡು ಹಡಗಿನ ಮೇಲೆ ಬಂದನು. ಬಂದು ನೋಡಲಾಗಿ, ನಿಶಿಯು ಅವನ ಫಲಾಹಾರಕ್ಕೆ ಸೊಗಸಾದ ಕಾಸಿದ ಹಾಲು, ಬೆಣ್ಣೆ, ಮೊಸರು, ಪಕ್ವವಾದ ಹಣ್ಣು ಮುಂತಾದವುಗಳನ್ನು ಸಿದ್ಧಪಡಿಸಿಟ್ಟಿದ್ದಳು. ಅವಳವನಿಗೆ ಬಹಳವಾಗಿ ಹೇಳಿ ಫಲಾಹಾರಕ್ಕೆ ಕುಳ್ಳಿರಿಸಿ, ಬಳಿಕ, 'ನೀವು ಇಂದು ನಮಗೆ ನೆಂಟರಾದಿರಿ; ಅದುಕಾರಣ ಫಲಾಹಾರ ವನ್ನಾದರೂ ಮಾಡದೆ ಹೋಗಕೂಡದು' ಎಂದು ಹೇಳಿದಳು.

ಹರವಲ್ಲಭನು ಫಲಾಹಾರಕ್ಕೆ ಮುಂಚಿತವಾಗಿ, 'ವ್ರಜೇಶ್ವರನೆಲ್ಲಿ ? ನಿನ್ನೆ ರಾತ್ರಿ ಹೊರಗೆ ಹೋದವನನ್ನು ಪುನಃ ನೋಡಲಿಲ್ಲ' ಎಂದನು.

ನಿಶಿ—ಅವನೆನ್ನ ತಂಗಿಗೆ ಗಂಡನಾಗುವನು. ಅವನ ವಿಚಾರವನ್ನು ಹಚ್ಚಿ ಕೊಳ್ಳಬೇಕಾದ ಅವಶ್ಯಕವಿಲ್ಲ. ಅವನಿಲ್ಲಿರುವನು. ನೀವು ಫಲಾಹಾರಕ್ಕೆ ಕುಳಿತು ಕೊಳ್ಳಬಹುದು. ನಾನು ಹೋಗಿ ಅವನನ್ನು ಕರೆಯುವೆನು. ತಾವಾ ಮಾತನ್ನವನಿಗೆ ಹೇಳಹೋಗಬೇಕು.

ಹರವಲ್ಲಭನು ಫಲಾಹಾರಕ್ಕೆ ಕುಳಿತುಕೊಂಡನು. ನಿಶಿಯು ಹೋಗಿ ವ್ರಜೇಶ್ವರನನ್ನು ಕರೆತಂದಳು. ಕೆಳಗಿನ ಕೊಠಡಿಯಿಂದವನು ಹೊರಗೆ ಬಂದನು. ತಂದೆ ಮಕ್ಕಳಿಬ್ಬರೂ ಪರಸ್ಪರ ನೋಡಿ ಅಪ್ರತಿಭರಾದರು. ಹರವಲ್ಲಭನು ಮನಸ್ಸಿನಲ್ಲಿ, ಮನ್ಮಥನಂತಹ ಹುಡುಗನನ್ನು ನೋಡಲಾ ಡಾಕಿನೀ ರಂಡೆಗಳು ಒಳಗೆ ಕರಕೊಂಡು ಹೋಗಿರಬೇಕೆಂದು ತಿಳಿದುಕೊಂಡು, 'ಒಳ್ಳೇದೇ ಆಯಿತು' ಎಂದಂದುಕೊಂಡನು.

ಹರವಲ್ಲಭನು ವ್ರಜೇಶ್ವರನನ್ನು ಕುರಿತು, 'ಎಲೈ ಮಗು ! ನೀನಿಲ್ಲಿಗೆ ಬಂದ ಬಗೆಯುನಗಿನ್ನೂ ಗೊತ್ತಿಲ್ಲ. ಅದು ಹೋಗಲಿ. ಅದನ್ನಿಲ್ಲಿ ಕೇಳತಕ್ಕುದಲ್ಲ. ಆ ಮಾತು ಕಡೆಗೆ ಆಗಲಿ. ಈಗ ನಾನು ಹೇಳುವುದೇನಂದರೆ—ಈ ಠಾಕೂ ರಿಣಿಯು ಒಳ್ಳೇ ಕುಲೀನರ ಹೆಂಗಸು. ಅವರ ತಂದೆಯು ನಮ್ಮ ನೆರೆಯಾಗಿದ್ದ ವನು. ಆಕೆಗೊಬ್ಬ ಅವಿವಾಹಿತೆ ತಂಗಿಯಿದ್ದಾಳೆ. ವರನಿಲ್ಲ. ಕುಲ ಹೋಗು ತ್ತದೆ. ಕುಲೀನರ ಕುಲವನ್ನು ರಕ್ಷಿಸುವುದು ಕುಲೀನರಿಗೆ ಸೇರಿದುದು. ನೀನು

ಪುನಃ ಮತ್ತೊಂದು ಮದುವೆಯನ್ನು ಮಾಡಿಕೊಳ್ಳುವುದೆನಗೂ ಸಮ್ಮತ. ನಿನ್ನ ಗರ್ಭದಾರಿಗೂ ಸಮ್ಮತ. ಅದಲ್ಲದೆ ನಿನ್ನ ಮೊದಲ ಹೆಂಡತಿಯು ಹೋದ ಬಳಿಕ ನನಗದೇ ಯೋಚನೆಯಿದ್ದಿತು. ನೀನೀಗ ಆಕೆಯ ತಂಗಿಯನ್ನು ವಿವಾಹ ಮಾಡಿಕೊ' ಎಂದನು.

ವ್ರಜೇಶ್ವರನು ಒಟ್ಟನಮೇಲೆ, 'ಅಪ್ಪಣೆಯ ಪ್ರಕಾರ' ವೆಂದನು.

ನಿಶಿಗೆ ಬಹಳ ನಗುವು ಬಂದಿತು. ಆದರವಳು ನಗಲಿಲ್ಲ. ಹರವಲ್ಲಭನು ಪುನಃ ಹೇಳತೊಡಗಿದನು :—

'ಪಾಲ್ಕಿ ಬೋಯಿಗಳು ಸಿದ್ಧವಾಗಿದ್ದಾರೆ. ನಾನು ಮುಂಚಿತವಾಗಿ ಹೋಗಿ ಗೃಹಪ್ರವೇಶಕ್ಕೆ ಸಿದ್ಧಪಡಿಸುತ್ತೇನೆ. ನೀನು ಯಥಾಶಾಸ್ತ್ರವಾಗಿ ವಿವಾಹ ಮಾಡಿಕೊಂಡು ಹೆಂಡತಿಯನ್ನು ಕರೆದುಕೊಂಡು ಬಾ' ಎಂದನು.

ವ್ರಜೇಶ್ವರ—ಅಪ್ಪಣೆಯ ಪ್ರಕಾರ.

ಹರ—ನಾನು ಹೆಚ್ಚು ಹೇಳತಕ್ಕುದಿಲ್ಲ. ನೀನು ಚಿಕ್ಕ ಹುಡುಗನಲ್ಲ-ಕುಲ, ಶೀಲ, ಜಾತಿ, ಮರ್ಯಾದೆಗಳೆಲ್ಲವನ್ನೂ ವಿಚಾರಮಾಡಿ ಮದುವೆಮಾಡಿಕೊ, ಮುಂದೆ ಮಾತು ಬಾರದಿರಲೆಂದು ಹೇಳುತ್ತೇನೆ. ನಮಗೆ ನ್ಯಾಯವಾಗಿ ಬರತಕ್ಕುದುದೇನೋ ಅದನ್ನು ನೀನೇ ಬಲ್ಲೆ.

ವ್ರಜ—ಅಪ್ಪಣೆಯ ಪ್ರಕಾರ.

ಹರವಲ್ಲಭನು ಫಲಾಹಾರವನ್ನು ಪೂರೈಸಿಕೊಂಡು ಬಳಿಕ ಹೊರಟನು. ವ್ರಜೇಶ್ವರನೂ ನಿಶಿಯೂ ಆತನಿಗೆರಗಿದರು. ಪಾಲ್ಕಿಯನ್ನೇರಿ ಹರವಲ್ಲಭನು ನಿಟ್ಟುಸುರನ್ನು ಬಿಟ್ಟು ದುರ್ಗೆಯ ನಾಮಸ್ಮರಣೆಯನ್ನು ಮಾಡಿ, 'ಇಂದು ಪ್ರಾಣವುಳಿಯಿತು!' ಎಂದಂದುಕೊಂಡನು. ಬಳಿಕ ಮನಸ್ಸಿನಲ್ಲಿ, 'ಹುಡುಗನು ಡಾಕಿನಿಯರ ಕೈಯಲ್ಲಿ ಸಿಕ್ಕಿದ್ದಾನೆ. ಆದರೆ ಭಯವಿಲ್ಲ. ಅವನಿಗೆ ಮಾರ್ಗವು ಗೊತ್ತು. ಮನ್ಮಥನ ಹಾಗಿರುವವನಿಗೆ ಎಲ್ಲಿ ಹೋದರೂ ಜಯ!' ಎಂದು ಹೇಳಿಕೊಂಡನು.

ಹರವಲ್ಲಭನು ಹೊರಟುಹೋದ ಬಳಿಕ ವ್ರಜೇಶ್ವರನು ನಿಶಿಯನ್ನು ನೋಡಿ, 'ಇದೇನು? ಪುನಃ ಠಕ್ಕು! ನಿನಗೆ ತಂಗಿ ಯಾರು?' ಎಂದನು.

ನಿಶಿ—ಗೊತ್ತಿಲ್ಲವೆ? ಅವಳ ಹೆಸರು ಪ್ರಫುಲ್ಲೆ.

ವ್ರಜ—ಓಹೋ, ಗೊತ್ತಾಯಿತು! ಕರ್ತನನ್ನಾವ ಪ್ರಕಾರ ಸಂಬಂಧ ಕೊಪ್ಪುವಂತೆ ಮಾಡಿದೆ?

ನಿಶಿ—ಹೆಂಗಸರಿಗೆ ಅನೇಕ ಉಪಾಯಗಳುಂಟು. ಮತ್ತೊಬ್ಬ ತಂಗಿಯು ನಿನಗೆ ಅತ್ತೆಯಾಗಲು ಇಷ್ಟಪಡುವುದಿಲ್ಲ. ಅವಳಿಷ್ಟಪಟ್ಟಿದ್ದರೆ ಮತ್ತೊಂದು ನೆಂಟಸ್ತಿಕೆಗೆ ನಿಮ್ಮ ತಂದೆಯನ್ನೊಪ್ಪಿಸುತಿದ್ದೆನು.

ದಿವಾ ಕೋಪಗೊಂಡು, 'ನೀನು ಬೇಗನೆ ಸಾಯಿಬಾರದೆ! ಲಜ್ಜೆ

ಮರ್ಯಾದೆ ಏನೂ ಇಲ್ಲ—ಪುರುಷರ ಮುಂದೆ ಅಂತಹ ಮಾತಾಡುವುದೆ?" ಎಂದಳು.

ನಿಶಿ—ಪುರುಷರಾರು? ವ್ರಜೇಶ್ವರನೆ! ನಿನ್ನೆ ನೋಡಲಿಲ್ಲವೆ? ಪುರುಷ ರಾರು, ಹೆಂಗಸರಾರು! ಎಂಬುದನ್ನು!

ವ್ರಜ—ಇಂದು ನೋಡುವೆ—ನೀನು ಹೆಂಗಸಿನ ಬುದ್ಧಿಯಂತೆ ದಪ್ಪದಾದ ಬುದ್ಧಿಯಿಂದ ಕೆಲಸವನ್ನು ಮಾಡದೆ—ಕಾರ್ಯವೇನೋ ಚೆನ್ನಾಗಿ ಆದಂತಿಲ್ಲ—

ನಿಶಿ—ಪುನಃ ಅದೇನು ಬಂತು?

ವ್ರಜ—ತಂದೆಗೆ ವಂಚಿಸುವುದೆ? ತಂದೆಯ ಕಣ್ಣಿಗೆ ಮಣ್ಣನ್ನು ಹಾಕಿ ಹೆಂಡತಿಯನ್ನು ಕರೆದುಕೊಂಡು ಹೋಗಿ ಮನೆಯಲ್ಲಿ ಸಂಸಾರವನ್ನು ಮಾಡಲಾದೀತೆ? ತಂದೆಗೆ ಮೋಸಮಾಡುವವನು ಆವ ಕೆಲಸವನ್ನು ಮಾಡದಿರುವನು?

ನಿಶಿಯು ಅಪ್ರತಿಭೆಯಾಗಿ ಮನಸ್ಸಿನಲ್ಲಿ, ವ್ರಜೇಶ್ವರನು ಪುರುಷನೇ ಅಹುದು ಎಂದೊಪ್ಪಿ, ಆದರೆ ಯುದ್ಧಕ್ಕೆ ಮಾತ್ರ ಯೋಗ್ಯನಲ್ಲವೆಂದಂದುಕೊಂಡು, ಈಗದಕ್ಕೇನುಪಾಯ?" ಎಂದು ಕೇಳಿದಳು.

ವ್ರಜ—ಉಪಾಯವಿದೆ. ನಡೆಯಿರಿ, ಪ್ರಫುಲ್ಲೆಯನ್ನು ಕರೆದುಕೊಂಡು ಮನೆಗೆ ಹೋಗೋಣ. ಅಲ್ಲಿಗೆ ಹೋಗಿ ತಂದೆಗೆ ಸಂಗತಿಗಳನ್ನೆಲ್ಲಾ ತಿಳಿಸೋಣ. ಮುಚ್ಚುಮರೆ ಕೂಡದು.

ನಿಶಿ—ಹಾಗಾದರೆ ನಿಮ್ಮ ತಂದೆಯು ದೇವೀಚೌಧುರಾಣಿಯನ್ನು ಮನೆಗೆ ಕರೆದುಕೊಳ್ಳುವನೆ?

ವ್ರಜ—ದೇವೀಚೌಧುರಾಣಿ ಯಾರು? ದೇವೀಚೌಧುರಾಣಿಯು ಸತ್ತು ಹೋದಳು—ಅವಳ ಹೆಸರೀ ಪೃಥುವಿಯಲ್ಲಾರೂ ಬಾಯಲ್ಲಿ ಹೇಳಕೂಡದು. ಪ್ರಫುಲ್ಲೆಯ ಮಾತನ್ನು ಹೇಳು.

ನಿಶಿ—ಪ್ರಫುಲ್ಲೆಗಾದರೂ ಅವನು ಮನೆಯಲ್ಲಿ ಸ್ಥಳವನ್ನು ಕೊಡುವನೆ?

ವ್ರಜ—ಆ ಭಾರವೆನಗಿರಲೆಂದು ಹೇಳಿದ್ದೆನಲ್ಲ.

ಪ್ರಫುಲ್ಲೆಯು ಸಂತುಷ್ಟೆಯಾದಳು. ವ್ರಜೇಶ್ವರನು ಭಾರವನ್ನು ವಹಿಸಲು ಸಮರ್ಥನಾಗಿಲ್ಲದಿದ್ದರೆ ಆ ಮಾತನ್ನು ಹೇಳತಕ್ಕವನಲ್ಲವೆಂದು ತಿಳಿದಿದ್ದಳು.

---

## ಹನ್ನೊಂದನೆಯ ಪರಿಚ್ಛೇದ

ಅನಂತರ ಭೂತನಾಥಪುರಕ್ಕೆ ಪ್ರಯಾಣಮಾಡುವ ಪ್ರಯತ್ನಕ್ಕಾರಂಭವಾಯಿತು. ರಂಗರಾಜನನ್ನು ಅಲ್ಲಿಂದಲೇ ಕಳುಹಬೇಕೆಂದು ಸ್ಥಿರವಾಯಿತು. ವ್ರಜೇಶ್ವರನ ಆಳೊಬ್ಬನು ಅವನಿಂದ ಒದೆಯನ್ನು ತಿಂದಿದ್ದವನು ರಂಗರಾಜನನ್ನು ಗುರುತಿಸುವ ಸಂಭವವಿದ್ದಿತಾದ ಕಾರಣ ರಂಗರಾಜನನ್ನು ಕರೆದು

ಅವನಿಗೆ ವಿಚಾರವನ್ನೆಲ್ಲಾ ತಿಳಿಸಲಾಯಿತು. ಕೆಲವು ಸಂಗತಿಗಳನ್ನು ನಿಶಿಯು ಹೇಳಿದಳು; ಕೆಲವು ಸಂಗತಿಗಳನ್ನು ಪ್ರಫುಲ್ಲೆಯು ಹೇಳಿದಳು. ರಂಗರಾಜನದನ್ನು ಕೇಳಿ, ಅತ್ತು, 'ತಾಯಿ! ನಮ್ಮನ್ನು ತ್ಯಜಿಸುವೆಯೆಂದಾವಾಗಲೂ ತಿಳಿದಿರಲಿಲ್ಲ' ವೆಂದು ಹೇಳಿದನು. ಎಲ್ಲರೂ ಸೇರಿ ಅವನಿಗೆ ಸಮಾಧಾನವನ್ನು ಹೇಳಿದರು. ದೇವೀಗಡದಲ್ಲಿದ್ದ ಪ್ರಫುಲ್ಲೆಯ ಮನೆ, ಸಂಪತ್ತುಗಳನ್ನೆಲ್ಲಾ ರಂಗರಾಜನಿಗೆ ಕೊಟ್ಟಳು. ಕೊಟ್ಟು, 'ಅಲ್ಲಿಗೆ ಹೋಗಿ, ನಿತ್ಯವೂ ದೇವರಿಗೆ ಆಗುವ ನೈವೇದ್ಯ ದಿಂದ ಕಾಲಹರಣೆ ಮಾಡಿಕೊಂಡಿರು, ಪುನಃ ದೊಣ್ಣೆಯನ್ನು ಹಿಡಿಯಬೇಡ. ನೀವು ಪರೋಪಕಾರವೆಂದು ಹೇಳುವುದು ಪರಪೀಡನವಾಗುತ್ತದೆ. ದೊಣ್ಣೆಯ ಪ್ರಹಾರ ದಿಂದ ಪರೋಪಕಾರವಾಗುವುದಿಲ್ಲ. ದುಷ್ಟರ ದಮನವನ್ನು ರಾಜನು ಮಾಡದಿದ್ದರೆ ಈಶ್ವರನು ಮಾಡುವನು—ಆ ಕಾರ್ಯವನ್ನು ವಹಿಸುವುದಕ್ಕೆ ನಾವಾರು ? ಶಿಷ್ಟರ ಪಾಲನೆಯ ಭಾರವನ್ನು ವಹಿಸಿಕೊಳ್ಳಿರಿ—ಆದರೆ ದುಷ್ಟರನ್ನು ದಮನ ಮಾಡುವ ಭಾರವನ್ನು ಈಶ್ವರನಲ್ಲಿಡಿ. ನಾನು ಹೀಗೆಂದು ಹೇಳಿದೆನೆಂದು ಭವಾನಿಠಾಕೂರರಿಗೆ ನನ್ನ ಕೋಟಿ ಕೋಟಿ ಪ್ರಣಾಮಗಳೊಂದಿಗೆ ತಿಳಿಸು' ಎಂದು ಹೇಳಿದಳು.

ರಂಗರಾಜನು ಅಳುತ ಅಳುತ ಬೀಳ್ಕೊಂಡು ಹೊರಟುಹೋದನು. ದಿವಾ ನಿಶಿ ಇಬ್ಬರೂ ಭೂತನಾಥಪುರದ ಘಾಟಿಯವರೆಗೆ ಸಂಗಡ ಹೋದರು. ಅಲ್ಲಿಂದವ ರಿಬ್ಬರೂ ಹಿಂದಕ್ಕೆ ದೇವೀಗಡಕ್ಕೆ ಹೋಗಿ ಅಲ್ಲಿ ದೇವರ ಹಸ್ತದಿಂದ (ಪ್ರಸಾದದಿಂದ) ಕಾಲಕ್ಷೇಪ ಮಾಡುತ್ತ ಹರಿಸಂಕೀರ್ತನೆಯನ್ನು ಮಾಡಿಕೊಂಡಿರಬೇಕೆಂದು ಗೊತ್ತಾಯಿತು. ಹಡಗಿನಲ್ಲಿ ದೇವಿಯ ರಾಣೀಗಿರಿಯ ಬಹುಮೂಲ್ಯದ ಸಾಮಾನು ಗಳಿದ್ದುವೆಂದು ಪಾಠಕರಿಗೆ ಜ್ಞಾಪಕವಿರಬಹುದು. ಪ್ರಫುಲ್ಲೆಯು ಅದನ್ನೆಲ್ಲ ದಿವಾ ನಿಶಿ ಅವರಿಬ್ಬರಿಗೆ ಕೊಟ್ಟಳು. ಕೊಟ್ಟು 'ಅವನ್ನೆಲ್ಲಾ ಮಾರಿ ಬೇಕಾದಷ್ಟು ಇಟ್ಟುಕೊಂಡು ಮಿಕ್ಕುದುದನ್ನು ದರಿದ್ರರಿಗೆ ಕೊಡಬೇಕು. ಅದು ನನ್ನದಲ್ಲ- ನನಗದಾವದೂ ಬೇಡ'ವೆಂದು ಹೇಳಿ, ತನ್ನ ಸ್ವಂತ ವಸ್ತ್ರಾಭರಣಗಳನ್ನೂ ಅವರಿಬ್ಬ ರಿಗೆ ಕೊಟ್ಟಳು.

ನಿಶಿ—ಬೇಡ, ನಿರಾಭರಣೆಯಾಗಿ ಅತ್ತೆಯ ಮನೆಗೆ ಹೋಗುವುದುಂಟೆ?

ಪ್ರಫುಲ್ಲೆಯು ವ್ರಜೇಶ್ವರನನ್ನು ನೋಡುತ್ತ, ಅವನನ್ನು ತೋರುತ್ತ, 'ಹೆಂಗಸರಿಗಿದೇ ಸಕಲೈಶ್ವರ್ಯ, ಸಕಲ ಸಂಪತ್ತು, ಸಕಲವಾದ ಆಭರಣಗಳಿಗಿಂತ ಹೆಚ್ಚಾದುದು. ಬೇರೇ ಆಭರಣಗಳಿಂದ ಪ್ರಯೋಜನವಿಲ್ಲ, ತಾಯಿ!' ಎಂದಳು.

ನಿಶಿ—ನೀನಿಂದು ಮೊದಲು ಅತ್ತೆಯ ಮನೆಗೆ ಹೋಗುವವಳಾಗಿರುವುದ ರಿಂದ, ನಿನಗೆ ಸ್ತ್ರೀಧನವಾಗಿ ಸ್ವಲ್ಪ ಯೌತುಕವನ್ನು ಕೊಟ್ಟು ಆಶೀರ್ವದಿಸಿ ಕಳು ಹುವೆನು; ನೀನದನ್ನು ಬೇಡವೆಂದು ಹೇಳಕೂಡದು. ಅದೆನ್ನ ಕಡೆಯ ಆಶೆ. ನನ್ನಾಶೆಯನ್ನು ಭಂಗಮಾಡಬೇಡ.

ಹೀಗೆಂದು ಹೇಳಿ ನಿಶಿಯು ಬಹು ಮೂಲ್ಯದ ರತ್ನಾಭರಣಗಳಿಂದ ಪ್ರಫುಲ್ಲೆ

ಯನ್ನು ಶೃಂಗರಿಸಲಾರಂಭಿಸಿದಳು. ನಿಶಿಯು ರಾಜನ ಮನೆಯಲ್ಲಿದ್ದಾಗ ರಾಜ
ಮಹಿಷಿಯಿಂದ ಬಹು ಬೆಲೆಯ ಆಭರಣಗಳನ್ನು ಪಡೆದಿದ್ದಳೆಂಬುದು ಪಾಠಕರಿಗೆ
ಗೊತ್ತಿದೆ. ಅದೇ ಆಭರಗಳನ್ನೀಗವಳು ಪ್ರಫುಲ್ಲೆಗೆ ತೊಡಿಸುತಿದ್ದಳು—
ದೇವಿಯು ನಿಶಿಗೆ ಬೇರೆ ಆಭರಣಗಳನ್ನು ಕೊಟ್ಟಿದ್ದಳಾಗಿ ನಿಶಿಯು ತನ್ನ ಸ್ವಂತ
ಆಭರಣಗಳನ್ನು ಹಾಗೆಯೇ ಇಟ್ಟಿದ್ದಳು. ಪ್ರಫುಲ್ಲೆಯು ನಿರಾಭರಣೆಯಾಗಿದ್ದ
ಕಾರಣ ಅವುಗಳನ್ನೆಲ್ಲಾ ನಿಶಿಯು ಅವಳಿಗೆ ತೊಡಸಿದಳು. ಅನಂತರ ಕೆಲಸವು
ಪೂರೈಸಿತು. ಕೆಲಸವಿಲ್ಲದೆ ಮೂವರು ಅಳುವುದಕ್ಕೆ ತೊಡಗಿದರು ! ನಿಶಿಯು
ಒಡವೆಗಳನ್ನು ತೊಡಿಸುವಾಗಲೇ ರಾಗವನ್ನೆತ್ತಿದ್ದಳು. ದಿವಾ ಅದಕ್ಕೆ ಶ್ರುತಿ
ಯನ್ನು ಹಿಡಿದಳು. ಶ್ರುತಿಗೆ ಸರಿಯಾಗಿ ಮತ್ತೊಂದು ರಾಗವೆದ್ದಿತು. ಪ್ರಫುಲ್ಲೆಯೂ
ಅತ್ತಳು. ಅಳದೆ ಉಂಟೆ ? ಮೂವರು ಆಂತರಿಕವಾಗಿ ಪರಸ್ಪರ ಪ್ರೀತಿ ವಿಶ್ವಾಸ
ವುಳ್ಳವರಾಗಿದ್ದವರು. ಆದರೆ ಪ್ರಫುಲ್ಲೆಯ ಮನಸ್ಸು ಆಹ್ಲಾದದಿಂದುಬ್ಬಿದ್ದಿತು.
ಅದುಕಾರಣ ಅವಳು ಸ್ವಲ್ಪದರಲ್ಲಿಯೇ ಸಮಾಧಾನಗೊಂಡಳು. ನಿಶಿಯು
ಪ್ರಫುಲ್ಲೆಯ ಮನಸ್ಸು ಸುಖಪರಿಪೂರ್ಣವಾಗಿದೆಯೆಂದು ತಿಳಿದು ಅವಳೂ ಆ
ಸುಖದಲ್ಲಿ ಸುಖಿಯಾದಳು. ಅವಳ ಅಳುವೂ ನಿಂತಿತು. ಸುಖವನ್ನು ಪೂರ್ಣ
ಮಾಡಲು ಬೇಕಾಗಿದ್ದ ಭಾಗವನ್ನು ದಿವಾ ಪೂರ್ಣಮಾಡಿದಳು.

ಯಥಾಕಾಲದಲ್ಲಿ ಭೂತನಾಥಪುರದ ಘಾಟಿಗೆ ಎಲ್ಲರೂ ಬಂದರು. ಅಲ್ಲಿ ದಿವಾ
ನಿಶಿ ಇಬ್ಬರ ಪಾದಧೂಳಿಯನ್ನು ತೆಗೆದುಕೊಂಡು ಪ್ರಫುಲ್ಲೆಯು ಅವರಿಬ್ಬರಿಗೂ
ಅಪ್ಪಣೆಯನ್ನು ಕೊಟ್ಟಳು. ಅವರು ಅಳುತಳುತ ಅದೇ ಹಡಗಿನಲ್ಲಿ ಹಿಂದಿರುಗಿ
ದೇವೀಗಡಕ್ಕೆ ಹೋಗಿ ತಲಪಿದರು. ನಾವಿಕರಿಗೆ ಕೊಡಬೇಕಾಗಿದ್ದ ಕೂಲಿಯನ್ನು
ಕೊಟ್ಟು ಕಳುಹಿದರು. ಪ್ರಫುಲ್ಲೆಯು ಹೇಳಿದ್ದ ಪ್ರಕಾರ ಹಡಗು ಎಲ್ಲರಿಗೂ
ಗೊತ್ತಾಗಿದ್ದುದಾದಕಾರಣ ನಿಶಿಯು ಅದನ್ನೊಡಿಸಿ ಎರಡು ವರ್ಷಕ್ಕೆ ಸಾದೆ
ಯಾಗಿಟ್ಟುಕೊಂಡಳು.

ಆ ಸಾದೆಯಲ್ಲೊಂದು ಚಕ್ಕೆಯನ್ನು ಪಾಠಕಮಹಾಶಯರು ಉಡುಗುರೆ
ಯಾಗಿ ತೆಗೆದುಕೊಂಡು ನಿಶಿಯು ಅಪ್ಪಣೆಯನ್ನು ತೆಗೆದುಕೊಳ್ಳೋಣವಾಗಲಿ. ಆ
ಚಕ್ಕೆಯು ಅನುಪಯುಕ್ತವಾಗದು !!

---

## ಹನ್ನೆರಡನೆಯ ಪರಿಚ್ಛೇದ

ಭೂತನಾಥಪುರದ ಘಾಟಿಯಲ್ಲಿ ಹಡಗು ಬಂದು ನಿಲ್ಲುತ್ತಲೇ, ಹೇಗೋ
ಹೇಳಲಸಾಧ್ಯ, ಗ್ರಾಮದಲ್ಲೆಲ್ಲಾ ವ್ರಜೇಶ್ವರನು ಪುನಃ
ಮತ್ತೊಂದು ಮದುವೆಯನ್ನು ಮಾಡಿಕೊಂಡು ಬಂದನೆಂದು ಪ್ರವಾದವು
ಹುಟ್ಟಿತು. ಹೆಣ್ಣು ಚಿಕ್ಕದೋ ದೊಡ್ಡದೋ ಗೊತ್ತಿಲ್ಲ. ಅದುಕಾರಣ ದೊಡ್ಡ

ವರೂ ಚಿಕ್ಕವರೂ ಹೆಂಗಸರೂ ಗಂಡಸರೂ ಕುರುಡರೂ ಕುಂಟರೂ ಎಲ್ಲರೂ, ಬಂದಿರುವ ಸೊಸೆಯನ್ನು ನೋಡುವುದಕ್ಕೆ ಸಲವಾಗಿ, ತಾವು ತಾವು ಮಾಡುತ್ತಿದ್ದ ಕೆಲಸವನ್ನು ಬಿಟ್ಟೋಡಿ ಬಂದರು. ಅಡಿಗೆಯನ್ನು ಮಾಡುತ್ತಿದ್ದವಳು ಅನ್ನ ಕುದಿಯುತ್ತಿದ್ದ ಹಾಗೆ ಓಡಿಬಂದಳು. ಸ್ನಾನ ಮಾಡುತ್ತಿದ್ದವಳು ಒದ್ದೇಬಟ್ಟೆಯಲ್ಲಿಯೇ ಹೊರಗೆ ಹೊರಟುಬಂದಳು. ಊಟವನ್ನು ಮಾಡುತಿದ್ದವಳು ಹೊಟ್ಟೆತುಂಬ ಊಟಮಾಡದೆ ಎದ್ದು ಬಂದರು. ಗಂಡನಿಗೆ ಬಡಿಸುತಿದ್ದವಳು ಮಧ್ಯೆ ಓಡಿಬಂದಳು. ಅಂದು ಗಂಡನಿಗೆ ಪೂರಾ ಊಟವಿಲ್ಲ. ಮಮ್ಮಗಳ ಸಂಗಡ ಜಗಳವಾಡುತಿದ್ದ ಅಜ್ಜಿಯೂ ಸಮಾಚಾರವನ್ನು ಕೇಳಿದೊಡನೆ ಮಮ್ಮಗಳನ್ನು ಕುರಿತು, 'ನನ್ನನ್ನೂ ಕೈಹಿಡಿದು ಕರಕೊಂಡು ಹೋಗೆ ನಾನೂ ನೋಡುವೆನು' ಎಂದು ಕೂಗಿ, ಮಮ್ಮಗಳ ಕೈಯನ್ನು ಹಿಡಿದುಕೊಂಡು ಕೊಳದವರೆಗೆ ಬಂದಳು. ಅಷ್ಟರೊಳಗೆ ಸೊಸೆಯು ಮುಂದೆ ಹೊರಟುಹೋಗಿದ್ದಳು. ತಾಯಿಯ ಸಂಗಡ ಜಗಳವಾಡಿ ಮನೆಯಿಂದ ಹೊರಗೆ ಹೋಗುವುದಿಲ್ಲವೆಂದು ಹೇಳುತ್ತಿದ್ದ ಯುವತಿಯೊಬ್ಬಳು ಸೊಸೆಯು ಬಂದಳೆಂಬ ಸಮಾಚಾರವು ಬರುತ್ತಲೇ ಹೊರಗೆ ಹೊರಟು ಹರವಲ್ಲಭನ ಮನೆಯ ಕಡೆಗೆ ಓಡಿದಳು. ಮಗುವಿಗೆ ಸ್ತನ್ಯವನ್ನು ಕೊಡುತ್ತಿದ್ದವಳು ಮಗುವನ್ನು ಬಿಟ್ಟೋಡಿದಳು. ಮಗುವು ಅಳುತ್ತ ಬೆನ್ನಟ್ಟಿ ಬಂದಿತು. ಗಂಡ ಭಾವಂದಿರು ಬಾಗಿಲಲ್ಲಿ ಕುಳಿತಿದ್ದರೂ ಅವರನ್ನು ನೋಡದೆ ಮುಖದ ಬಟ್ಟೆಯಿಲ್ಲದೆ ಮೈಮೇಲಿನ ಸೆರಗು ಜರಿದುಹೋದುದನ್ನು ಸರಿಮಾಡಿಕೊಳ್ಳದೆ ಸೊಸೆಯನ್ನು ನೋಡುವುದಕ್ಕೆ ಕೆಲವರು ಹೋಗುತ್ತಿದ್ದರು. ಹೋಗುವ ರಭಸದಲ್ಲಿ ತಲೆಯ ಕೂದಲು ಬಿಚ್ಚಿಹೋಗಿದ್ದುದನ್ನು ಮುಡಿಕಟ್ಟಿಕೊಳ್ಳಲವಕಾಶವಿರಲಿಲ್ಲ. ಉಟ್ಟ ಬಟ್ಟೆಯು ಹಿಂದು ಮುಂದಾಗಿ ಸಿಕ್ಕಿದ ಸೆರಗನ್ನೆಳೆಯುತ್ತಾರೆ, ಅದು ಸರಿಯಾಗಿ ಮೈತುಂಬ ಮುಚ್ಚುವುದಿಲ್ಲ. ಬಹಳ ಅವಸರ, ಗದ್ದಲ ಹತ್ತಿದೆ! ಲಜ್ಜಾದೇವಿಯು ಲಜ್ಜೆಗೊಂಡು ಪಲಾಯನವಾಗಿ ಹೋಗಿಬಿಟ್ಟಳು.

ವಧೂವರರು ಬಂದು ಮನೆಯ ಮುಂದೆ ಮಣೆಯಮೇಲೆ ನಿಂತರು. ಯಜಮಾನಿಯು ಮನೆಯೊಳಗವರನ್ನು ಕರೆದುಕೊಂಡು ಹೋಗುವುದಕ್ಕೆ ಮೊದಲು ಕಾಲಿಗೆ ನೀರನ್ನು ಕೊಟ್ಟು ಆರತಿಯನ್ನು ತಂದು ನಿಂತಳು. ಸೊಸೆಯ ಮುಖವನ್ನು ನೋಡಲು ಜನರು ಬಂದು ನಿಂತಿದ್ದಾರೆ. ಆದರೆ ಸೊಸೆಯು ಸೊಸೆತನವನ್ನು ಬಿಡಲಿಲ್ಲ. ಒಂದು ಮೊಳದ ಗೋಷಬಟ್ಟೆಯನ್ನು ಮುಖದ ಮೇಲೆಳೆದು ಹಿಡಿದುಕೊಂಡಿದ್ದಾಳೆ. ಮುಖವೊಬ್ಬರಿಗೂ ಕಾಣದು. ಅತ್ತೆಯು ಆರತಿಯನ್ನೆತ್ತುವುದಕ್ಕೆ ಮುಂಚಿತವಾಗಿ ಮುಖದ ಪರದೆ ಬಟ್ಟೆಯನ್ನೆತ್ತಿ ಮುಖಕ್ಕೆ ಕುಂಕುಮವನ್ನಿಡುವಾಗ ಮುಖವನ್ನು ಸ್ವಲ್ಪ ನೋಡಿದಳು. ನೋಡಿ ಚಮಕಿತೆಯಾಗಿ ಏನನ್ನೂ ಹೇಳದೆ ಸೊಸೆಯು ಚಂದವುಳ್ಳ ಚಲುವೆಯೆಂದು ಮಾತ್ರ ಹೇಳಿದಳು. ಅವಳ ಕಣ್ಣಿನಿಂದ ಒಂದೆರಡು ಬೊಟ್ಟು ನೀರು ತೊಟ್ಟಿತು.

ಯಜಮಾನಿಯು ಆರತಿಯನ್ನೆತ್ತಿ ಬಂದಿದ್ದವರಿಗೆ ಅರಸಿನ ಕುಂಕುಮ ತಾಂಬೂಲಗಳನ್ನು ಕೊಟ್ಟು, 'ಅಮ್ಮಾ! ಹುಡುಗನೂ ಸೊಸೆಯೂ ಬಹಳ ದೂರ ದಿಂದ ಬಂದು ಶ್ರಮಿಸಿದ್ದಾರೆ; ಊಟಮಾಡುವ ಶಾಸ್ತ್ರವಾಗುವುದು; ಮನೆಯ ಸೊಸೆಯು ಮನೆಯಲ್ಲಿರುವಳು; ಆವಾಗಬೇಕಾದರೂ ಬಂದು ನೋಡಬಹುದು; ಈಗ ಎಲ್ಲರೂ ಮನೆಗೆ ಹೋಗಿ ಊಟ ಉಪಚಾರವಾದ ಬಳಿಕ ಬಂದು ನೋಡ ಬಹುದು' ಎಂದಳು.

ಯಜಮಾನಿಯ ಮಾತನ್ನು ಕೇಳಿ ನೆರದಿದ್ದ ನೆರೆಹೊರೆಯವರು ಅಪ್ರಸನ್ನ ರಾಗಿ, 'ಆರೂ ಕಾಣದ ಸೊಸೆಯನ್ನು ಅವಳೇ ಕಂಡವಳೇನೋ!' ಎಂದಂದು ಕೊಂಡು ಹೊರಟುಹೋದರು. ತಪ್ಪು ಯಜಮಾನಿಯದಾಯಿತು. ನಿಂದೆಯು ವಧೂವರರ ತಲೆಯಮೇಲೆ ಹೊತ್ತಿತು. ಏಕೆಂದರೆ, ವಧುವಿನ ಮುಖವು ಕಾಣ ಲಿಲ್ಲ. ಹೆಣ್ಣು ವಯಸ್ಸಾದುದೆಂದು ನಿಂದಿಸಿ, 'ಕುಲೀನರ ಮನೆಯಲ್ಲಿ ಆಗುವುದೇ ಹೀಗೆ!' ಎಂದು ಹೇಳಿಕೊಂಡು ಹೊರಟುಹೋದರು. ಎಲ್ಲಿ ನೋಡಿದರೂ ಒಂದೇ ಪ್ರಸ್ತಾಪ. ಮುದಿ ಸೊಸೆಯ ವೃತ್ತಾಂತಗಳು ಹೊರಟುವು. ಗೋವಿಂದ ಮುಖ್ಯೋಪಾಧ್ಯಾಯನು ಐವತ್ತು ವರ್ಷದ ಮುದಿಗೊಡ್ಡನ್ನು ಮದುವೆಮಾಡಿ ಕೊಂಡಿದ್ದನು; ಹರಿಚಟ್ಟೋಪಾಧ್ಯಾಯನು ಎಪ್ಪತ್ತು ವರ್ಷದ ಕನ್ಯೆಯನ್ನು ಮನೆಗೆ ಕರೆತಂದಿದ್ದನು; ಮನುವಂದೋಪಾಧ್ಯಾಯನು ಸಾಯುವ ಮುದುಕಿ ಯನ್ನು ಪಾಣಿಗ್ರಹಣಮಾಡಿಕೊಂಡಿದ್ದನು! ಹೀಗೆಂದು ಅನೇಕ ಉಪಾಖ್ಯಾನಗಳು ಸಾಲಂಕಾರವಾಗಿ ದಾರಿಯಲ್ಲಿ ವ್ಯಾಖ್ಯಾತವಾಗುತಿದ್ದುವು. ಈ ಪ್ರಕಾರವಾದ ಆಲೋಚನೆಗಳೆಲ್ಲಾ ನಡೆದು ಗ್ರಾಮದಲ್ಲಿ ಗದ್ದಲವು ಕ್ರಮೇಣ ಶಾಂತವಾಯಿತು.

ಗದ್ದಲವು ಅಡಗಿದ ಬಳಿಕ, ಯಜಮಾನಿಯು, ವ್ರಜೇಶ್ವರನನ್ನು ಆರೂಕಾಣದ ಕಡೆ ಕರೆದು, 'ಮಗು! ಸೊಸೆಯು ಎಲ್ಲಿ ಸಿಕ್ಕಳು?' ಎಂದು ಕೇಳಿದಳು.

ವ್ರಜ—ಅಮ್ಮ! ಹೊಸ ಮದುವೆಯಲ್ಲ.

ಯಜಮಾನಿ—ಹೋಗಿದ್ದ ಧನವೆದ್ದಿತೊ? ಮಗು!

ಯಜಮಾನಿಯ ಕಣ್ಣಿನಿಂದ ನೀರು ತೊಟಕುತಿದ್ದಿತು.

ವ್ರಜ—ಅಮ್ಮ! ದೇವರು ದಯೆಗೈದು ಪುನಃ ಕೊಡಿಸಿದನು! ನೀನೀಗ ತಂದೆಗೆ ಏನನ್ನೂ ಹೇಳಬೇಡ. ಆರೂ ಇಲ್ಲದಿರುವಾಗ ಸಮಯವನ್ನು ನೋಡಿ ಸಂಗತಿಗಳನ್ನೆಲ್ಲಾ ನಾನೇ ಹೇಳುವೆನು.

ಯಜಮಾನಿ—ನೀನೇನೂ ಹೇಳಬೇಡ! ನಾನೇ ಹೇಳುತ್ತೇನೆ. ಗೃಹ ಪ್ರವೇಶದ ಪ್ರಸ್ತವು ನಡೆಯಲಿ–ನೀನೇನೂ ಯೋಚಿಸಬೇಡ; ಆರಿಗೂ ಏನನ್ನೂ ಹೇಳಬೇಡ.

ವ್ರಜೇಶ್ವರನದಕ್ಕೊಪ್ಪಿಕೊಂಡನು. ಕಷ್ಟವಾದಾ ಕಾರ್ಯದ ಭಾರವನ್ನು ತಾಯಿಯು ವಹಿಸಿದಳು. ಅವನಾರಿಗೂ ಏನನ್ನೂ ಹೇಳಲಿಲ್ಲ.

ಪ್ರಸ್ತವು ನಿರ್ವಿಘ್ನವಾಗಿ ನಡೆಯಿತು. ಪ್ರಸ್ತದಲ್ಲಿ ಗಲಭೆ ಯಾವದೂ ಆಗ ಲಿಲ್ಲ—ನೆಂಟರು, ಇಷ್ಟರು ಮುಂತಾದವರು ಬಂದು ಪ್ರಸ್ತವನ್ನು ಪೂರೈಸಿದರು.

ಪ್ರಸ್ತವಾದ ಬಳಿಕ ಯಜಮಾನಿಯು ಮುಖ್ಯವಾದ ಮಾತನ್ನು ಹರವಲ್ಲಭ ನಿಗೆ ತಿಳಿಸುವುದರಲ್ಲಿ, 'ಅವಳು ಹೊಸ ಸೊಸೆಯಲ್ಲ, ದೊಡ್ಡ ಸೊಸೆ' ಎಂದಳು.

ಹರವಲ್ಲಭನು ಚಮಕಿತನಾಗಿ, 'ಅದು ಹೇಗೆ? ಅದೇ ದೊಡ್ಡ ಸೊಸೆಯೆ! ಹೇಳಿದವರಾರು?' ಎಂದನು.

ಯಜಮಾನಿ—ನಾನು ಗುರುತಿಸಿದೆನು. ವ್ರಜೇಶ್ವರನೂ ಹೇಳಿದನು.

ಹರವಲ್ಲಭ—ಅವಳು ಸತ್ತು ಹತ್ತುವರ್ಷಗಳಾದವಲ್ಲ!

ಯಜಮಾನಿ—ಸತ್ತವಳು ಹಿಂದಿರುಗಿ ಬರುವಳೆ?

ಹರವಲ್ಲಭ—ಆ ಹೆಂಗಸು ಇಷ್ಟು ವರ್ಷವೆಲ್ಲಿದ್ದಳು?

ಯಜಮಾನಿ—ನಾನು ಅದನ್ನು ಕುರಿತು ವ್ರಜೇಶ್ವರನನ್ನು ಕೇಳಿಲ್ಲ-ಕೇಳು ವುದೂ ಇಲ್ಲ. ವ್ರಜೇಶ್ವರನು ಮನೆಗೆ ಕರೆತರಬೇಕಾದರೆ ಯೋಚಿಸದೆ, ತಿಳಿದು ಕೊಳ್ಳದೆ ಕರೆತರಲಾರನು.

ಹರವಲ್ಲಭ—ನಾನು ಕೇಳುವೆನು.

ಯಜಮಾನಿಯು, 'ನನ್ನಾಣೆ! ನಿಮ್ಮ ಧರ್ಮ! ನೀನಾವ ಮಾತನ್ನೂ ಕೇಳಬೇಡಿ, ನೀವು ಒತ್ತಡವ ಮಾತಾಡಿ ಅದಕ್ಕೆ ಫಲವಾಯಿತು! ಹುಡುಗನನ್ನೇ ಕಳೆದುಕೊಂಡಿದ್ದೆವು! ನನಗಿರುವವನು ಒಬ್ಬ ಹುಡುಗ, ನನ್ನಾಣೆ! ನೀವು ಒಂದು ಮಾತನ್ನೂ ಕೇಳಬೇಡಿ. ನೀವೇನಾದರೂ ಕೇಳಿದರೆ ನಾನು ನಿಜವಾಗಿ ನೇಣು ಹಾಕಿಕೊಳ್ಳುವೆನು' ಎಂದಳು. ಹರವಲ್ಲಭನು ಸುಮ್ಮನಾದನು. ಅವನೊಂದು ಮಾತನ್ನೂ ಆಡದೆ, 'ಹಾಗಾದರೆ, ಜನರಿಗೆಲ್ಲಾ ಹೊಸ ಮದುವೆಯುಂತಲೇ ತಿಳಿದಿರಲಿ' ಎಂದನು.

ಯಜಮಾನಿ—ಹಾಗೇವೇ ಇರಲಿ.

ಸಮಯಾಂತರದಲ್ಲಿ ಯಜಮಾನಿಯು ಅದನ್ನು ವ್ರಜೇಶ್ವರನಿಗೆ ತಿಳಿಸಿದಳು. ತಿಳಿಸಿ, 'ನಾನವರಿಗೆ ಹೇಳಿದ್ದೇನೆ, ಅವರಾವ ಪ್ರಸ್ತಾಪವನ್ನೂ ಮಾಡುವುದಿಲ್ಲ. ಪುನಃ ಪ್ರಸ್ತಾಪದಿಂದ ಪ್ರಯೋಜನವಿಲ್ಲ'ವೆಂದು ಹೇಳಿದಳು.

ವ್ರಜನು ಹೃಷ್ಟಚಿತ್ತನಾಗಿ ಪ್ರಫುಲ್ಲೆಗೆ ಅದನ್ನು ತಿಳಿಸಿದನು.

ಈ ತಡವೆ ಯಜಮಾನಿಯು ಯಾಜಮಾನ್ಯವನ್ನು ಚೆನ್ನಾಗಿ ನಿರ್ವಹಿಸಿದ ಳೊಂದೊಪ್ಪಿಕೊಳ್ಳುವೆವು. ಆವ ಸಂಸಾರದಲ್ಲಿ ಯಜಮಾನಿಯು ಯಾಜಮಾನ್ಯದ ಕೆಲಸವನ್ನು ಚೆನ್ನಾಗಿ ತಿಳಿದಿರುವಳೋ ಆ ಸಂಸಾರದಲ್ಲಾರಿಗೂ ಮನಸ್ಸಿಗೆ ಕುಂದುಕವುಂಟಾಗುವುದಿಲ್ಲ. ನಾವಿಕನು ಹಡಗಿನ ಹಿಡಿಯನ್ನು ಹಿಡಿದು ಸರಿಯಾಗಿ ತಿರುಗಿಸಲು ತಿಳಿದಿದ್ದರೆ ಹಡಗಿಗೆ ಭಯವೇನು?

# ಹದಿಮೂರನೆಯ ಪರಿಚ್ಛೇದ

ಪ್ರಫುಲ್ಲೆಯು ಸಾಗರೆಯನ್ನು ನೋಡಬೇಕೆಂದು ಇಷ್ಟಪಟ್ಟಳು. ವ್ರಜೇಶ್ವರನು ಮಾಡಿದ ಸೂಚನೆಗಳಿಂದ ಯಜಮಾನಿಯು ಸಾಗರೆಯನ್ನು ತಾರುಮನೆ ಯಿಂದ ಕರೆತರುವುದಕ್ಕೆ ಜನರನ್ನು ಕಳುಹಿದಳು. ಯಜಮಾನಿಗೆ ಮೂರು ಮಂದಿ ಸೊಸೆಗಳೂ ಒಂದೇ ಸ್ಥಳದಲ್ಲಿರಬೇಕೆಂದು ಆಶೆ.

ಕರೆಯುವುದಕ್ಕೆ ಹೋಗಿದ್ದ ಜನರಿಂದ ಸಾಗರೆಯು ಗಂಡನು ಮತ್ತೊಬ್ಬ ಮುದಿ ಹೆಂಗಸನ್ನು ಮದುವೆಯಾಗಿ ಹೆಂಡತಿಯನ್ನು ಮನೆಗೆ ಕರೆತಂದಿದ್ದನೆಂದು ತಿಳಿದವಳಿಗೆ ಬಹಳ ಜಿಹಾಸೆಯುಂಟಾಯಿತು, 'ಛಿ! ಮುದಿ ಹೆಂಗಸೆ!' ಎಂದು ಹೇಳುತ್ತ 'ಪುನಃ ಮದುವೆಯೆ! ನಾವಿರುವವರು ಹೆಂಡಂದಿರಲ್ಲವೆ! ಏನು ಕೇಡು!' ಎಂದು ದುಃಖಪಟ್ಟವಳಾಗಿ, 'ಅಯ್ಯೋ! ದೇವರೆ! ಬಡವರ ಮನೆಯ ಹೆಣ್ಣಾಗಲಿಲ್ಲವೇಕೆ? ನಾನು ಅವರ ಬಳಿ ಇದ್ದು ಆ ಮದುವೆಯಾಗದಂತೆ ಮಾಡುತಿದ್ದೆನಲ್ಲ!' ಎಂದೆಂದುಕೊಂಡಳು.

ಹೀಗೆ ಕೋಪಗೊಂಡವಳಾಗಿ ಕ್ಷುಣ್ಣಭಾವದಿಂದ ಸಾಗರೆಯು ಅತ್ತೆಯಮನೆಗೆ ಬಂದಳು.ಬಂದವಳು ಮೊದಲು ಸವತಿಯಾದ ನಯನತಾರೆಯ ಬಳಿಹೋದಳು. ನಯನೆಯು ಮೊದಲು ಸಾಗರೆಯ ಕಣ್ಣುಗಳಿಗೆ ಶೂಲವಾಗಿದ್ದಳು. ಸಾಗರೆಯು ನಯನೆಗೆ ಹಾಗೇವೇ ಇದ್ದಳು. ಆದರೆ ಅಂದಿಬ್ಬರೂ ಒಂದಾದರು. ಇಬ್ಬರಿಗೂ ಒಂದೇ ವಿಪತ್ತು. ಅದಕ್ಕೆ ಸಲವಾಗಿ ಸಾಗರೆಯು ಬಂದೊಡನೆ ಮೊದಲು ನಯನೆಯ ಬಳಿ ಹೋದಳು.

ಹಾವನ್ನು ಹಿಡಿದು ಗಡಿಗೆಯಲ್ಲಿ ಹಾಕಿ ಬಾಯಿಕಟ್ಟಿಟ್ಟರೆ ಬುಸುಗುಟ್ಟು ವಂತೆ ನಯನೆಯು, ಪ್ರಫುಲ್ಲೆಯು ಬಂದಾರಭ್ಯ ಸಿಡಿಮಿಡಿದು ಬುಸುಗುಟ್ಟುತ್ತ ತುಡುಗುತಿದ್ದಳು. ಒಂದು ದಿನ ಮಾತ್ರ ವ್ರಜೇಶ್ವರನನ್ನು ನೋಡಿದ್ದಳು. ಅವಳ ಬಾಯಿಗೆ ಹೆದರಿ ಅವನವಳ ಬಳಿ ಪುನಃ ಹೋಗಲಿಲ್ಲ. ಪ್ರಫುಲ್ಲೆಯೂ ಒಂದೆರಡು ತಡವೆ ಹೋಗಲೆತ್ನಿಸಿದಳು. ಅವಳಿಗೂ ಅದೇ ಅವಸ್ಥೆಯುಂಟಾಯಿತು. ಗಂಡ ಸವತಿಯರು ಹಾಗಿರಲಿ, ನೆರೆಹೊರೆಯವರೂ ನಯನೆಯ ಬಳಿ ಸುಳಿದಾಡುವುದ ಕ್ಕಾಗುತ್ತಿರಲಿಲ್ಲ. ನಯನೆಗೆ ಮೂರು ನಾಲ್ಕು ಮಕ್ಕಳು. ಆ ಹುಡುಗರಿಗೆ ಹೆಚ್ಚು ವಿಪತ್ತು. ಅವು ತಾಯಿಯ ಕೈಯಿಂದ ಪೆಟ್ಟುತಿಂದು ಪ್ರಾಣಬಿಡುತಿದ್ದುವು!

ನಯನತಾರಾದೇವಿಯು ಮಂದಿರಕ್ಕೆ ಸಾಗರೆಯು ಹೋಗಿ ದರ್ಶನವನ್ನು ಕೊಟ್ಟಳು. ನಯನೆಯು ಅವಳನ್ನು ಕಂಡು, 'ಬಾ, ಬಾರೆ, ತಂಗಿ! ನೀನೊಬ್ಬ ಳುಳಿದಿದ್ದೆ, ಮತ್ತಾರಾದರೂ ಭಾಗಿಗಳುಂಟೇನು?' ಎಂದಳು.

ಸಾಗರ—ಅದೇನು, ಪುನಃ ಮದುವೆಯೇನೋ ಆಗಿದೆಯಂತೆ?

ನಯನೆ—ಆರು ಬಲ್ಲರು? ಮದುವೆಯೊ, ಕೂಡವಳಿಯೊ, ಆದರ ಸಮಾಚಾರ ವೇನಗಿಲ್ಲ.

ಸಾಗರ—ಬ್ರಾಹ್ಮಣರಲ್ಲಿ ಕೂಡವಳಿಯುಂಟೆ ?

ನಯನ—ಬ್ರಾಹ್ಮಣಿಯೋ ಶೂದ್ರಿಯೋ ಮುಸಲ್ಮಾನರವಳೋ, ನೋಡು ವುದಕ್ಕೆ ನಾನೇನು ಹೋಗಿದ್ದೆನೆ ?

ಸಾಗರ—ಅಂತಹ ಮಾತನ್ನು ಹೇಳಬೇಡ. ಮೊದಲು ಜಾತಿಯನ್ನುಳಿಸಿ ಕೊಂಡು ಬಳಿಕ ಮಾತಾಡೋಣ.

ನಯನ—ಆರ ಮನೆಗೆ ಅಷ್ಟೊಂದು ದೊಡ್ಡವಳು ಸೊಸೆಯಾಗಿ ಬಂದಳೋ ಅಂತಹವರಿಗೆ ಜಾತಿಯಲ್ಲುಂಟೆ ?

ಸಾಗರ—ಎಷ್ಟು ದೊಡ್ಡ ಹೆಂಗಸು ? ನನ್ನ ವಯಸ್ಸಾಗಿರಬಹುದೆ ?

ನಯನ—ನಿನ್ನ ತಾಯಿಯ ವಯಸ್ಸು !

ಸಾಗರ—ಹಾಗಾದರೆ ಕೂದಲು ಬೆಳ್ಳಗಾಗಿದೆಯೆ ?

ನಯನ—ಕೂದಲು ಬೆಳ್ಳಗಾಗದಿದ್ದರೆ ಮುದಿ ಹೆಂಗಸು ಹಗಲೂ ರಾತ್ರಿ ಗೋಷೆಯನ್ನು ಬಿಡದಿರುವಳೆ ?

ಸಾಗರ—ಹಲ್ಲು ಬಿದ್ದುಹೋಗಿದೆ ?

ನಯನ—ಕೂದಲು ಬೆಳ್ಳಗಾದರೆ ಹಲ್ಲು ಬೀಳದಿರುವುದೆ ?

ಸಾಗರ—ಹಾಗಾದರೆ ಗಂಡನಿಗಿಂತ ಹಿರಿಯಳು ಮಂಡೋದರಿ ?

ನಯನ—ಪುನಃ ಕೇಳಲೇಕೆ ?

ಸಾಗರ—ಹೀಗಾಗುವುದುಂಟೆ ?

ನಯನ—ಕುಲೀನರ ಮನೆಯಲ್ಲಿ ಅದೆಲ್ಲಾ ಆಗಲೇಬೇಕು.

ಸಾಗರ—ನೋಡುವುದಕ್ಕೆ ಹೇಗಿದ್ದಾಳೆ ?

ನಯನ—ರೂಪಕ್ಕೆ ಅವಳನ್ನೇ ತರಬೇಕು! ರತೀದೇವಿ! ಸಾಕ್ಷಾತ್ತು ತಾಣಿಗರ ಹನುಮಂತನ ಕರಿತಿಮ್ಮಕ್ಕನು ಸ್ವಲ್ಪ ಮೇಲೆಂದು ಹೇಳುತ್ತಾರೆ ! ರೂಪದ ಧ್ವಜ !

ಸಾಗರ—ಮದುವೆಮಾಡಿಕೊಂಡಿರುವವಳಿಗೆ ಏನಾದರೂ ಹೇಳಕೂಡದೆ ?

ನಯನ—ಅವಳನ್ನು ಕಂಡವರಾರು ? ನೋಡಿದರೆ ಆದೀತು ! ಮೊಂಡು ಕಸಬರಿಗೆಯನ್ನು ತೆಗೆದಿಟ್ಟಿದ್ದೇನೆ.

ಸಾಗರ—ನಾನಾ ಬಂಗಾರದ ಪ್ರತಿಮೆಯನ್ನು ನೋಡಬಂದೆನಲ್ಲ !

ನಯನ—ಹೋಗು – ಹೋಗು – ನೋಡಿ – ಜನ್ಮವನ್ನು ಸಾರ್ಥಕಮಾಡಿ ಕೊಂಡು ಬಾ ; ಬೇಗನೆ ಹೋಗಿ ನೋಡು.

ಸಾಗರೆಯು ಹೊಸ ಸವತಿಯನ್ನು ಹುಡುಕಿಕೊಂಡು ಹೋಗಿ ನೋಡಲಾಗ ಅವಳು ಪುಷ್ಕರಿಣಿಯಲ್ಲಿ ಪಾತ್ರೆಗಳನ್ನು ಬೆಳಗುತ್ತ ಬೆನ್ನು ತಿರುಗಿಸಿಕೊಂಡು ಕುಳಿತಿದ್ದಳು. ಸಾಗರೆಯು ಹಿಂದಿನಿಂದ ಹೋಗಿ, ‘ ತಂಗಿ ! ನೀನೇ ಹೊಸದಾಗಿ ಮದುವೆಯಾಗಿ ಮನೆಗೆ ಬಂದ ಸೊಸೆ ? ’ ಎಂದಳು.

'ಆರು, ಸಾಗರೆಯೆ ಬಂದವಳು?' ಎಂದು ಹೊಸ ಸೊಸೆಯು ಮುಖವನ್ನು ತಿರುಗಿಸಿದಳು.

ಸಾಗರೆಯು ನೋಡಿ ವಿಸ್ಮಿತೆಯಾಗಿ ವಿಸ್ಫಾರಿತನಯನೆಯಾಗಿ, 'ದೇವೀ ರಾಣಿಯೆ!' ಎಂದಳು.

ಪ್ರಫುಲ್ಲ—ಬಾಯಿ ಮುಚ್ಚು! ದೇವಿಯು ಸತ್ತುಹೋದಳು.

ಸಾಗರ—ಪ್ರಫುಲ್ಲೆಯೆ?

ಪ್ರಫುಲ್ಲ—ಪ್ರಫುಲ್ಲೆಯೂ ಸತ್ತುಹೋದಳು!

ಸಾಗರ—ಹಾಗಾದರೆ ನೀನಾರು?

ಪ್ರಫುಲ್ಲ—ನಾನು ಹೊಸ ಸೊಸೆ.

ಸಾಗರ—ಹೇಳುವುದಕ್ಕಿದು ಸ್ಥಳವಲ್ಲ. ನನಗೂ ಒಂದು ಚಿಕ್ಕ ಕೊಠಡಿ ಇದೆ. ಅಲ್ಲಿಗೆ ನಡೆ, ಹೇಳುವೆನು.

ಇಬ್ಬರೂ ಕೊಠಡಿಯ ಬಾಗಿಲನ್ನು ಹಾಕಿ ಕುಳಿತುಕೊಂಡು ಮಾತಾಡುತ್ತ ಪ್ರಫುಲ್ಲೆಯು ವೃತ್ತಾಂತವನ್ನೆಲ್ಲ ಹೇಳಿದಳು.

ಸಾಗರ—ಮನೆಯ ಸಂಸಾರವು ಮನಸ್ಸಿಗೊಪ್ಪುವುದೆ? ಬಂಗಾರದ ಸಿಂಹಾ ಸನದಲ್ಲಿ ಕುಳಿತು ನವರತ್ನಖಚಿತವಾದ ಕಿರೀಟವನ್ನು ಧರಿಸಿ ರಾಣಿಯ ದೌಲತ್ತನ್ನು ಮಾಡಿದ ಬಳಿಕ ಮನೆಯನ್ನು ಗುಡಿಸಿ ಸಾರಿಸುವುದೊಪ್ಪುವುದೆ? ಯೋಗಶಾಸ್ತ್ರಗಳ ನ್ನೆಲ್ಲಾ ಅಧ್ಯಯನ ಮಾಡಿದವಳಿಗೆ ಬ್ರಹ್ಮಠಾಕೂರಾಣಿಯ ವಿಹಂಗಮ ವಿಹ ಗಮಿಯ ಕಥೆಗಳು ರಂಜಿಸುವುದೆ? ಆರು ಹುಕುಮನ್ನು ಮಾಡಿದೊಡನೆ ಸಾವಿರಾರು ಫೌಜು ಬಂದು ಸಾಲಿಟ್ಟು ನಿಲ್ಲುತಿದ್ದಿತೋ ಅಂತಹವಳಿಗೆ ಕಸಾಗುಡಿಸುವ ಮುದುಕಿಯ ಮೇಲೆ ಅಧಿಕಾರವನ್ನು ನಡೆಸುವುದೊಪ್ಪುವುದೆ?

ಪ್ರಫುಲ್ಲ-ಒಪ್ಪುವುದೆಂತಲೇ ಬಂದಿದ್ದೇನೆ. ಹೆಂಗಸರಿಗದೇ ಧರ್ಮವಾದುದು. ರಾಜತ್ವವು ಸ್ತ್ರೀಜಾತಿಗೆ ಧರ್ಮವಲ್ಲ; ಸಂಸಾರದ ಧರ್ಮವೇ ಕಠಿಣವಾದ ಧರ್ಮ; ಅದಕ್ಕಿಂತ ಮತ್ತಾವ ಯೋಗವೂ ಕಠಿಣವಾದುದಾಗಿರದು. ಈಗ ನೋಡು, ಎಷ್ಟು ಮಂದಿ ನಿರಕ್ಷರಕುಕ್ಷಿಗಳಾದ ಸ್ವಾರ್ಥಪರರಾದ ಅನಭಿಜ್ಞರಾದ ಮೂಢ ರಾದ ಜನರನ್ನಿಟ್ಟುಕೊಂಡು ನಾವು ನಿತ್ಯವೂ ಕಾರ್ಯವನ್ನು ನಿರ್ವಹಿಸಬೇಕು? ಅದರಲ್ಲಾರಿಗೂ ಆವ ಕಷ್ಟವಾಗದಂತೆ ಎಲ್ಲರೂ ಸುಖಿಗಳಾಗಿರುವುದಕ್ಕೇರ್ಪಾಡು ಮಾಡಬೇಕು. ಅದಕ್ಕಿಂತ ಮತ್ತಾವ ಸನ್ಯಾಸವೂ ಕಷ್ಟವಾದುದಾಗಿರದು. ಅದಕ್ಕಿಂತ ಮತ್ತಾವ ಪುಣ್ಯ ಕೆಲಸವೂ ಹೆಚ್ಚು ಪುಣ್ಯದಾಯಕವಾದುದಾಗಿರದು. ನಾನಿದಕ್ಕೆ ಸನ್ಯಾಸವೆಂದು ಹೇಳುವೆನು.

ಸಾಗರ—ಹಾಗಾದರೆ ನಾನೂ ಕೆಲವು ಕಾಲ ನಿನ್ನಲ್ಲಿದ್ದು ನಿನ್ನ ಶಿಷ್ಯಳಾಗಿರುವೆನು.

ಸಾಗರೆಯು ಹೀಗೆಂದು ಪ್ರಫುಲ್ಲೆಯೊಡನೆ ಮಾತಾಡುತ್ತಿದ್ದಾಗ

ವ್ರಜೇಶ್ವರನು ಭೋಜನಕ್ಕೆ ಕುಳಿತಿದ್ದನು. ಬ್ರಹ್ಮಠಾಕೂರಾಣಿಯು ಅವನ ಬಳಿ ಕುಳಿತಿದ್ದಳು.

ಬ್ರಹ್ಮ—ವ್ರಜ! ಈಗ ಅಡಿಗೆಯು ಹೇಗಿದೆ ?

ವ್ರಜೇಶ್ವರನಿಗೆ ಹತ್ತು ವರ್ಷದ ಹಿಂದಿನ ಮಾತು ನೆನವಿಗೆ ಬಂದಿತು; ಮಾತು ಮುಖ್ಯವಾದುದು. ಅವರಿಬ್ಬರಿಗದೇ ಮನಸ್ಸಿನಲ್ಲಿದ್ದಿತು.

ವ್ರಜ—ಅಡಿಗೆಯು ಚೆನ್ನಾಗಿದೆ.

ಬ್ರಹ್ಮ—ಢಾಲೊ ?

ವ್ರಜ—ಸೊಗಸಾಗಿದೆ.

ಬ್ರಹ್ಮ—ಅದೇಕೆ? ಹತ್ತು ವರ್ಷವಾದರೂ ನನ್ನನ್ನು ಗಂಗೆಗೆ ಕೊಂಡೊಯ್ಯಲಿಲ್ಲ?

ವ್ರಜ—ಮರೆತಿದ್ದೆನು.

ಬ್ರಹ್ಮ—ನೀನೆನ್ನನ್ನು ಗಂಗೆಗೆ ಕೊಂಡೊಯ್ಬೇಡ. ನೀನು ಬಹಿಷ್ಕೃತನಾಗಿರುವೆ.

ವ್ರಜ—ಠಾಕೂರಾಣಿ! ಆ ಮಾತನ್ನು ಹೇಳಬೇಡ. ಸುಮ್ಮನಿರು.

ಬ್ರಹ್ಮ—ಹಾಗಾದರೆ ಬಿಡು. ನನ್ನನ್ನು ಗಂಗೆಯಲ್ಲಿಡದಿರಬೇಡ. ನಾನು ಮಾತಾಡುವುದಿಲ್ಲ. ಆದರೆ ನೋಡಿಕೊ, ನನ್ನ ರಾಟೆಯನ್ನಾರೂ ಮುರಿಯದಂತಿರಬೇಕು!

---

## ಹದಿನಾಲ್ಕನೆಯ ಪರಿಚ್ಛೇದ

ಸಾಗರೆಯು ಕೆಲವು ತಿಂಗಳಿದ್ದು ನೋಡಿದಳು. ಪ್ರಫುಲ್ಲೆಯು ಅವಳ ಹೇಳಿಕೆಯ ಪ್ರಕಾರ ಎಲ್ಲವನ್ನೂ ನಿರ್ವಹಿಸುತ್ತಿದ್ದಳು. ಸಂಸಾರದಲ್ಲಿ ಎಲ್ಲರನ್ನೂ ಸುಖವಾಗಿರಿಸಿದಳು. ಅತ್ತೆಯು ಅವಳಿಂದ ಅತ್ಯಂತ ಸುಖಿಯಾಗಿ ಸಂಸಾರದ ಭಾರವನ್ನವಳಿಗೊಪ್ಪಿಸಿ ಸಾಗರೆಯ ಮಕ್ಕಳನ್ನೆತ್ತಿಕೊಂಡು ತಿರುಗಾಡುತ್ತಿರುವಳು. ಮಾವನೂ ಪ್ರಫುಲ್ಲೆಯ ಗುಣಗಳನ್ನು ಕ್ರಮೇಣ ತಿಳಿದುಕೊಂಡನು. ಕಡೆಗೆ ಪ್ರಫುಲ್ಲೆಯು ಮಾಡದ ಕೆಲಸವನ್ನವನೊಪ್ಪನು. ಅತ್ತೆ ಮಾವಂದಿರಿಬ್ಬರೂ ಪ್ರಫುಲ್ಲೆಯನ್ನು ಕೇಳದೆ ಆವ ಕೆಲಸವನ್ನೂ ಮಾಡರು. ಅವಳ ವಿವೇಚನೆಯಿಂದ ಸಂಸಾರವು ನಡೆಯುತ್ತಿದ್ದಿತು. ಬ್ರಹ್ಮಠಾಕೂರಾಣಿಯೂ ಅಡಿಗೆಮನೆಯ ಕಾರ್ಯವನ್ನೆಲ್ಲಾ ಪ್ರಫುಲ್ಲೆಗೊಪ್ಪಿಸಿದಳು. ಮುದುಕಿಯು ಅಡಿಗೆಯನ್ನು ಮಾಡಲಾರಳು. ಮೂರು ಮಂದಿ ಸೊಸೆಯರೂ ಅಡಿಗೆಯನ್ನು ಮಾಡುವರು. ಆದರೆ ಪ್ರಫುಲ್ಲೆಯು ಅಡಿಗೆಯ ಕೆಲಸಕ್ಕೆಂದು ಸೇರುತ್ತಿರಲಿಲ್ಲವೋ! ಅಂದಾರಿಗೂ ಊಟವು ಸರಿಯಾಗುತ್ತಿರಲಿಲ್ಲ. ಊಟದ ಸಮಯದಲ್ಲಿ ಪ್ರಫುಲ್ಲೆ

ಯಿಲ್ಲದಿದ್ದರಾರಿಗೂ ಹೊಟ್ಟೆಯು ತುಂಬದು. ಕಡೆಗೆ ನಯನೆಯೂ ಅವಳಿಗೆ ವಶಳಾದಳು. ಪ್ರಫುಲ್ಲೆಯ ಸಂಗಡ ಜಗಳವಾಡುವುದನ್ನು ಬಿಟ್ಟಳು. ಅವಳ ಭಯಕ್ಕೆ ನೆರೆಯವರ ಸಂಗಡ ಕಾದಾಡುವುದನ್ನು ಬಿಟ್ಟಳು. ಅವಳನ್ನು ಕೇಳದೆ ಆವ ಕೆಲಸವನ್ನೂ ಮಾಡಳು. ಪ್ರಫುಲ್ಲೆಯು ನಯನೆಯ ಮಕ್ಕಳನ್ನು ನೋಡಿ ಕೊಂಡಹಾಗೆ ತಾನು ನೋಡಿಕೊಳ್ಳಲಾರೆನೆಂದು ತಿಳಿದಳು. ನಯನೆಯು ತನ್ನ ಮಕ್ಕಳನ್ನೆಲ್ಲಾ ಪ್ರಫುಲ್ಲೆಯ ವಶಕ್ಕೊಪ್ಪಿಸಿ, ತಾನು ನಿಶ್ಚಿಂತೆಯಾಗಿದ್ದಳು. ಸಾಗರೆಯು ತಂದೆಯ ಮನೆಯಲ್ಲಿ ಹೆಚ್ಚು ದಿನ ನಿಲ್ಲಳು. ಹೋದರೆ ಕೂಡಲೇ ಹಿಂದಿರಿಗಿ ಬಂದುಬಿಡುವಳು. ಪ್ರಫುಲ್ಲೆಯ ಬಳಿ ಇದ್ದಾಗಿದ್ದ ಸುಖವು ಮತ್ತೆಲ್ಲಿಯೂ ಇರದೆಂದವಳಿಗೆ ಗೊತ್ತಾಯಿತು.

ಇತರರು ಹಾಗೆಲ್ಲಾ ಮಾಡಿದ್ದರೆ ಆಶ್ಚರ್ಯವೆ ಅಹುದು. ಪ್ರಫುಲ್ಲೆಯು ಮಾಡುವುದು ಆಶ್ಚರ್ಯವಲ್ಲ. ಏಕೆಂದರೆ, ಪ್ರಫುಲ್ಲೆಯು ನಿಷ್ಕಾಮ ಧರ್ಮವನ್ನು ಅಭ್ಯಾಸಮಾಡಿದ್ದವಳು. ಪ್ರಫುಲ್ಲೆಯು ಸಂಸಾರ ಮಾಡುವುದಕ್ಕೆ ಬಂದ ಬಳಿಕ ಯಥಾರ್ಥವಾದ ಸನ್ಯಾಸಿಯಾದಳು. ಅವಳಿಗಾವ ಆಶೆಯೂ ಇರಲಿಲ್ಲ—ಕೇವಲ ಮಾಡುವುದಕ್ಕೆ ಕೆಲಸವನ್ನು ಹುಡುಕುವಳು. ಆಶೆಯೆಂದರೆ ಸ್ವಂತ ಸುಖವನ್ನು ಹುಡುಕಿಕೊಳ್ಳುವುದಕ್ಕೆ ಹೆಸರು. ಕಾರ್ಯವನ್ನು ಹುಡುಕುವುದೆಂದರೆ ಇತರರ ಸುಖಕ್ಕೆ ಸಲವಾಗಿ ಕೆಲಸವನ್ನು ಮಾಡುವುದು. ಪ್ರಫುಲ್ಲೆಯು ನಿಷ್ಕಾಮ ಮನದವಳಾಗಿ ಕರ್ಮಪರಾಯಣೆಯಾಗಿದ್ದುದರಿಂದ ನಿಜವಾದ ಸನ್ಯಾಸಿನಿಯಾಗಿದ್ದಳು. ಅದುಕಾರಣ ಅವಳು ಮುಟ್ಟಿದುದು ಬಂಗಾರವಾಗುವುದು. ಪ್ರಫುಲ್ಲೆಯು ಭವಾಸಿತಾಕೂರನಿಂದ ಹರಿತಮಾಡಲ್ಪಟ್ಟ ಅಸ್ತ್ರವಾಗಿದ್ದವಳಾದ ಕಾರಣ ಸಂಸಾರದ ಗ್ರಂಥಿಯನ್ನು ಅನಾಯಾಸದಿಂದ ವಿಚ್ಛಿನ್ನಮಾಡಬಲ್ಲವಳಾಗಿದ್ದಳು. ಹರವಲ್ಲಭನ ಮನೆಯಲ್ಲಿ ಪ್ರಫುಲ್ಲೆಯು ಅಂತಹ ಹರಿತವಾದ ಅಸ್ತ್ರವಾಗಿದ್ದಳೆಂದಾರಿಗೂ ತಿಳಿಯದು. ಆಕೆಯು ಅದ್ವಿತೀಯನಾದ ಮಹಾಮಹೋಪಾಧ್ಯಾಯನ ಶಿಷ್ಯಳಾಗಿ ಮಹಾಪಂಡಿತೆಯಾಗಿದ್ದಳೆಂಬುದಾರಿಗೂ ತಿಳಿಯದು. ಅವಳಿಗೆ ಅಕ್ಷರ ಪರಿಚಯವಿದ್ದಿತೆಂತಲೂ ಗೊತ್ತಿಲ್ಲ—ಗೃಹಧರ್ಮದಲ್ಲಿ ವಿದ್ಯೆಯ ಪ್ರಕಾಶದ ಆವಶ್ಯಕತೆಯಿಲ್ಲ. ಗೃಹಧರ್ಮವನ್ನು ವಿದ್ಯಾವಂತೆಯಾದವಳೇ ಸರಿಯಾಗಿ ನಡೆಯಿಸುವಳು. ಆದರೆ ವಿದ್ಯೆಯನ್ನು ಪ್ರಕಾಶಮಾಡುವುದಕ್ಕದು ಸ್ಥಳವಲ್ಲ. ವಿದ್ಯೆಯನ್ನು ಪ್ರಕಾಶಮಾಡಕೂಡದ ಸ್ಥಳದಲ್ಲಿ ವಿದ್ಯಾಪ್ರಕಾಶವನ್ನು ಮಾಡುವವರನ್ನು ಕೇವಲ ಮೂರ್ಖರೆಂದು ಹೇಳಬೇಕು. ಅಂತಹ ಸಂಭವದಲ್ಲಾರ ವಿದ್ಯೆಯು ಪ್ರಕಾಶವಾಗದಿರುವುದೋ ಅವರೇ ಪಂಡಿತರು.

ಪ್ರಫುಲ್ಲೆಗಿದ್ದ ವಿವಾದವೆಲ್ಲಾ ಗಂಡನ ಸಂಗಡ. ಗಂಡನಿಗೆ, "ನಿಮಗೆ ನಾನೊಬ್ಬಳೇ ಹೆಂಡತಿಯಲ್ಲ. ನೀವು ನನ್ನವರು ಹೇಗೋ ಹಾಗೆ ಸಾಗರೆಗೂ ನಯನೆಗೂ ಸೇರಿದವರಾಗಿರುವಿರಿ. ನಾನೊಬ್ಬಳೇ ನಿಮ್ಮ ಭೋಗಕ್ಕೆ ಅರ್ಹಳಲ್ಲ.

ಹೆಂಗಸರಿಗೆ ಪತಿಯೇ ದೇವರು. ಅವರೇಕೆ ತನ್ನ ಸೇವೆಯನ್ನು ಮಾಡಕೂಡದು?' ಎಂದು ಹೇಳುವಳು. ವ್ರಜೇಶ್ವರನದನ್ನು ಕೇಳನು. ಅವನ ಹೃದಯವೆಲ್ಲಾ ಪ್ರಫುಲ್ಲಮಯವಾಗಿದ್ದಿತು. ಅವಳು, 'ನನ್ನನ್ನು ಪ್ರೀತಿಸುವಂತೆ ಅವರನ್ನೂ ಪ್ರೀತಿಸದಿದ್ದರೆ ತಮ್ಮ ಪ್ರೀತಿಯು ಪೂರ್ಣವಾಗದು, ಅವರೂ ನಾನೇ' ಎಂದು ಹೇಳುವಳು. ವ್ರಜೇಶ್ವರನು ಅದನ್ನು ತಿಳಿಯನು.

ಮನೆಯ ಆಸ್ತಿಯ ಆಡಳಿತಗಳನ್ನು ನಡೆಯಿಸುವುದರಲ್ಲಿ ಅವಳ ಬುದ್ಧಿಯ ಪ್ರಾಖರ್ಯದಿಂದ ಜಮೀನುದಾರಿಯ ಸಂಬಂಧವಾದ ಕಾರ್ಯಗಳೆಲ್ಲಾ ಅವಳ ಅಧಿಕಾರಕ್ಕೆ ಬಂದವು. ಸೊಸೆಯ ಅಭಿಪ್ರಾಯವನ್ನು ಕೇಳದೆ ಮಾವನಾವ ಕೆಲಸವನ್ನೂ ಮಾಡನು. ಅವಳ ಪರಾಮರ್ಶೆಯಿಂದ ಆಸ್ತಿಯು ಹೆಚ್ಚಾಗಿ ಐಶ್ವರ್ಯವು ವೃದ್ಧಿಗೊಂಡಿತು. ಕಡೆಗೆ ಧನ ಜನ ಮಾನ ಮರ್ಯಾದೆ ಮುಂತಾದ ಸರ್ವ ಸುಖವೂ ವೃದ್ಧಿಗೊಂಡು, ಯಥಾಕಾಲದಲ್ಲಿ ಹರವಲ್ಲಭನಿಗೆ ಪರಲೋಕ ಪ್ರಾಪ್ತಿಯುಂಟಾಯಿತು.

ಆಸ್ತಿಯೆಲ್ಲಾ ವ್ರಜೇಶ್ವರನಿಗೆ ಬಂತು. ಪ್ರಫುಲ್ಲಳ ವಿವೇಚನೆಯಿಂದ ಹೊಸ ಜಮೀನುದಾರಿಗಳು ಬಂದು ಆಸ್ತಿಯು ಒಂದಕ್ಕೆ ನಾಲ್ಕರಷ್ಟು ಆಗಿ ಕೈಯಲ್ಲಿ ನಗದು ಹಣ ಬಹಳ ಸೇರಿತು. ಆಗ ಪ್ರಫುಲ್ಲಳು ನನ್ನ ಐವತ್ತು ಸಾವಿರ ರೂಪಾಯಿ ಸಾಲವನ್ನು ತೀರಿಸಬೇಕೆಂದು ಗಂಡನನ್ನು ಕೇಳಿದಳು.

ವ್ರಜ—ನೀನು ಹಣ ತೆಗೆದುಕೊಂಡು ಏನುಮಾಡುವೆ ?

ಪ್ರಫುಲ್ಲ—ನಾನೇನೂ ಮಾಡುವುದಿಲ್ಲ. ಆದರೆ ಹಣವು ನನ್ನದಲ್ಲ. ಶ್ರೀ ಕೃಷ್ಣನಿಗೆ ಸೇರಿದುದು. ಬಡವರದು, ಅವರಿಗೆ ಕೊಡಬೇಕು.

ವ್ರಜ—ಅವರಿಗೆ ಕೊಡುವುದು ಹೇಗೆ ?

ಪ್ರಫುಲ್ಲ—ಐವತ್ತು ಸಾವಿರ ರೂಪಾಯಿಗೆ ಒಂದು ಅತಿಥಿಶಾಲೆಯನ್ನು ಕಟ್ಟಿಸಬೇಕು.

ವ್ರಜೇಶ್ವರನು ಹಾಗೆಯೇ ಒಂದು ಅತಿಥಿಶಾಲೆಯನ್ನು ಕಟ್ಟಿಸಿ ಅದರಲ್ಲಿ ಒಂದು ಅನ್ನಪೂರ್ಣಾ ಪ್ರತಿಮೆಯನ್ನು ಸ್ಥಾಪಿಸಿ ಅತಿಥಿಶಾಲೆಗೆ 'ದೇವೀನಿವಾಸ' ವೆಂದು ಹೆಸರಿಟ್ಟನು.

ಯಥಾಕಾಲದಲ್ಲಿ ಪುತ್ರ ಪೌತ್ರರಿಂದ ಸುಖವಾಗಿದ್ದಾಗ ಪ್ರಫುಲ್ಲಳು ಸ್ವರ್ಗಾ ರೋಹಣ ಮಾಡಿದಳು. ಆಗ ದೇಶದ ಜನರೆಲ್ಲಾ ನಾವುಮಾತ್ರ ಹೀನರಾದೆ ವೆಂದೆಂದು ಕೊಂಡರು.

ರಂಗರಾಜ, ನಿಶಿ ದಿವಾ ಇವರು ದೇವೀಗಡದಲ್ಲಿ ಶ್ರೀ ಕೃಷ್ಣನ ಪ್ರಸಾದದಿಂದ ಜೀವನ ನಿರ್ವಾಹವನ್ನು ಮಾಡುತಲಿದ್ದವರಿಗೆ ಕಡೆಗೆ ಪರಮಪದಪ್ರಾಪ್ತಿಯುಂಟಾ ಯಿತು. ಭವಾನಿಠಾಕೂರನಿಗೆ ಆ ಅದೃಷ್ಟವಿರಲಿಲ್ಲ.

ಇಂಗ್ಲೀಷರು ರಾಜ್ಯಶಾಸನ ಭಾರವನ್ನು ವಹಿಸಿದರು. ರಾಜ್ಯವು ಸುಶಾಸಿತ

ವಾಯಿತು. ಅದು ಕಾರಣ ಭವಾನಿಠಾಕೂರನಿಗೆ ಕೆಲಸ ತಪ್ಪಿತು. ದುಷ್ಟರ ದಮನ ವನ್ನು ರಾಜನೇ ಮಾಡಲಾರಂಭಿಸಿದನು. ಭವಾನಿಠಾಕೂರನು ಡಕಾಯಿತಿ ಮಾಡು ವುದನ್ನು ನಿಲ್ಲಿಸಿಬಿಟ್ಟನು.

ಆಗ ಭವಾನಿಠಾಕೂರನು ತನಗೆ ಪ್ರಾಯಶ್ಚಿತ್ತವು ಅವಶ್ಯಕವೆಂದು ತಿಳಿದು ಕೊಂಡನು. ಈ ಪ್ರಕಾರ ಭಾವಿಸಿಕೊಂಡು ಆತನು ಇಂಗ್ಲೀಷರ ಕೈಗೆ ಸಿಕ್ಕಿ ಡಕಾಯಿತಿಗಳನ್ನೆಲ್ಲಾ ನಾನೇ ಮಾಡಿದೆ. ನನಗೆ ಶಿಕ್ಷೆಯಾಗಬೇಕೆಂದು ಕೇಳಿ ಕೊಂಡನು. ಇಂಗ್ಲೀಷರು ಯಾವಜ್ಜೀವವೂ ದ್ವೀಪಾಂತರವಾಸದಲ್ಲಿರಬೇಕೆಂದು ಅಪ್ಪಣೆಮಾಡಿದ ಪ್ರಕಾರ ಆತನು ಪ್ರಫುಲ್ಲಚಿತ್ತನಾಗಿ ದ್ವೀಪಾಂತರಕ್ಕೆ ಹೊರಟು ಹೋದನು.

---

ಪ್ರಫುಲ್ಲ ! ಈಗ ಬಾ ! ಒಂದು ಸಲ ಬಂದು ಈ ಲೋಕದಲ್ಲಿ ಕಾಣಿಸಿಕೊ. ನಾವು ನಿನ್ನನ್ನು ನೋಡುತ್ತೇವೆ. ಒಂದು ಸಲ ಈ ಸಮಾಜದ ಇದಿರಿಗೆ ಬಂದು ನಿಂತು, ನಾನು ಹೊಸಬಳಲ್ಲ ; ನಾನು ಪುರಾತನಳು ; ನಾನು ವಾಕ್ಯಸ್ವರೂಪಳು ; ಎಷ್ಟೋ ತಡವೆ ಬಂದಿದ್ದೇನೆ ; ನೀವು ನನ್ನನ್ನು ಮರೆತಿದ್ದೀರಿ ; ಆದುದರಿಂದ ಪುನಃ ಬಂದಿದ್ದೇನೆ ; ಏತಕ್ಕೆಂದರೆ—

" ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ |
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ||"

ಎಂದು ಹೇಳು. ಪ್ರಕೃತ ಕಾಲದ ವಿದ್ಯಾಭ್ಯಾಸವೆನ್ನುವುದು ಸ್ತ್ರೀಪುರುಷರಿಬ್ಬರನ್ನೂ ವಿಪರೀತಾವಸ್ಥೆಯಲ್ಲಿ ತಂದುಬಿಟ್ಟಿದೆ. ಜನರಿಗೆ ಕರ್ಮಪರಾಯಣತೆಯಲ್ಲಿ ಬುದ್ಧಿಯು ಲೋಪವಾಗಿಹೋಗಿದೆ. ಸನಾತನವಾದ, ನಿಷ್ಕಾಮವಾದ ಧರ್ಮ ವೆನ್ನುವುದು ಅಶ್ಲೀಲಾಚರಣೆಗಳೇ ಮುಂತಾದ ಉತ್ಪಾತಕವಾದ ಉಪಾತ್ಯಯಗಳು ಹೆಚ್ಚಿಹೋಗಿ ಅಂತರ್ಹಿತವಾಗಿಹೋಗಿದೆ. ಆದುದರಿಂದ ಪ್ರಫುಲ್ಲ ! ಮತ್ತೊಂದು ತಡವೆ ಈ ಸಮಾಜದ ಇದಿರಿಗೆ ಬಂದು ನಿಂತು ಹೇಳು—

" ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ |
ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ||"

— ಸಂಪೂರ್ಣ —



ಡೆಕ್ಕನ್ ಹೆರಾಲ್ಡ್ ಪ್ರೆಸ್, ೧೬, ಮಹಾತ್ಮಾ ಗಾಂಧೀ ರಸ್ತೆ, ಬೆಂಗಳೂರು-೧.

ಗ್ರಂಥಕರ್ತರಾದ
ಶ್ರೀಮಾನ್ ಬಿ. ವೆಂಕಟಾಚಾರ್ಯ
ಮಾರಾಟಕ್ಕೆ ಸಿದ್ಧವಾಗಿರುತ್ತವೆ.

## ಸುಪ್ರಸಿದ್ಧ ಕಾದಂಬರಿ

●

ಆನಂದಮಠ (ಸಿದ್ಧವಾಗಿದೆ)
ಅಮೃತಪುಲಿನ ,,
ಸಾಧನೆ ,,

●

ವಿವರಗಳಿಗೆ ಬರೆಯಿರಿ

ಡಾ॥ ಎ. ಆರ್. ಎ.
೨೬, ಗಾಂಧಿ ಬಜಾರ್, ಬೆಂಗಳೂರು